ಪ್ರತಿಭಾ ಗ್ರಂಥಮಾಲೆ, ಧಾರವಾಡ. ಹನ್ನೊಂದನೆಯ ವರುಷದ ಮೂರನೆಯ ಕಿರಣ.

# ಕಣ್ಣೀರಿನ ಕಡಲು

## ಸಾಮಾಜಿಕ ಕಾದಂಬರಿ

ಕೊರಟಿ ಶ್ರೀನಿವಾಸರಾವ್

೧೯೫೩ ನವೆಂಬರ) ( ಎರಡು ರೂಪಾಯಿ

# ಅರ್ಪಣೆ



ತಾರುಣ್ಯದ ಹೊಸಲಿನಲ್ಲೇ
ಆತ್ಮಹತ್ಯ ಮಾಡಿಕೊಂಡ
ನಿರ್ಭಾಗ್ಯ ಸೋದರಿ
**ಸೀತಮ್ಮನಿಗೆ**

# ಲೇಖಕನ ಮಾತು.

**'ಕಣ್ಣೀರಿನ ಕಡಲು'**— ಅಚ್ಚಾಗುತ್ತಿರುವ ನನ್ನ ಮೂರನೆಯ ಕಾದಂಬರಿ. ಇದನ್ನು ಬರೆದು ಮೂರು ವರ್ಷಗಳಾದರೂ ಕೆಲವು ಕಾರಣಗಳಿಂದ ಇದುವರೆಗೆ ಪ್ರಕಟವಾಗದೆ ಉಳಿದಿತ್ತು. ಈಗ ಪ್ರತಿಭಾ ಸಾಹಿತ್ಯ ಮಾಲೆಯ ಸಂಪಾದಕರ ಪ್ರೋತ್ಸಾಹದಿಂದ ಬೆಳಕಿಗೆ ಬರುತ್ತಿದೆ. ಅವರ ಪ್ರೋತ್ಸಾಹಕ್ಕೆ ನಾನು ತುಂಬಾ ಆಭಾರಿಯಾಗಿದ್ದೇನೆ.

ಈ ಕಾದಂಬರಿಯ ಬಗೆಗೆ ನನಗೆ ವಿಚಿತ್ರವಾದ ಮೋಹವಿದೆ. ಈ ಕಾದಂಬರಿ ನನ್ನ ಹುಟ್ಟಿದೂರಾದ ಕೊರಟಿಗೆ ಸಂಬಂಧಿಸಿದೆ ಎಂಬ ಕಾರಣದಿಂದ ಅಲ್ಲ. ಆದರೆ ಈ ಕಾದಂಬರಿಯನ್ನು ಬರೆದು ಮುಗಿಸಿ, ಇಲ್ಲಿನ ಕಥಾನಕದ ಜಾಡು ಹಿಡಿದು ಕಲ್ಪನಾ ವಿಲಾಸದಲ್ಲಿ ತೊಡಗಿರುವಾಗ ನನಗೆ ತಿಳಿಯದಂತೆ ತಾನಾಗಿ ನಾಲ್ಕಾರು ಕಾದಂಬರಿಗಳು ರೂಪಗೊಂಡವು. ಅವುಗಳೆಲ್ಲದರಲ್ಲೂ ಶ್ಯಾಮಣ್ಣನವರ ಸಂಸಾರದಕಥೆ ಸಡಿಲವಾಗಿ ಬಂದಿದ್ದರೂ, ಅವುಗಳೊಂದೊಂದೂ ಸ್ವತಂತ್ರ ಕಾದಂಬರಿ ಎನಿಸುವ ಮಟ್ಟಿಗೆ ವಿಷಯ ವೈವಿಧ್ಯತೆಯಿಂದ ಕೂಡಿದೆ.

ಈ ಎಲ್ಲ ಕಾದಂಬರಿಗಳ ವಸ್ತುವನ್ನು ಒಂದು ಮಾತಿನಲ್ಲಿ ಸ್ಥೂಲವಾಗಿ ಹೇಳಬಹುದಾದರೆ—ಇಂದಿನ ಸಮಾಜದಲ್ಲಿ ಹೆಣ್ಣಿನ ಸ್ಥಾನ. ಹೆಣ್ಣಿನಸಮಾಜ ಜೀವನದ ಉತ್ಕರ್ಷಕ್ಕೆ ಸಂಬಂಧಿಸಿದ ಸ್ತ್ರೀವಿದ್ಯಾಭ್ಯಾಸ, ವಿವಾಹದ ಸಮಸ್ಯೆಗಳು, ದಾಂಪತ್ಯ ಜೀವನದ ಸಮಸ್ಯೆಗಳು ಈ ಕಾದಂಬರಿಗಳಿಗೆ ವಸ್ತುವಾಗಿದೆ. ಪ್ರಸ್ತುತ ಕಾದಂಬರಿಯಲ್ಲಿ ಗಂಡನ ಕಿರುಕುಳ ದಬ್ಬಾಳಿಕೆಯನ್ನು ಸಹಿಸುವಷ್ಟು ದಿನ ಸಹಿಸಿ, ಕಡೆಗೆ ರೋಸಿ ಹೋಗಿ, ಗಂಡನ ಎದುರು ನಿಂತು ವಿವಾಹವಿಚ್ಛೇದನೆಯನ್ನು ಪಡೆದು ಮತ್ತೆ ಶಾಸ್ತ್ರೋಕ್ತವಾಗಿ ಮದುವೆಯಾಗಿ ಆದರ್ಶ ಗೃಹಿಣಿಯಾಗಿ ಬಾಳಲೆಳೆಸಿದ ಹೆಣ್ಣಿನ ಚಿತ್ರವಿದೆ. ಇಲ್ಲಿನ ಕಥಾನಾಯಿಕಿ, ತನ್ನ ಗಂಡನೊಡನೆ ನಡೆದುಕೊಂಡ ರೀತಿ ಸರಿಯೋ ತಪ್ಪೋ ಎನ್ನುವುದಕ್ಕಿಂತಲೂ. ಹೆಣ್ಣಿನ ಸಹನೆ ಮೀರಿತೆಂದರೆ ಅವಳು ಯಾವ ಸಾಹಸಕ್ಕೂ ಸಿದ್ಧಳಿರುವಳು. ಕೈಹಿಡಿದ ಗಂಡನನ್ನು—ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನು ತೊರೆಯಲು ಹಿಂದೆಗೆಯುವುದಿಲ್ಲ. ಹೆಣ್ಣು ಮಹಾದೇವಿ ಎಂತೋ ಸಮಯ ಬಂದರೆ ಅಂತೇ ಮಹಾಕಾಳಿಯೂ ಆಗಬಲ್ಲಳು ಎನ್ನುವ ವಾಸ್ತವ ಸತ್ಯವನ್ನು ಓದುಗರ ಮುಂದೆ

ಇಡುವುದೇ ಈ ಕಾದಂಬರಿಯ ಉದ್ದೇಶವಾಗಿದೆ. ಹೆಣ್ಣನ್ನು ಕಾಲುಕಸವಾಗಿ ಮಾಡಿದ ಸಮಾಜವೆಂದಿಗೂ ಏಳಿಗೆಯಾಗದು. ಎಲ್ಲಿ ಸ್ತ್ರೀಯರು ಪೂಜಿಸಲ್ಪಡುವರೋ ಅಲ್ಲಿ ದೇವತೆಗಳೂ ನಲಿಯುವರು ಎನ್ನುವ ಆರ್ಯೋಕ್ತಿ ನಮ್ಮ ಆದರ್ಶವಾಗಬೇಕೆಂಬುದೇ ಲೇಖಕನ ಆಶಯ. ಈ ಪ್ರಯತ್ನದಲ್ಲಿ ಹಚ್ಚಿ ಬಿಟ್ಟ ಆಕಾಶದೀಪ ಈ ಪುಟ್ಟ ಕಾದಂಬರಿ ಇದು ಎಷ್ಟು ಸಫಲವಾಗಿದೆಯೋ ಅದನ್ನು ಓದುಗರೇ ನಿರ್ಣಯಿಸಬೇಕು.

ಇದರಲ್ಲಿ ವಿವಾಹ ವಿಚ್ಛೇದನೆಯ ವಿಷಯ ಪ್ರಾಸಂಗಿಕವಾಗಿ ಬಂದಿದೆ. ವಿವಾಹ ವಿಚ್ಛೇದನೆ ಎಂದ ಮಾತ್ರಕ್ಕೆ ಮೂಗು ಮುರಿಯುವ ಕಾಲ ಒಂದಿತ್ತು. ಈಗ ಹಿಂದೂ ಕೋಡ್ ಮಸೂದೆ ಲೋಕಸಭೆಯ ತನಕ ಹೋದ ಮೇಲೆ ಜನ ಈ ಬಗ್ಗೆ ಎಚ್ಚತ್ತಿದ್ದಾರೆ. ಕಣ್ಣು ತೆರೆದು ವಿಚಾರಮಾಡಲೆಳೆಸಿದ್ದಾರೆ.

ವಿವಾಹ ವಿಚ್ಛೇದನೆ ನಮ್ಮ ಜನಜೀವನಕ್ಕೆ—ಸಮಾಜ ವ್ಯವಸ್ಥೆಗೆ ಬೇಕೇ ಬೇಡವೇ ಎನ್ನುವುದು ಚರ್ಚಾಸ್ಪದ ವಿಷಯ. ವಿವಾಹ ವಿಚ್ಛೇದನೆ ನಮ್ಮ ಧರ್ಮ, ಸಂಸ್ಕೃತಿ, ಆಚಾರ ವಿಚಾರಗಳಿಗೆ ಸರಿಹೋಗುವುದಿಲ್ಲವೆಂದೂ ಅಂಧರಾಗಿ ನಾವು ಪಾಶ್ಚಾತ್ಯರನ್ನು ಅನುಕರಣೆ ಮಾಡಿದರೆ ಪತನಹೇತುವಾಗುವುದೆಂದೂ ವಿವಾಹ ವಿಚ್ಛೇದನೆಯ ವಿರೋಧಿಗಳು ವಾದಿಸುತ್ತಾರೆ. ಕೆಲವು ಮಂದಿ ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯವೂ ಇದಕ್ಕೆ ಪೂರಕವಾಗಿದೆ. ವಿವಾಹವಿಚ್ಛೇದನೆಯಿಂದ ಗೃಹಶಾಂತಿಗೆ ಭಂಗ ಬರುವುದೆಂದೂ, ಸುಖಸಂಸಾರದಲ್ಲಿ ಇರಬೇಕಾದ ಅನೇಕ ಮಧುರ ಭಾವನೆಗಳು ನಾಶವಾಗುವುದೆಂದೂ ಅವರು ಅಭಿಪ್ರಾಯ ಪಡುತ್ತಾರೆ. ವಿವಾಹ ವಿಚ್ಛೇದನೆಯಿಂದ ತಾಯಿಮಕ್ಕಳ ನಡುವೆ ಇರಬೇಕಾದ ಮಧುರ ಸಂಬಂಧವಿಲ್ಲದೆ ಮಕ್ಕಳ ಮುಗ್ಧ ಮನಸ್ಸಿನ ಮೇಲೆ ದುಷ್ಪರಿಣಾಮ ಉಂಟಾಗುವುದೆಂದು ಸಿದ್ಧಪಡಿಸಿ ತೋರಿಸಿದ್ದಾರೆ.

ಆದರೆ ವಿವಾಹ ವಿಚ್ಛೇದನೆಯ ಬೆಂಬಲಿಗರು ಹೇಳುವ ಮಾತೂ ಅಷ್ಟೇ ತರ್ಕಬದ್ಧವಾಗಿದೆ. ಒಲವಿಲ್ಲದ ದಾಂಪತ್ಯ ಜೀವನದಲ್ಲಿ ಯಾರಿಗೂ ಸುಖವಿರದು. ಗಂಡಹೆಂಡಿರು ತಾವು ಒಟ್ಟಿಗೆ ಸಂಸಾರ ಮಾಡಿಕೊಂಡಿರಲು ಸಾಧ್ಯವಿಲ್ಲವೆಂದು ತಿಳಿದಾಗ ಅವರಿಗೆ ಮದುವೆಯಿಂದ ಬಿಡುಗಡೆ ಹೊಂದುವ ಅವಕಾಶವಿದ್ದರೆ ಎಲ್ಲರಿಗೂ ಕ್ಷೇಮ. ಮದುವೆ ಎಷ್ಟೇ ಪವಿತ್ರ ಸಂಬಂಧವಾಗಿ

ದ್ದರೂ, ಅದು ಒಂದು ಬಗೆಯ ಒಡಂಬಡಿಕೆಯೇ ಆಗಿರುವುದರಿಂದ, ಈ ಒಡಂಬಡಿಕೆಯಿಂದ ಹೊರಗೆ ಬರುವ ಸ್ವತಂತ್ರ ವ್ಯಕ್ತಿಗಳಿಗೆ ಇರಬೇಕಾದ್ದು ನ್ಯಾಯವಾಗಿದೆ—ಎಂದು ಅವರು ವಾದಿಸುತ್ತಾರೆ. ತಮ್ಮ ವಾದವನ್ನು ಪುಷ್ಟೀಕರಿಸಲು ಹಿಂದೂ ಧರ್ಮದ ಸಾರಸರ್ವಸ್ವವೆನಿಸಿದ ವೇದ, ಸ್ಮೃತಿ, ಪುರಾಣಗಳ ನೆರವನ್ನು ಪಡೆಯುತ್ತಾರೆ. ಮನುಸ್ಮೃತಿ, ಯಾಜ್ಞವಲ್ಕ್ಯಸ್ಮೃತಿ, ನಾರದಸ್ಮೃತಿ, ಕಾಸ್ಯಪಸ್ಮೃತಿ, ಅಗಸ್ತ್ಯಸ್ಮೃತಿ. ವೈಶಂಪಾಯನ ಸ್ಮೃತಿಗಳನ್ನು ಉದಹರಿಸುತ್ತಾರೆ. ಪರಾಶರಸ್ಮೃತಿಯಲ್ಲಿ ಬರುವ

" ನಷ್ಟೇಮೃತೇ ಪ್ರವಜಿತೇ ಕ್ಲೀಬೇಚ ಪತಿತೇ ಪತೌ ।
ಪಂಚತ್ಯಾಪತ್ಸು ನಾರೀಣಾಂ ಪತಿರನ್ಯೋ ವಿಧೀಯತೇ ॥ "

( ಗಂಡನು ಕಳೆದು ಹೋಗಿದ್ದರೆ, ಸತ್ತುಹೋಗಿದ್ದರೆ, ಸನ್ಯಾಸವನ್ನು ತೆಗೆದುಕೊಂಡಿದ್ದರೆ, ನಪುಂಸಕನಾಗಿದ್ದರೆ, ಪತಿತನಾಗಿದ್ದರೆ—ಈ ಐದು ಕಷ್ಟ ಸಂದರ್ಭದಲ್ಲಿ ಸ್ತ್ರೀಯು ಬೇರೆ ಪತಿಯನ್ನು ವಿಧಿಪೂರ್ವಕವಾಗಿ ವರಿಸಬಹುದು)

ಈ ಶ್ಲೋಕದಿಂದ ಸ್ಪಷ್ಟಪಡುವುದೇನಂದರೆ, ಹಿಂದಿನ ಕಾಲದಿಂದಲೂ ಆರ್ಯ ಸಮಾಜದಲ್ಲಿ ವಿವಾಹವಿಚ್ಛೇದನೆ, ವಿಧವಾವಿವಾಹ, ನಿಯೋಗ ಪದ್ಧತಿಗಳು ರೂಢಿಯಲ್ಲಿ ಇದ್ದವು. ಕಾಲಕ್ರಮದಲ್ಲಿ ಇವು ಮಾರ್ಪಾಡಾಗುತ್ತ ನಡೆದು, ಕಡೆಗೆ ನಿಷಿದ್ಧ, ಪಾಪವೆನಿಸುವ ಮಟ್ಟಿಗೆ ಸಮಾಜದ ವ್ಯವಸ್ಥೆ ಬದಲಾಯಿತು. ಇಂತಿರುವಲ್ಲಿ ವಿವಾಹವಿಚ್ಛೇದನೆ ನಮ್ಮ ಸಂಸ್ಕೃತಿ, ಮತಧರ್ಮಕ್ಕೆ ಹೊಸದೆನ್ನುವ ಮಾತೇ ಇಲ್ಲ. ಹಿಂದೆ ಇದ್ದ ಪದ್ಧತಿಯನ್ನು ಇಂದಿನ ಸಮಾಜದ ವ್ಯವಸ್ಥೆಗೆ ಸರಿಹೋಗುವಂತೆ ಅಳವಡಿಸಿಕೊಳ್ಳುವುದರಲ್ಲಿ ಯಾವ ಪಾಪವಿಲ್ಲವೆಂದು ಅವರ ವಾದ.

ಈ ಬಗೆಯ ವಾದವಿವಾದಗಳಲ್ಲಿ ಯಾವುದು ಸರಿ, ಯಾವುದು ತಪ್ಪು, ಎಂದು ನಿರ್ಣಯಿಸುವುದು ಕಷ್ಟ. ರಾಷ್ಟ್ರಕವಿ ಗೋವಿಂದ ಪೈ ಅವರು ' ಸೋದರಿ ' ಪತ್ರಿಕೆಗೆ ಬರೆದ ಲೇಖನದಲ್ಲಿ ಹೇಳಿದಂತೆ, ವಿವಾಹವಿಚ್ಛೇದನೆ ಕಾನೂನುಬದ್ಧವಾಗಿದ್ದು, ಕೇವಲ ವಿಷಮ ಸನ್ನಿವೇಶಗಳಲ್ಲಿ ಮಾತ್ರ ಅದರ ಉಪಯೋಗಪಡೆಯುವಂತೆ ಆಗಬೇಕು. ವಿವಾಹವಿಚ್ಛೇದನೆ ದಾಂಪತ್ಯ ಜೀವನದ ಸಫಲತೆ, ವಿಫಲತೆಗಳನ್ನು ಅಳೆಯುವ ಮಾನದಂಡವಾಗಬೇಕು.

ಸಮಾಜ ವ್ಯವಸ್ಥೆಯಲ್ಲಿ ವಿವಾಹವಿಚ್ಛೇದನೆಗೆ ಅವಕಾಶವಿದ್ದರೂ ಅದನ್ನು ಬಯಸದೆ, ಕಡೆತನಕ ನಿಲ್ಲುವ ದಾಂಪತ್ಯವೇ ನಿಜವಾದ ದಾಂಪತ್ಯ—ಅನುಕೂಲ ದಾಂಪತ್ಯ. ಹೀಗೆ ವಿವಾಹವಿಚ್ಛೇದನೆ ವೈದ್ಯರು ಉಪಯೋಗಿಸುವ ಶಸ್ತ್ರದಂತೆ ಸಮಾಜದ ಸುಭದ್ರತೆಗೆ ಸುಖ ಸಂತೋಷಗಳಿಗೆ ನೆರವಾಗುವಂತೆ ಬಯಸುತ್ತಾರೆ. ಇದು ವಿಚಾರಾರ್ಹವಾದ ಅಭಿಪ್ರಾಯ.

ಈ ಕಾದಂಬರಿಯಿಂದ ಓದುಗರ ಮನಸ್ಸಿನಲ್ಲಿ ವಿಚಾರದ ಸುಳಿಯುಂಟಾದರೆ ಲೇಖಕನ ಶ್ರಮ ಸಾರ್ಥಕವಾದಂತೆ. ಈ ಕಾದಂಬರಿಯ ಹಸ್ತಪ್ರತಿಯನ್ನು ಮುದ್ದಾಗಿ ಬರೆದುಕೊಟ್ಟ ಗೆಳೆಯ ಕೆ. ಎಸ್. ನಾರಾಯಣಸ್ವಾಮಿ ಅವರಿಗೂ, ಇದನ್ನು ಅಷ್ಟೇ ಮುದ್ದಾಗಿ ಅಚ್ಚು ಮಾಡಿರುವ ಪ್ರತಿಭಾ ಗ್ರಂಥ ಮಾಲೆಯ ಸಂಚಾಲಕರಿಗೂ ನನ್ನ ಅನಂತ ವಂದನೆಗಳು.

ಇತಿ,

೧—೯—೫೨
ಬೆಂಗಳೂರು

ಶ್ರೀನಿವಾಸರಾವ್ ಕೊರಟಿ

# ಕಣ್ಣೀರಿನ ಕಡಲು

## ೧

ವೈಶಾಖಮಾಸದ ಕಾರ್ದಿಂಗಳಿನ ಗಾಢಮೌನವನ್ನು ಭೇಧಿಸಿಕೊಂಡು ಬ್ಯಾಂಡಿನವರ ಬೊಬ್ಬೆ ಅವ್ಯಾಹತವಾಗಿ ಕೇಳತೊಡಗಿತು. ಊರಿನ ಸೋಮಾರಿ ಜನ ಹಾಸಿಗೆ ಬಿಟ್ಟೇಳದೆ 'ಐನೋರ ಮನೇಲಿ ದಿಬ್ಬಣ ಹೊರಟಿದೆ' ಎಂದುಕೊಂಡು ಮುಸುಕೆಳೆದು ಮಲಗಿದರು. ಅದು ಮಧ್ಯರಾತ್ರಿಯ ಸಮಯ. ಭೂತಪ್ರೇತಗಳು ಸಂಚಾರ ಹೊರಡುವ ಹೊತ್ತು. ಇಂತಹ ಹೊತ್ತಿನಲ್ಲಿ ಶ್ಯಾಮಣ್ಣನವರ ಮನೆಯಲ್ಲಿ ಬೀಗರನ್ನು ಎದುರುಗೊಳ್ಳುವ ಕೆಲಸ ನಡೆದಿತ್ತು. ಬೀಗರು ಸಂಜೆ ಆರಕ್ಕೆ ಬರಬೇಕಾಗಿದ್ದವರು, ಬಸ್ಸು ದಾರಿಯಲ್ಲಿ ಕೆಟ್ಟುಹೋಗಿ, ನಡುರಾತ್ರಿಯಲ್ಲಿ ಊರು ಸೇರಿದ್ದರು. ಹೆಣ್ಣಿನ ಚಿಕ್ಕಪ್ಪ-ಶಾನುಭೋಗ್ ಶ್ಯಾಮಣ್ಣನವರು ಸಂಜೆಯೆಲ್ಲಾ ಬೀಗರಿಗಾಗಿ ಕಾದು ಬೇಸತ್ತಿದ್ದರು. ಬೀಗರು ಬರುವತನಕ ಅವರಿಗೆ ಜೀವದಲ್ಲಿ ಜೀವವಿಲ್ಲ. 'ಯಾಕೋ ಬರಲಿಲ್ಲ. ಯಾಕೋ ಬರಲಿಲ್ಲ' ಎಂದುಕೊಂಡು ಕೊರಟೆಯಿಂದ ನಂದಗುಡಿಗೆ ನಾಲ್ಕೈದು ಬಾರಿ ಅಂಡಲೆದು ಸೋತಿದ್ದರು. ಅತಿಪ್ರಯಾಸದಿಂದ ಗೊತ್ತಾಗಿದ್ದ ಅಣ್ಣನಮಗಳ ಮದುವೆ ನಿಂತು ಹೋಗುವ ಹೊತ್ತು ಬಂತೇ ಎಂದು ತಲೆಯ ಮೇಲೆ ಕೈಹೊತ್ತು ಕುಳಿತಿದ್ದಾಗ ಬೀಗರನ್ನು ಕರೆತರಲು ನಂದಗುಡಿಗೆ ಹೋಗಿದ್ದ ಕಮಾನುಗಾಡಿ ಊರಿಗೆ ಬಂತು. ಎತ್ತಿನ ಕೊರಳಿನ ಕಿರುಗಂಟೆಶಬ್ದ, ನಾಯಿಗಳ ಬೊಗಳುವಿಕೆಯನ್ನು ದೂರದಿಂದಲೇ ಆಲಿಸಿ, ಬೀಗರೇ ಇರಬೇಕೆಂದು ಊಹಿಸಿ ಮನೆಯ ಮುಂದಿನ 'ರಚ್ಚೆಕಟ್ಟೆ'ಯಿಂದ ಇಳಿದಿದ್ದರು. ಅವರ ಊಹೆ ನಿಜವಾಯಿತು. ಬೀಗರು ಬಂದೇ ಬಂದರು. ಆದರೆ ಕೊಂಚ ವೇಳೆ ಮೀರಿತು-ಅಷ್ಟೇ.

ಶ್ಯಾಮಣ್ಣನವರು, ಹಗಲೆಲ್ಲಾ ಮದುವೆಯ ಕೆಲಸಗಳಲ್ಲಿ ದುಡಿದು ಆಯಾಸಗೊಂಡಿದ್ದ ಹೆಂಗಸರನ್ನೂ, ನೆಂಟರಿಷ್ಟರನ್ನೂ ಲಗುಬಗೆಯಿಂದ

ಎಬ್ಬಿಸಿ ಮಂಗಳದ್ರವ್ಯ, ಇತ್ಯಾದಿಗಳನ್ನು ಸಿದ್ಧಪಡಿಸಿಕೊಳ್ಳಲು ಹೇಳಿ, ಬ್ಯಾಂಡಿನವರನ್ನು ಎಚ್ಚರಿಸಲು ಬಂದರು. ಶ್ಯಾಮಣ್ಣನವರು ತಮ್ಮ ಅಣ್ಣನ ಒಬ್ಬಳೇ ಮಗಳ ಲಗ್ನವನ್ನು ಅದ್ದೂರಿಯಿಂದ ಮಾಡಬೇಕೆಂದು, ಮದುವೆಗೆ ಹಳ್ಳಿಯ ಓಲಗ ಸಾಲದೆಂದು ' ಒಂಡಿಗನಾಳ್ ಕ್ರಾಸ್‌ರೋಡ್ ' ಬಳಿ ಬೀಡುಬಿಟ್ಟಿದ್ದ ಸರ್ಕಸ್‌ಕಂಪನಿಯೊಂದರ ಬ್ಯಾಂಡಿನವರನ್ನೇ ಕರೆಸಿದ್ದರು. ಬ್ಯಾಂಡಿನವರು ಜರ್ಬಾದ ಸರ್ಕಸ್ ಉಡುಗೆತೊಟ್ಟು, ಬೀಗರನ್ನು ಸ್ವಾಗತಿಸಲು ಸಂಜೆಯೆಲ್ಲಾ ಕಾದು, ಕಾದು, ಬೇಸತ್ತು ಅಂಗಳದಲ್ಲಿಯೇ ಹಾಸಿದ್ದ ಜಮಖಾನೆಯ ಮೇಲೆ ವಾದ್ಯಗಳನ್ನು ಒರಗಿಸಿ ಅಲ್ಲೇ ಅರೆನಿದ್ರೆಯಲ್ಲಿ ಉರುಳಿದ್ದರು. ಯಾವ ಗಳಿಗೆಯಲ್ಲಿ ಬೀಗರು ಬರುವರೋ ಎನ್ನುವ ಶಂಕೆ ಅವರನ್ನು ನಿದ್ರಿಸಲು ಬಿಟ್ಟಿರಲಿಲ್ಲ!

ಶ್ಯಾಮಣ್ಣನವರು ಬಂದು ಬ್ಯಾಂಡಿನವರ ತಂಡದ ಯಜಮಾನನನ್ನು ಎಚ್ಚರಿಸಿದಾಗ ಆತ ಯಾವುದೋ ಕನಸು ಕಾಣುತ್ತಿದ್ದ. ಸರ್ಕಸಿನಲ್ಲಿ ಹುಲಿಯೊಂದಿಗೆ ಆಟಸಾಗಿತ್ತು. ಹೋತವೊಂದನ್ನು ಹುಲಿಯ ಮೇಲೆ ಕೂಡಿಸುವ ಪ್ರಯತ್ನ ನಡೆದಿತ್ತು. ಆಗ ಹುಲಿ ಡೇರೆಯನ್ನೇ ಹಾರಿಸುವಂತೆ ಒಮ್ಮೆ ರಣ ಗರ್ಜನೆ ಮಾಡಿತು. ಜನ ಬೆಚ್ಚಿಬಿದ್ದರು. ಹುಲಿ ಇಂದೇಕೋ ತುಂಬಾ ' ಗರಂ ' ಆಗಿತ್ತು. ಅದು ಆಟಗಾರನ ಮಾತನ್ನು ಕಿವಿಗೆ ತರದೆ ಕೂತಲ್ಲಿಂದಲೇ ' ಗುರ್ ಗುರ್ ' ಎನ್ನುತ್ತಾ ತನ್ನ ಪಂಜದಿಂದ ನೆಲ ಕೆರೆಯುತ್ತಿತ್ತು. ಆಟಗಾರ ಚಾಟಿಯಿಂದ ಛಟೀರನೆ ಸದ್ದುಮಾಡಿದ. ಹುಲಿ ಶಬ್ದಕೇಳಿ ಕೆರಳಿ ಸಲಾಕಿಯ ಕಟಕಟೆಯ ಕಡೆ ಹಾರಿತು. ಜನ ' ಅಯ್ಯೋ ' ಎಂದರು. ಬ್ಯಾಂಡಿನವನೂ ಚೀರಿಬಿಟ್ಟ. ಆತನಿಗೆ ಹುಲಿ ತನ್ನ ಮೇಲೆ ಬಿದ್ದಂತೆ ಅನಿಸಿತು. ಶಾಮಣ್ಣನವರ ಕೈ ಆತನ ಭುಜ ಅಲುಗಿಸಿದಾಗ ಆತನ ಕೆಟ್ಟ ಧ್ವನಿಯನ್ನು ಕೇಳಿ ಉಳಿದ ವಾದ್ಯಗಾರರು ಎಚ್ಚೆತ್ತರು. ಬ್ಯಾಂಡಿನ ಯಜಮಾನ ಕಣ್ಣು ಬಿಟ್ಟು ನೋಡಿದಾಗ ಎದುರಿಗೆ ಹುಲಿಯಿಲ್ಲ; ಸೌಮ್ಯಾಕೃತಿಯ ಶ್ಯಾಮಣ್ಣನವರು! ಆತನಿಗೆ ತನ್ನ ಕನಸನ್ನು ನೆನೆದು ನಾಚಿಕೆಯಾಗಿ ತಲೆ ತಗ್ಗಿಸಿದ. ನಾಲ್ಕೇ ಮಾತಿನಲ್ಲಿ ನಡೆದುದನ್ನು ಹೇಳಿ ತನ್ನ ವಾದ್ಯಕ್ಕೆ ಕೈಹಾಕಿದ.

ಬೀಗರನ್ನು ಎದುರುಗೊಳ್ಳುವ ಶಾಸ್ತ್ರಗಳನ್ನು ಚುಟುಕದಲ್ಲೇ ಮುಗಿಸಿ, ಊರಿನ ಪ್ರಾಥಮಿಕ ಶಾಲೆಯಲ್ಲಿ ಅವರಿಗೆ ಬಿಡಾರಮಾಡಿ ಕೊಟ್ಟುದೂ

ಆಯಿತು. ಬಂದವರಿಗೆಲ್ಲಾ ಮಧ್ಯಾನ್ಹದಿಂದ ಹೊಟ್ಟೆಗೆ ಏನೂ ಇಲ್ಲದೆ ಊಟ ಕಂಡೇನೇ ಎಂದೆನಿಸಿತ್ತು! ರಾತ್ರಿ 'ಬಸಿಲೂಟ' ನಡೆದಾಗ ಸಂಜೆಮಾಡಿದ್ದ ಅಡಿಗೆ ಆರಿ ತಂಗಳಾಗಿದ್ದರೂ ಯಾವ ಆಕ್ಷೇಪಣೆ ಮಾಡದೆ ಬೇಗನು ಉಂಡು ಮಲಗಿದರು. ಎಲ್ಲರೂ ಚಣಕಾಲದಲ್ಲೇ ದಿನದ ಆಯಾಸದಿಂದ ನಿದ್ರಾ ದೇವಿಯ ದಾಸರಾಗಿ ಬಿಟ್ಟರು. ಆದರೆ ಮದುವಣಿಗನಾದ ರಾಮಚಂದ್ರ.... ಊಹೂ....ಅವನಿಗೆಲ್ಲಿಯ ನಿದ್ರೆ? ಅವನ ದೇಹ ಎಲ್ಲರಂತೆ ದಣಿದಿದ್ದರೂ ನಿದ್ರೆ ಮಾತ್ರ ಹತ್ತಲಿಲ್ಲ. ಅವನ ಮೈ, ಮನವನ್ನೆಲ್ಲಾ ಸಂತೋಷ, ಉತ್ಸುಕತೆ ಆವರಿಸಿರುವಾಗ ನಿದ್ರೆ ಹೇಗೆ ಬಂದೀತು? ರಾಮಚಂದ್ರ ಹಾಸಿಗೆಯಲ್ಲಿ ಅತ್ತಿಂದಿತ್ತ ಇತ್ತಿಂದತ್ತ ಹೊರಳುತ್ತಿದ್ದ.

ಎಂದಿಗೆ ಬೆಳಗಾದೀತು! ಎಂದಿಗೆ ಆ ಚಾಲೂಕಿನ, ಲೋಲಾಕಿನ ಹುಡುಗಿಯ ಕೈ ಹಿಡಿದೇನು ಎಂದು ಹೃದಯ ಒಂದೇ ಸಮನೆ ಕಾತರಿಸು ತ್ತಿತ್ತು. ಬೆಳಗಾಗಲು ಇನ್ನೂ ಹತ್ತೆಂಟು ತಾಸು ಉಳಿದಿತ್ತು. ಇಷ್ಟೊಂದು ಕಾಲಕಳೆಯುವುದು ಹೇಗೋ................ಎಂದು ಕಣ್ಣು ಮುಚ್ಚಿದ ರಾಮ ಚಂದ್ರ. ಏನೇನೋ ಕನಸುಗಳು. ನಾಳೆ ಕೈಹಿಡಿಯಲಿರುವ ನಲ್ಲೆಯ ಚಿತ್ರವನ್ನು ಸಾವಿರ ಬಾರಿ ಚಿತ್ರಿಸಿ ಆಕೆಯೊಡನೆ ಮನಬಂದಂತೆ ಸುಖಿಸಿದ! ಆದರೂ ಏನೋ ಒಂದು ಅಳುಕು! ಮೊಸರಿನ ಮುದ್ದೆಯಲ್ಲಿ ಕಲ್ಲು ಸಿಕ್ಕಿದಂತೆ! ತಿಂಗಳ ಬೆಳಗಿಗೆ ಮೋಡ ಮುಚ್ಚಿದಂತೆ ಆ ನವ ವಧುವಿನ ನೆನಪಿನೊಂದಿಗೆ ಯಾವುದೋ ಅಸ್ಪಷ್ಟ ಕಳವಳ. ಶಂಕೆ...........

ರಾಮಚಂದ್ರ ಹೊರಳುತ್ತಾ ಮಲಗಿಕೊಂಡೇ ಆ ಶಂಕೆಯ ಮೂಲವನ್ನು ಶೋಧಿಸಲು ನೋಡಿದ. ಅದು ವಿಚಾರ ಮಾಡಿದಂತೆ ಸುಸ್ಪಷ್ಟವಾಗ ತೋಡಗಿತು.

ಅದು ಸುಮಾರು ತಿಂಗಳ ಹಿಂದೆ ನಡೆದ ವಿಷಯ. ಆದಿನ ರಾಮಚಂದ್ರ ತಂದೆಯ ಬಲವಂತಕ್ಕೆ ಹುಡುಗಿಯನ್ನು ನೋಡಲು ಕೊರಟಿಗೆ ಬಂದಿದ್ದ. ತಾಯಿಯನ್ನು ಬಾಲ್ಯದಲ್ಲಿಯೇ ಕಳೆದುಕೊಂಡಿದ್ದ ರಾಮಚಂದ್ರನಿಗೆ ತಂದೆಯೇ ಸರ್ವಸ್ವ! ತಂದೆ ಶ್ರೀಕಂಠಪ್ಪನವರಿಗೆ ಮಗನೆಂದರೆ ಪ್ರಾಣ. ಮಗನ ಸುಖಕ್ಕೆ ಮುಳ್ಳಾಗಿ ಮಲತಾಯಿಯನ್ನು ತರಬಾರದೆಂದು ಅವರು ಮತ್ತೆ ಮದುವೆ ಯಾಗಲಿಲ್ಲ. ಆದರೆ ಜನ ಈ ವಿಷಯವಾಗಿ ಏನೇನೋ ಆಡಿಕೊಂಡರು:

ಕೆಲವರು 'ಕ್ಷಯರೋಗದವನಿಗೆ ಹೆಣ್ಣಾರು ಕೊಡುತ್ತಾರೆ' ಎಂಪರು. ಮತ್ತೆ ಕೆಲವರು 'ಮೂಲವ್ಯಾಧಿಯಿಂದ ನರಳೋನಿಗೆ ಮತ್ತೇಕೆ ಮದುವೆಯ ಚಪಲ' ಎಂದರು. ವಿಷಯ ಹೇಗೇ ಇರಲಿ ರಾಮಚಂದ್ರ ತಂದೆಯ ಪೋಷಣೆಯಲ್ಲೇ ಬೆಳೆದು ದೊಡ್ಡವನಾದ.

ಈಗ ಶ್ರೀಕಂಠಪ್ಪ ಅನಾರೋಗ್ಯದ ಮುದ್ದೆಯಾಗಿದ್ದರು. ಅವರಿಗೆ ಅಂತಹ ವಯಸ್ಸು ಆಗದಿದ್ದರೂ ದೇಹ ತುಂಬಾ ಕೃಶವಾಗಿ ಎಲುಬಿನ ಹಂದರ ವಾಗಿತ್ತು. ಅವರು ದೃಢಕಾಯರಾಗಿ ಇರುವಷ್ಟು ದಿನ ಮಗನಿಗೆ ತೊಂದರೆ ಕೊಟ್ಟಿರಲಿಲ್ಲ. ಅವರು ರಾಮಚಂದ್ರನನ್ನು ಬೆಂಗಳೂರಿನಲ್ಲಿ ಬಿಟ್ಟು ಓದಿಸಿ ದರು. ಅವನು ಎಸ್. ಎಸ್. ಎಲ್. ಸಿ. ಮುಗಿಸುವ ಹೊತ್ತಿಗೆ ತಂದೆ ಮಕ್ಕ ಳಿಬ್ಬರಿಗೂ ಸಾಕುಸಾಕಾಯಿತು. ರಾಮಚಂದ್ರ ಎಸ್ ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಮೂರು ವರ್ಷ ದೊಗ್ಗಾಲೂರಿದ. ಬೆಂಗಳೂರಿನಂತಹ ಊರಿ ನಲ್ಲಿ ಮಗನನ್ನು ಓದಿಸುವುದು ಸುಮ್ಮನೆ ಆಗುತ್ತದೆಯೇ ? ಮಗನಿಗೆ ಅನ್ನ ಬಟ್ಟೆಗೆ ಕೇಳಿದಷ್ಟು ಹಣ ಒದಗಿಸಲಾರದೆ ಶ್ರೀಕಂಠಪ್ಪನವರು ಸೋತು ಹೋದರು. ಕಡೆಗೆ ಮಗನು ಇ. ಪಿ. ಎಸ್. ಅಂತ ಆದಾಗ ಓದು ಸಾಕೆಂದರು. ರಾಮಚಂದ್ರ ಯಾವುದೋ ಇನ್ಷ್ಯೂರೆನ್ಸ್ ಕಂಪನಿಗೆ ಸೇರಿಕೊಂಡ. ಇತ್ತ ಹಳ್ಳಿಯಲ್ಲಿ ತಂದೆ ಹಳೆಯ ಖಾಯಿಲೆಯಿಂದ ಹಾಸಿಗೆ ಹಿಡಿದರು. ರಾಮ ಚಂದ್ರ ತಂದೆಯನ್ನು ಬೆಂಗಳೂರಿಗೆ ಕರೆಸಿಕೊಂಡು, ಮನೆಮಾಡಿ, ಔಷ ಧೋಪಚಾರ ನಡೆಸಿದ. ಖಾಯಿಲೆ ದಿನ ದಿನಕ್ಕೆ ಹೆಚ್ಚಾಗುತ್ತಲೇ ಹೋಯಿತು. ರಾಮಚಂದ್ರ ಅತ್ತ ಕೆಲಸಕ್ಕೆ ಹೊರಟು ಹೋದರೆ ಇತ್ತ ಮನೆಯಲ್ಲಿ ಮುದುಕ ನಿಗೆ ದಿಕ್ಕಿಲ್ಲ. ಎಷ್ಟೋ ದಿನ ಬಚ್ಚಲಿಗೆ ಹೋಗಲು ಕೈಲಾಗದೆ ಕೋಣೆ ಯಲ್ಲಿಯೆ ಮಲಮೂತ್ರ ವಿಸರ್ಜನೆ ಮಾಡಿ ಬಿಟ್ಟಿದ್ದರು. ಕುಡಿಯಲು ನೀರೋ ಔಷಧಿಯೋ, ಗಂಜಿಯೋ ಬೇಕಾದಾಗ ತೆವಳಿಕೊಂಡು ಹೋಗಬೇಕು. ಇಲ್ಲ ನೆರಮನೆಯ ಹುಡುಗರನ್ನ ಕರೆಯಬೇಕು ! ಒಂದು ದಿನ ಶ್ರೀಕಂಠಪ್ಪ– ಮನೆಗೊಂದು ಹೆಣ್ಣು ದಿಕ್ಕಿರಲೆಂದು ಮಗನೊಡನೆ ಮದುವೆಯ ಪ್ರಸ್ತಾಪ ಮಾಡಿದರು. ಮಗನಿಗೂ ಈ ಮಾತು ಸೇರಿತು. 'ಆಗಲಿ' ಎಂದ. ರಾಮ ಚಂದ್ರ ಮದುವೆಯಾಗಲು ಸಿದ್ಧನಿರುವ ಸಂಗತಿ ತಿಳಿದು ಕನ್ಯಾಪಿತೃಗಳು ಜಾತಕಗಳೊಂದಿಗೆ ಅವನನ್ನು ಮುತ್ತಿದರು. ಅವರ ಪೈಕಿ ಶ್ಯಾಮಣ್ಣನವರೂ

ಒಬ್ಬರು. ಶ್ಯಾಮಣ್ಣನವರ ಮನೆಯ ಪುರೋಹಿತರು—ಮಹೋಬಲಶಾಸ್ತ್ರಿಗಳು ಶ್ರೀಕಂಠಪ್ಪನವರಿಗೆ ಬೇಕಾದವರು. ಅವರ ಕೈಲಿ ತಮ್ಮ ಅಣ್ಣನ ಮಗಳ ಜಾತಕ ಕಳುಹಿಸಿ ವಿಷಯ ಪ್ರಸ್ತಾಪಮಾಡಿಸಿದರು. ಶಾಸ್ತ್ರಿಗಳು ಹೇಳುವ ಸಂಬಂಧವಲ್ಲಿ ತಂದೆ ಮಕ್ಕಳಿಬ್ಬರಿಗೂ ಮನಸ್ಸು ಬಂದು ಒಂದು ದಿನ ಹುಡುಗಿಯನ್ನು ನೋಡಿ ಬರಲು ಒಪ್ಪಿಕೊಂಡರು. ಈ ವೇಳೆಗೆ ಶ್ರೀಕಂಠಪ್ಪನವರ ದೇಹಸ್ಥಿತಿ ತುಂಬಾ ಕೆಟ್ಟು ಹೋದುದರಿಂದ ಅವರನ್ನು ಕ್ಷಯದಾಸ್ಪತ್ರೆಯಲ್ಲಿ ಸ್ಪೇಶಲ್‌ವಾರ್ಡಿಗೆ ಸೇರಿಸಿದ್ದರು. ಖರ್ಚು-ವೆಚ್ಚಗಳಿಗೆಂದು ಹಳ್ಳಿಯಲ್ಲಿದ್ದ ಕೆಲವು ಆಸ್ತಿಯನ್ನು ಮಾರಿದ್ದರು. ಶ್ರೀಕಂಠಪ್ಪನವರಿಗೂ ತಾವು ಹೆಚ್ಚು ಕಾಲ ಉಳಿಯುವುದಿಲ್ಲವೆಂದು ಮನವರಿಕೆಯಾಗಿ ಬೇಗನೇ ಹೆಣ್ಣುನೋಡಿ ಮದುವೆಯಾಗಿ ಬಿಡಲು ಮಗನನ್ನು ಒತ್ತಾಯ ಮಾಡಿದ್ದರು. ರಾಮಚಂದ್ರ ತಂದೆಯ ಮಾತನ್ನು ಮೀರಲಾರದೆ ಒಂದು ದಿನ ಕೊರಟಿಗೆ ಶಾಸ್ತ್ರಿಗಳೊಂದಿಗೆ ಹುಡುಗಿಯನ್ನು ನೋಡಿಬರಲು ಹೋದ.

ಶ್ಯಾಮಣ್ಣನವರು ಬಂದವರನ್ನು ಚೆನ್ನಾಗಿಯೇ ಉಪಚರಿಸಿದರು. ರುಚಿರುಚಿಯಾದ ಫಲಾಹಾರ ಹಸಿದ ಹೊಟ್ಟೆಯನ್ನು ಸೇರಿತು. ಫಲಾಹಾರವಾಗುತ್ತಿದ್ದಂತೆ, ಶ್ಯಾಮಣ್ಣನವರ ಗುಣನಡತೆಯ ಕಥನ ಶಾಸ್ತ್ರಿಗಳು ನಡೆಸಿದರು. ತುಂಬಾ ಯೋಗ್ಯ ಜನವಿರಬೇಕೆಂದುಕೊಂಡ ರಾಮಚಂದ್ರ. ಫಲಾಹಾರ ಮುಗಿದ ಮೇಲೆ ಶಾಸ್ತ್ರಿಗಳೇ ಸಲಿಗೆಯ ದನಿಯಲ್ಲಿ—

'ಇನ್ನೇಕೆ ತಡ ಹುಡುಗಿಯನ್ನ ಕರೆಸಬಹುದಲ್ಲ!' ಎಂದರು.

ಶ್ಯಾಮಣ್ಣನವರು ಅಡಿಗೆಯ ಮನೆಯ ಕಡೆಗೆ ಮುಖಮಾಡಿ 'ಅಮ್ಮಯ್ಯ, ಬಾ' ಎಂದರು. ಶ್ಯಾಮಣ್ಣನವರ ಕೂಗಿಗೆ ಒಬ್ಬ ಮದುವಣಗಿತ್ತಿ ಬರದೆ ಇಬ್ಬರು ಬಂದರು. ಇಬ್ಬರೂ ಚೆನ್ನಾಗಿ ತಲೆ ಬಾಚಿಕೊಂಡು, ಹೂಮುಡಿದು ಒಂದೇ ನಮೂನೆಯಾದ ಸೀರೆಯುಟ್ಟಿದ್ದರು. ಇಬ್ಬರ ಕಿವಿಗಳಿಗೂ ಲೋಲಾಕು! ಇಬ್ಬರ ಕತ್ತಿನಲ್ಲೂ ಒಂದೆಳೆಯ ಚೈನುಸರ, ಕೈಗೆ ಒಂದೊಂದು ಜತೆ ಚಿನ್ನದ ಬಳೆ! ಇಬ್ಬರೂ ಸಮವಯಸ್ಕರು. ಒಂದೇ ಆಕಾರ. ಒಂದೇ ಎತ್ತರ. ನಡಿಗೆಯು ಇಬ್ಬರದೂ ಒಂದೇ. ಇಷ್ಟಾದರೂ ಒಬ್ಬ ಹುಡುಗಿಯಂತೆ ಇನ್ನೊಬ್ಬ ಹುಡುಗಿಯಿಲ್ಲ. ಒಬ್ಬ ಹುಡುಗಿ ಬೆಳ್ಳಗೆ ಸ್ಫಟಿಕಶಿಲೆಯಿಂದ ಕಡೆದ ಪುತ್ಥಳಿಯಾಗಿ ಕಂಗೊಳಿಸಿದರೆ ಮತ್ತೊಬ್ಬಳು ಎಣ್ಣೆಗಪ್ಪಿನ ಬಣ್ಣದ ಬೆಣಚುಕಲ್ಲಿನಲ್ಲಿ

ಕಡೆದ ಸುಂದರ ವಿಗ್ರಹ! ಅಂಗಾಂಗಗಳೂ, ಮುಖದಮಾಟ, ವರ್ಚಸ್ಸೂ ಇಬ್ಬರದೂ ಒಂದೇ ಅಚ್ಚು. ಆದರೆ ಸೌಂದರ್ಯ ಮಾತ್ರ ಬೇರೆ ಬೇರೆ ಬಗೆ. ಒಬ್ಬಳು ಶ್ವೇತಸುಂದರಿ. ಮತ್ತೊಬ್ಬಳು ಶ್ಯಾಮಸುಂದರಿ. ರಾಮಚಂದ್ರ ಇಬ್ಬರು ಹುಡುಗಿಯರನ್ನೂ ನೋಡಿದ. ಇವರಿಬ್ಬರಲ್ಲಿ ತನಗೆಂದು ಗೊತ್ತಾದ ಹುಡುಗಿ ಯಾರೆಂದು ತಿಳಿಯದೆ ಬೆಪ್ಪನಂತೆ ಕುಳಿತ. ಹುಡುಗಿಯರು ಬಂದು ತಮಗಾಗಿ ಸಿದ್ಧಪಡಿಸಿದ್ದ ಆಸನಗಳಲ್ಲಿ ಕುಳಿತುಕೊಂಡರು. ರಾಮಚಂದ್ರ ಮಾತಿಲ್ಲದೆ ಕುಳಿತುದನ್ನು ಕಂಡು ಶಾಸ್ತ್ರಿಗಳೇ ಮಾತನಾಡಿಸಿದರು.

'ನಿನ್ನ ಹೆಸರು ಏನಮ್ಮ'

ಒಬ್ಬ ಹುಡುಗಿ 'ಶಾರದ' ಎಂದಳು; ಮತ್ತೊಬ್ಬಳು 'ಶ್ಯಾಮಲೆ' ಎಂದಳು. ಎಲ್ಲಿಯೋ ನೋಡುತ್ತಿದ್ದ ರಾಮಚಂದ್ರನ ಕಿವಿಗೆ ಶಾರದೆ, ಶ್ಯಾಮಲೆ ಶಬ್ದಗಳು ಕಿವಿಗೆ ಬಿದ್ದರೂ ಇಬ್ಬರಲ್ಲಿ ಯಾರು ಶಾರದ, ಯಾರು ಶ್ಯಾಮಲೆ ಎಂದು ತಿಳಿಯದಾಯಿತು.

"ಯಾವ ಕ್ಲಾಸಿನಲ್ಲಿ ಓದುತ್ತೀಯಮ್ಮ......"

ಇಬ್ಬರೂ "ನಾಲ್ಕನೆಯ ಕ್ಲಾಸು ಆಯಿತು. ಮನೆಯಲ್ಲೇ ಇಂಗ್ಲೀಷು ಕಲೀತಿದ್ದೀವಿ" ಎಂದರು.

ರಾಮಚಂದ್ರ ಅವರ ಜಂಟಿಸ್ವರ ಕೇಳಿ ಮನಸ್ಸಿನಲ್ಲೇ ನಕ್ಕ.

"ಸಂಗೀತ ಏನಾದ್ರು ಬರುತ್ತೇನಮ್ಮ?"

ರಾಮಚಂದ್ರನ ಕಡೆ ತಿರುಗಿ 'ನಮ್ಮ ರಾಮೂಗೆ ಸಂಗೀತ ಅಂತಂದ್ರೆ ಪಂಚಪ್ರಾಣ' ಎಂದರು. ಇದು ಶಾಸ್ತ್ರಿಗಳ ಸ್ವಯಂ ಕಲ್ಪನೆ ಹೊರತು ಬೇರೆಯಲ್ಲ!

ಹುಡುಗಿಯರು 'ಹೂಂ' ಎಂದರು.

'ಎಲ್ಲಿ ಒಂದೆರಡು ದೇವರನಾಮ ಹೇಳಿ!'

ಹುಡುಗಿಯರು ಹೇಳಲು ನಾಚಿದರು. ಶ್ಯಾಮಣ್ಣನವರು ಮುಂದೆ ಬಂದು 'ಹಳ್ಳೀಲಿ ಸಂಗೀತ ಹೇಳಿಸಬೇಕೂಂದ್ರೆ ಯಾರು ಸಿಗ್ತಾರೆ. ಆದ್ರೂ ಈಗಿನ ಕಾಲಕ್ಕೆ ಇವೆಲ್ಲಾ ಬೇಕೂಂತ ನಾನು ನಾಟಕಕ್ಕೆ ಹಾರ್ಮೋನಿಯಂ ಬಾರಿಸೊ ನಾಗರಾಜರಾಯರಿಂದ ಕೆಲವು ಕೀರ್ತನೆ ಕಲಿಸಿದ್ದೇನೆ.' ಎಂದು ಹೇಳಿ ಅಲ್ಲೇ

ಇದ್ದ ಹಳೆಯ ಹಾರ್ಮೋನಿಯಂ ಅನ್ನು ತೆಗೆದು ಹುಡುಗಿಯರ ಮುಂದೆ ಇಟ್ಟು ಹಾಡಲು ಹೇಳಿದರು.

ಶ್ಯಾಮಸುಂದರಿ ರಾಗ ಮಾಲಿಕೆಯಲ್ಲಿ ಪುರಂದರ ದಾಸರ 'ಹೇಗೆ ಮೆಚ್ಚಿಸಲಿ ಹೇಗೆ ಅರ್ಚಿಸಲಿ' ಹಾಡಿದಳು. ಪ್ರೀತಸುಂದರಿ ಕೀರ್ತನೆಯನ್ನು ಹಾರ್ಮೋನಿಯಂನಲ್ಲಿ ನುಡಿಸಿದಳು. ಅವಳು ಮುಗಿಸಿದೊಡನೆಯೇ ಪ್ರೀತ ಸುಂದರಿ 'ಬ್ರೋಚೇವರಾರಾ ರಘುವರಾ........' ಕೀರ್ತನೆ ಹಾಡಿದಳು. ಶ್ಯಾಮ ಸುಂದರಿ ಅದನ್ನು ಹಾರ್ಮೋನಿಯಂನಲ್ಲಿ ನುಡಿಸಿದಳು.

ಹಾಡುಮುಗಿದ ಮೇಲೆ ಶ್ಯಾಮಣ್ಣನವರು ಮೂರಕ್ಕೆ ಮುಕ್ತಾಯವೆನ್ನು ವಂತೆ ಇನ್ನೊಂದು ಕೀರ್ತನೆ ಹೇಳಲು ಅಪ್ಪಣೆ ಮಾಡಿದರು. ಹುಡುಗಿಯ ರಿಬ್ಬರೂ 'ನಂಬಿ ಕೆಟ್ಟವರಿಲ್ಲ ಶ್ರೀಹರಿಯ' ಕೀರ್ತನೆ ಹಾಡಿದರು. ಇಲ್ಲಿಗೆ ವಧುಪರೀಕ್ಷೆ ಮುಗಿದಂತಾಯಿತು. ಹುಡುಗಿಯರನ್ನು ಒಳಗೆ ಕಳುಹಿಸಿ ಕೊಡುತ್ತಾ ಶ್ಯಾಮಣ್ಣನವರು ಹೇಳಿದರು—

ನೋಡಿ, ಈ ಅಕ್ಕತಂಗಿಯರು ಒಬ್ಬರನ್ನೊಬ್ಬರು ಬಿಟ್ಟು ಇರೋದೇ ಇಲ್ಲ. ಆ ದೊಡ್ಡಹುಡುಗಿ—ಆ ಕಡೆ ಹೋಗೋಳು ನನ್ನ ಅಣ್ಣನಮಗಳು ಶಾರದ ಅಂತ. ಈ ಕಡೆ ಹೋಗೋಳು ನನ್ನ ಮಗಳು ಶಾಮಲೆ ಅಂತ ?

ಒಂದೇ ಬಗೆಯ ಉಡುಪಿನಲ್ಲಿದ್ದ ಇಬ್ಬರು ಹುಡುಗಿಯರಲ್ಲಿ ಯಾರು ಯಾರೆಂದು ರಾಮಚಂದ್ರನಿಗೆ ಹೊಳೆಯಲೇ ಇಲ್ಲ. ಅವನು ತನ್ನ ಅನುಮಾನ ಪರಿಹರಿಸಿಕೊಳ್ಳಲು ಪ್ರಶ್ನಿಸಿದ.

' ಇಬ್ಬರು ಹುಡುಗಿಯರಲ್ಲಿ ಈಗ ಮದುವೆಗೆ ಇರುವವರು ಯಾರು ?

" ಇಬ್ಬರೂ "

ಈ ಮಾತನ್ನು ಕೇಳಿ ಶಾಸ್ತ್ರಿಗಳೂ, ರಾಮಚಂದ್ರನೂ ಘೊಳ್ ಎಂದು ನಕ್ಕರು. ತಮ್ಮ ಮಾತಿನ ಅಪಾರ್ಥತೆಯನ್ನು ಕಂಡುಕೊಂಡು ಶ್ಯಾಮಣ್ಣ ನವರು ಕೂಡಲೆ ವಿವರಣೆ ಕೊಟ್ಟರು.

' ನನ್ನ ಮಗಳು ಶ್ಯಾಮಲೆಗೆ ಗಂಡು ಗೊತ್ತಾಗಿದೆ. ನನ್ನ ಹೆಂಡತಿಯ ಸೋದರ ಕಡೆ ಸಂಬಂಧದ ಹುಡುಗ ಶ್ಯಾಮಲೆಯನ್ನ ಮದುವೆಯಾಗಲು ಒಪ್ಪಿ ಕೊಂಡಿದ್ದಾನೆ. ಅವನು ಈ ವರ್ಷ ಬಿ. ಎ. ಗೆ ಕುಳಿತಿದ್ದಾನೆ. ಪರೀಕ್ಷೆ ಮುಗಿದೊಡನೆಯೇ ಮದುವೆ ಮಾಡಿಕೊಳ್ಳುತ್ತಾನಂತೆ. ಹಾಗೆಂದು ಮಾತು

ಕೊಟ್ಟಿದ್ದಾನೆ........ಈಗ ಮದುವೆಗೆ ಇರುವ ಹುಡುಗಿ ನನ್ನ ಅಣ್ಣನ ಮಗಳು-ಶಾರದೆ ! '

ಇಷ್ಟೆಲ್ಲ ವಿವರಣೆ ಇತ್ತರೂ ರಾಮಚಂದ್ರನಿಗೆ ಶಾರದೆ ಯಾರು, ಶ್ಯಾಮಲೆ ಯಾರು ಎಂದು ಬಗೆಹರಿಯಲಿಲ್ಲ. ಅವನು ಕಪ್ಪುಹುಡುಗಿಯೋ, ಬಿಳುಪು ಹುಡುಗಿಯೋ ಎಂದು ಶ್ಯಾಮಣ್ಣನವರನ್ನು ಕೇಳಲು ಸಂಕೋಚಪಟ್ಟುಕೊಂಡು ಸುಮ್ಮನಿದ್ದುಬಿಟ್ಟು, ದಾರಿಯಲ್ಲಿ ಶಾಸ್ತ್ರಿಗಳನ್ನು ಕೇಳಿದರಾಯಿತು—ಎಂದು ಕೊಂಡು ಇನ್ನೂ ಆಶಾವಾದಿಯಾಗಿದ್ದ. ಆದರೆ ಈ ವಿಷಯವನ್ನು ಶಾಸ್ತ್ರಿಗಳ ಮುಂದೆ ಇಟ್ಟಾಗ ಅವರಿಗೇ ಕಕ್ಕಾಬಿಕ್ಕಿಯಾಯಿತು. ಈಗ ಮದುವೆಗೆ ಇರುವ ಹುಡುಗಿ ಶಾರದ; ಶ್ಯಾಮಣ್ಣನವರ ಅಣ್ಣನಮಗಳು ಎಂದು ಅವರಿಗೆ ಖಚಿತ ವಾಗಿ ಗೊತ್ತಿದ್ದರೂ ಇಬ್ಬರು ಹುಡುಗಿಯಲ್ಲಿ ಶಾರದೆ ಯಾರು, ಶ್ಯಾಮಲೆ ಯಾರು ಎಂಬುದು ಅವರಿಗೇ ತಿಳಿದಿರಲಿಲ್ಲ. ಈಗ ಇಬ್ಬರೂ ಊಹೆಗೆ ತೊಡಗಿದರು.

' ಬಹುಶಃ ಕಪ್ಪಗೆ ಇದ್ದಾಳಲ್ಲ ಅದೇ ಹುಡುಗಿ ಇರಬೇಕು ಶ್ಯಾಮಲೆ. ಯಾಕೆಂದರೆ ಆಕಾರಕ್ಕೆ ತಕ್ಕ ಹೆಸರು---ಶ್ಯಾಮಲೆ ಅಂತ. ಶಾಮಣ್ಣೋರನ್ನ ನೋಡಿದ್ರೆ ಅವರ ಮಗಳೇ ಇರಬೇಕು ಆ ಹುಡುಗಿ. ಮುಖದಲ್ಲಿ ಶಾಮಣ್ಣ ನವರ ಕಳೆ ಇದೆ. ಅಲ್ಲದೆ ಮೈಬಣ್ಣ ಸುಮಾರಾಗಿ ಇಬ್ಬರದೂ ಒಂದೇ.

ಈ ಮಾತು ಕೇಳಿ ನಿಟ್ಟುಸಿರು ಬಿಟ್ಟ ರಾಮಚಂದ್ರ.

" ಹಾಗಾದ್ರೆ ಬೆಳ್ಳಗಿರೋ ಹುಡುಗಿ ಶಾರದ—ಈಗ ಮದುವೆಗೆ ಇರೋ ಹುಡುಗಿ "

" ಇರಬೇಕು "

ಆದರೂ ಶಾಸ್ತ್ರಿಗಳಿಗೆ ಅನುಮಾನ. ಅವರು ಬಸ್ಸಿಗಾಗಿ ನಂದಗುಡಿಯ ಬಳಿ ಕಾಯುತ್ತಿದ್ದಾಗ, ಶಾಮಣ್ಣನವರು ಸೈಕಲ್ಲಿನ ಮೇಲೆ ಅವರಿದ್ದೆಡೆಗೆ ಬಂದರು. ಕೊಠಡಿಯಲ್ಲಿ ರಾಮಚಂದ್ರ ಕರವಸ್ತ್ರ–ಪೆನ್ನುಗಳನ್ನು ಮರೆತು ಬಂದಿದ್ದನಂತೆ! ಶ್ಯಾಮಣ್ಣನವರು ಇಲ್ಲಿಗೆ ಬರಲು ಪೆನ್ನು, ಕರವಸ್ತ್ರಗಳು ಒಂದು ನೆವ, ಅವರ ಮೂಲ ಉದ್ದಿಶ್ಯ ರಾಮಚಂದ್ರ ಹುಡುಗಿಯನ್ನ ಒಪ್ಪಿ ದನೋ ಇಲ್ಲವೋ ಎಂದು ತಿಳಿಯುವುದೇ ಆಗಿತ್ತು. ಶಾಸ್ತ್ರಿಗಳು—ತಮ್ಮ ಮೇಲೆ ಮಾತೇಕೆಂದು ಶ್ಯಾಮಣ್ಣನವರನ್ನ ಕೇಳಿಯೇ ಬಿಟ್ಟ.

" ಸರಿಸ್ವಾಮಿ. ಆ ಇಬ್ಬರು ಹುಡುಗಿಯರ ಪೈಕಿ ಯಾರು ಶ್ಯಾಮಲೆ, ಯಾರು ಶಾರದೆ ಅಂತ ನಮ್ಮ ರಾಮೂಗೆ ಇನ್ನೂ ಗೊತ್ತಾಗಲಿಲ್ಲವಂತೆ ! "

" ಹೂಂ ಹೌದು. ಅವರಿಬ್ಬರೂ ಒಂದೇತರಹ ಇರೋದ್ರಿಂದ ಅನೇಕ ರಿಗೆ ಹೀಗೇ ಆಗುತ್ತೆ. ನನ್ನ ಮಗಳು ಶ್ಯಾಮಲೆ; ನಮ್ಮ ಅಣ್ಣನ ಮಗಳು ಶಾರದೆ.

" ಶಾರದೆ ಎಂದರೆ ಯಾರು ? ಬೆಳ್ಳಗಿರುವ ಹುಡುಗಿಯೋ ಇಲ್ಲ ಕಪ್ಪ ಗಿರುವ ಹುಡುಗಿಯೋ ? "

ಶ್ಯಾಮಣ್ಣನವರಿಗೆ ಒಳ್ಳೇ ಪೀಕಲಾಟಕ್ಕೆ ಇಟ್ಟುಕೊಂಡಿತು. ಕ್ಷಣಕಾಲ ಆಲೋಚಿಸಿ ಧೈರ್ಯವಾಗಿ--

" ಬಿಳಿ ಹುಡುಗಿಯೇ ಶಾರದೆ ! " ಎಂದು ಹೇಳಿಬಿಟ್ಟರು. ಆದರೂ ಈ ಮಾತು ಹೇಳುವಾಗ ಧ್ವನಿಯೇ ಬದಲಾದುದನ್ನು ಶ್ಯಾಮಣ್ಣನವರೇ ಬಲ್ಲರು.

" ಹಾಗಾದರೆ ನಿಮ್ಮ ರೊಟ್ಟಿ ಜಾರಿ ತುಪ್ಪದಲ್ಲಿ ಬೀಳುವಂತೆ ಕಾಣುತ್ತೆ."

" ಯಾಕೆ ! " ಎಂದರು ಶ್ಯಾಮಣ್ಣನವರು—ತಿಳಿಯದವಂತೆ.

" ನಮ್ಮ ರಾಮು ಆ ಹುಡುಗಿಯನ್ನ ಮದುವೆ ಯಾಗೋಕೆ ಒಪ್ಪ ಬಹುದು."

ಶ್ಯಾಮಣ್ಣನವರು ಒಂದು ನಿಟ್ಟುಸಿರು ಬಿಟ್ಟರು.

" ನಾನು ಹೋಗಿ ಶ್ರೀಕಂಠಪ್ಪನವರೊಂದಿಗೆ ಉಳಿದ ವಿಷಯ ಮಾತ ನಾಡಿ ಬರುತ್ತೇನೆ........" ಎಂದರು.

ಶ್ಯಾಮಣ್ಣನವರು ಮುಖವಗಲಿಸಿ ' ಆಗಬಹುದು ' ಎಂದರು.

ರಾಮಚಂದ್ರ ಹುಡುಗಿಯನ್ನು ಒಪ್ಪಿಹೋದ ಎಂಟೇ ದಿನಕ್ಕೆ ಕೊಡು ವುದು ಬಿಡುವುದು ಎಲ್ಲಾ ನಿಶ್ಚಯವಾಗಿ ಲಗ್ನಪತ್ರಿಕೆಯ ಶಾಸ್ತ್ರಕೂಡಾ ಆಗಿ ಹೋಯಿತು.

ಈಗ ರಾಮಚಂದ್ರ ತನ್ನ ಇಷ್ಟ ಮಿತ್ರ ಪರಿವಾರದೊಂದಿಗೆ ಮದುವೆಗೆ ಬಂದಿದ್ದಾನೆ. ನಾಳೆಯೇ ಮದುವೆ. ತಂದೆ ಆಸ್ಪತ್ರೆಯನ್ನು ಬಿಟ್ಟು ಕದಲುವ ಸ್ಥಿತಿಯಲ್ಲಿ ಇಲ್ಲದುದರಿಂದ ಹಸೆಗೆ ಕೂತುಕೊಳ್ಳಲು ಯಾರೋ ದೂರದ ನೆಂಟ ರನ್ನು ಕರೆದು ತಂದಿದ್ದ. ನಾಳೆ ಬೆಳಗಾದರೆ ಲಗ್ನ! ಇಂತಹ ಹೊತ್ತಿನಲ್ಲಿ ರಾಮಚಂದ್ರನ ತಲೆಯಲ್ಲಿ ಸಂಶಯದ ಹುಳು. ಶ್ಯಾಮಣ್ಣನವರು ತನಗೆ

ಸುಳ್ಳುಯಾಕೆ ಹೇಳಿರಬಾರದು ? ಅವರು ಸಾದಾ ಇದ್ದಿದ್ದರೆ ಒಂದೇ ಹುಡುಗಿಯನ್ನು ತಂದು ತೋರಿಸುತ್ತಿದ್ದರು. ಆದರೆ ಅಂದು ಇಬ್ಬರು ಹುಡುಗಿಯರನ್ನು ತೋರಿಸಿದರು. ಇದರಲ್ಲಿ ಏನೋ ಮೋಸವಿದ್ದಂತಿದೆ. ಅದು ಏನಿದ್ದರೂ ನಾಳೆ ಬಯಲಿಗೇ ಆಗುತ್ತದೆ. ಎಂದುಕೊಂಡು ಕಣ್ಣುಮುಚ್ಚಿ ಮಲಗಿದ. ನಿದ್ರೆ ಯಾವ ಮಾಯದಲ್ಲಿ ಬಂತೋ.

ಬೆಳಗಿನ ಕೋಳಿ ಕೂಗುವ ಹೊತ್ತಿಗೇ ಶಾಸ್ತ್ರಿಗಳು ಬಂದು ಎಲ್ಲಾ ಶಾಸ್ತ್ರಕ್ಕೆ ಚಡಪಡಿಸಿದರು. ಅದರ ಬೆನ್ನಿಗೇ ನಾಂದಿ, ಕಾಶೀಯಾತ್ರೆ........ ನಿಶ್ಚಿತಾರ್ಥ ಇತ್ಯಾದಿ ಶಾಸ್ತ್ರಗಳು ಪೂರೈಸಿದವು. ಈಗ ಲಗ್ನವೊಂದು ಉಳಿದಿತ್ತು. ಹುಡುಗಿಯನ್ನು ಸೋದರ ಮಾವ ಲಗ್ನಮಂಟಪಕ್ಕೆ ಕರೆತಂದ. ಪುರೋಹಿತರು ವಧೂವರರ ಮಧ್ಯೆ ಅಂತರಪಟ ಹಿಡಿದು ಮಂತ್ರಘೋಷಣೆಗೆ ತೊಡಗಿದರು. ಅಂತರಪಟ ತೆಗೆಯುವ ಮುನ್ನ ವಧೂವರರ ಕೈಗೆ ಜೀರಿಗೆ ಬೆಲ್ಲಕೊಟ್ಟು ‘ ಕೊಲವು ’ ‘ ಕೊಲವು ’ ಎಂದು ಕೂಗಿ ಹೇಳಿದರು. ಹೊರಗೆ ಚಪ್ಪರದಲ್ಲಿ ಲಗ್ನದ ಮುಹೂರ್ತ ಬಂದೀತೇ ಎಂದು ಕಾದಿದ್ದ ಓಲಗದವರು ಹಠಾತ್ತಾಗಿ ಓಲಗ ನುಡಿಸಿದರು. ಡೋಲು ಹೊಡೆಯುವವನು ಡೋಲಿನ ಚರ್ಮ ಕೀಳುವಂತೆ ಅದರ ಮೇಲೆ ಕೈಯಾಡಿಸಿದ. ಕ್ಷಣಕಾಲ ಮದುವೆಯ ಮಂಟಪದಲ್ಲಿ ಗದ್ದಲವೋ ಗದ್ದಲ. ಸಣ್ಣಪುಟ್ಟ ಹುಡುಗ ಹುಡುಗಿಯರೂ ವೃದ್ಧ ಮಾತೆಯರೂ ಯಾರು ಮೊದಲು ಜೀರಿಗೆ ಬೆಲ್ಲ ಹಾಕುತ್ತಾರೋ ಯಾರಿಗೆ ಯಾರು ಅಡಿಯಾಳಾಗುತ್ತಾರೋ ಎಂದು ನೋಡಲು ಮುಂಗಾಲಿನ ಮೇಲೆ ನಿಂತಿದ್ದರು.

‘ ರಾಮಾ ನೀನು ಮೊದಲು ಹಾಕೋ! ’ ಎಂದು ವರನ ಕಡೆಯ ಬೀಗಿತ್ತಿ ಹೇಳಿದರೆ, “ ಶಾರದ ನಿನ್ನ ಗಂಡನಿಗಿಂತ ಮುಂಚೆ ನೀನೇ ಹಾಕಿ ಬಿಡಬೇಕು ಕಣೇ ! ” ಎಂದು ಮರುಸವಾಲು ಹಾಕಿದಳು ಹೆಣ್ಣಿನ ಕಡೆಯ ಪುಟ್ಟ ಮುತ್ತೈದೆ ಶ್ಯಾಮಲೆ. ರಾಮಚಂದ್ರ ಆ ಧ್ವನಿ ಬಂದತ್ತ ದೃಷ್ಟಿ ಹೊರಳಿಸಿದ. ಹೆಂಗಸರ ಮಧ್ಯೆ ಇದ್ದ ಶ್ಯಾಮಲೆ ಕಣ್ಣಿಗೆ ಬಿದ್ದಳು. ಅವಳನ್ನು ಕಂಡು ಬೆಚ್ಚಿ ಬಿದ್ದ ರಾಮಚಂದ್ರ “ಹಾಗಾದರೆ........ಇವಳು........ಅವಳಲ್ಲ!” ಎಂದ. ಮದುವೆಯ ಮನೆಯ ಗದ್ದಲದಲ್ಲಿ ಯಾರ ಕಿವಿಗೂ ಆ ಮಾತು ಕೇಳಲೇಇಲ್ಲ. ರಾಮಚಂದ್ರನಿಗೆ ಕಣ್ಣಿಗೆ ಕತ್ತಲೆ ಮುತ್ತಿ ಬಂದಂತಾಗಿ,

ನಿಂತಲ್ಲೇ ಕುಸಿಯುವಂತಾಯಿತು. ಅದೇ ವೇಳೆಗೆ ಅಂತರ ಪಟ ನೆಲಕ್ಕೆ ಬಿತ್ತು. ರಾಮಚಂದ್ರ ತನ್ನೆದುರಿಗೆ ನಿಂತಿದ್ದ ಹುಡುಗಿಯನ್ನು ದುರದುರನೆ ನೋಡಿದ. ಎದುರಿಗೆ ಬಿಳಿಯ ಹುಡುಗಿಯ ಬದಲು ಕಪ್ಪು ಹುಡುಗಿ! ಶ್ಯಾಮ ಲೆಯ ಬದಲು ಶಾರದ!! ಕೈಯಲ್ಲಿದ್ದ ಜೀರಿಗೆ ಬೆಲ್ಲ ಅವನಿಗೆ ತಿಳಿಯದಂತೆ ನೆಲಕ್ಕೆ ಬಿದ್ದವು. ಶಾರದೆಯೇ ಮೊದಲು ಜೀರಿಗೆ ತಲೆಯ ಮೇಲೆ ಹಾಕಿದಳು. ರಾಮಚಂದ್ರ ಜೋಲು ಮೋರೆಮಾಡಿಕೊಂಡು ಯಾವುದೋ ಮೂಲೆ ನೋಡುತ್ತಾ ಮಂಕನಾಗಿ ನಿಂತು ಬಿಟ್ಟಿದ್ದ. ಇದನ್ನು ಕಂಡು ಯಾರೋ ಕುಚೇಷ್ಟೆಗಳು ಈಗಿನಿಂದಲೇ ಎಚ್. ಪಿ-ಹೆಣ್ಣಿಗೆ ಪ್ರದಕ್ಷಿಣೆ ಹಾಕೋ ಹೆಣ್ಣಿಗ-ಆದ ಎಂದು ಹೇಳಿದರು. ಈ ಮಾತನ್ನು ಕೇಳಿ ಹುಡುಗಿಯರು ಹೋ! ಎಂದು ಚಪ್ಪಾಳೆಯಿಕ್ಕಿ ನಕ್ಕರು. ರಾಮಚಂದ್ರನಿಗೆ ಈ ತಮಾಷೆಯಿಂದ ಕದಡಿದ ಮನಸ್ಸು ಮತ್ತಷ್ಟು ಕ್ಷುಬ್ಧವಾಯಿತು. ಅವನಿಗೆ ತನಗೆ ಶ್ಯಾಮಣ್ಣಿ ನವರು ಮೋಸಮಾಡಿದರಲ್ಲಾ ಎಂದು ತುಂಬಾ ಸಂತಾಪವಾಯಿತು. ಆದ ಆಶಾಭಂಗದಿಂದ ದುಃಖ ಒತ್ತರಿಸಿಕೊಂಡು ಬಂತು. ಒಂದೆರಡು ತೊಟ್ಟು ಕೋಪದ ಕಣ್ಣೀರು ಅವನ ದತ್ತೋಟಿಮೀರಿ ಕಣ್ಣಿನಿಂದ ಉದುರಿತು. ಅದನ್ನು ಕಂಡು ಶ್ಯಾಮಲೆ "ನೋಡಲೆ ಶಾರದ ನಿನ್ನ ಗಂಡ ನೋಡೆ ಅಂತ ಅಳ್ತಾ ಇದ್ದಾರೆ. ಅಳಬೇಡ ಅಂತ ಸಮಾಧಾನ ಮಾಡಬಾರದೇನೇ" ಎಂದು ಹಾಸ್ಯ ಮಾಡಿದಳು. ಈ ಮಾತು ರಾಮಚಂದ್ರನಿಗೆ ಕರುಳಿಗೆ ಅಲಗುಹಾಕಿದಂತೆ ಆಯಿತು. ರಾಮಚಂದ್ರ ಮುಖವನ್ನು ಗಂಟಿಕ್ಕಿದ. ಶಾಸ್ತ್ರಿಗಳು "ಎಲ್ಲಾ ಹುಡುಗ ಸಹವಾಸ, ಅಪ್ಪನಿಗೆ ಈ ಮದುವೆ ನೋಡಿ ಸಂತೋಷಪಡುವ ಭಾಗ್ಯ ಇಲ್ಲದೆ ಹೋಯಿತು ಎಂದು ಹುಡುಗ ಕಣ್ಣೀರು ಹಾಕಿದರೆ ಇವರಿಗೆ ಇದೂ ಒಂದು ತಮಾಷೆ!" ಎಂದು ಗದರಿದಾಗ ನಿಶ್ಶಬ್ದವಾಗಿತು.

ಈಗ ರಾಮಚಂದ್ರನಿಗೆ ಈ ಮೊದಲು ಇದ್ದ ಉತ್ಸಾಹ ಇಲ್ಲವಾಯಿತು. "ಶಾಸ್ತ್ರಿಗಳೇ ನೀವುಗಳೆಲ್ಲಾ ಇದ್ದೂ ಈ ಮೋಸವೇ" ಎಂದ.

ಶಾಸ್ತ್ರಿಗಳು ನಕ್ಕು ಬಿಟ್ಟರೇ ಹೊರತು ಏನೂ ನುಡಿಯಲಿಲ್ಲ. ಅವರನ್ನು ಈ ಮೊದಲೇ ಬುಟ್ಟಿಗೆ ಹಾಕಿಕೊಂಡಿದ್ದಾರೆಂದು ಅವನಿಗೆ ಹೇಗೆ ತಿಳಿಯಬೇಕು? ಶಾಸ್ತ್ರಿಗಳು ಸುಮ್ಮನಿರುವುದನ್ನು ಕಂಡು ಹಸೆಯಿಂದ ಏಳಲು ನೋಡಿದ. ಆದರೆ ಶಾಸ್ತ್ರಿಗಳು ಬಿಡಬೇಕಲ್ಲ. ಅವರು ಏನೇನೋ ಸಮಾಧಾನ ಹೇಳಿ

ಮತ್ತೆ ಕುಳ್ಳಿರಿಸಿದರು. ಕಟುಕರ ಮುಂದೆ ನಿಂತು ದಯಾಭಿಕ್ಷೆ ಬೇಡುವ ಕುರಿಯಂತಾಗಿತ್ತು. ರಾಮಚಂದ್ರನ ಪಾಡು! ಶಾಸ್ತ್ರಿಗಳು ಮಂತ್ರಗಳನ್ನು ಒದರಲು ಆರಂಭಿಸಿಬಿಟ್ಟರು. "ಸುಲಗ್ನಾಸಾವಧಾನ! ಸುಮುಹೂರ್ತ ಸಾವಧಾನ!! ಶ್ರೀ ಲಕ್ಷ್ಮೀನಾರಾಯಣಧ್ಯಾನ ಸಾವಧಾನ!!!" ಹೇಳಿಯೇ ಬಿಟ್ಟರು. ಹತ್ತು ಜನ ಹರಸಿದ್ದ ಮಾಂಗಲ್ಯದ ತಟ್ಟೆ ರಾಮಚಂದ್ರನ ಮುಂದೆ ಬಂತು. ಶಾಸ್ತ್ರಿಗಳು ಮಂಗಳ ಸೂತ್ರವನ್ನು ಎತ್ತಿ ರಾಮಚಂದ್ರನ ಕೈಗೆ ಕೊಡುತ್ತಾ ಬೇಗ ಕಟ್ಟಲು ಹೇಳಿದರು. ರಾಮಚಂದ್ರ ಹಿಂದುಮುಂದೆ ತುಳಿಯುತ್ತಾ "ಶಾಸ್ತ್ರಿಗಳೇ!" ಎಂದು ರಾಗ ತೆಗೆದ! ಶಾಸ್ತ್ರಿಗಳು ಮುಂದೆ ಮಾತು ಆಡಗೊಡದೆ "ಕಟ್ಟಪ್ಪಾ ಕಟ್ಟು! ತಡವೇಕೆ?" ಎಂದರು. ರಾಮಚಂದ್ರ ನಡುಗುತ್ತಿದ್ದ ಕೈಯಲ್ಲಿ ಹುಡುಗಿಯ ಕತ್ತಿಗೆ ಮಾಂಗಲ್ಯ ಬಿಗಿದ! ಹಾಗೆಯೇ ನಾಳಿನ ರುದ್ರ ನಾಟಕಕ್ಕೆ ಇಂದೇ ನಾಂದಿ ಹಾಡಿದ!

## ೨

ಮದುವೆಯ ಶಾಸ್ತ್ರಗಳೆಲ್ಲಾ ಮುಗಿದವು. ನಾಗೋಲಿ, ಉರುಟಣೆ, ಕಳುಹೂಟ ಎಲ್ಲವೂ ಸಾಂಗವಾಗಿ ನೆರವೇರಿದವು. ಮದುವೆಗೆ ಬಂದಿದ್ದ ಬೀಗರಿಗೆಲ್ಲ ತಮ್ಮ ಅಂತಸ್ಥಿಗೆ ತಕ್ಕಂತೆ ಉಡುಗರೆಯಿತ್ತು ಶ್ಯಾಮಣ್ಣನವರು ಎಲ್ಲರ ಮನಸ್ಸನ್ನು ಸಂತೋಷಗೊಳಿಸಿದರು. ಎಲ್ಲರೂ ಮದುವೆ ಚೆನ್ನಾಗಿ ಆಯಿತೆಂದು ಹೊಗಳುವವರೇ ಆದರು. ಸ್ವಯಂ ಕಾವೇರಮ್ಮ ಶ್ಯಾಮಣ್ಣನ ಅತ್ತಿಗೆ ಶಾರದೆಯ ಮದುವೆ ಎಲ್ಲಿ ಬೇಕಾಬಿಟ್ಟಿಯಾಗಿ ನಡೆಯುವುದೋ ಎಂದು ಶಂಕಿಸಿದ್ದರು. ಅವರಿಗೆ ಈಗ ತುಂಬಾ ಸಮಾಧಾನ. ಬಂದ ವರಗಳೆಲ್ಲ ಶಾರದೆಯನ್ನು ಕಪ್ಪು ಹುಡುಗಿ ತಮಗೆ ಬೇಡ ಎಂದು ಹಿಮ್ಮೆಟ್ಟಿ ಹೋಗುವಾಗ ಅವಳಿಗೆ ರಾಮಚಂದ್ರನಂತಹ ಲಕ್ಷಣವಾದ ಗಂಡನೇ ದೊರೆತದ್ದು ಕಾವೇರಮ್ಮನಿಗೆ ಹಿಡಿಸಲಾರದ ಹಿಗ್ಗು. ಶ್ಯಾಮಣ್ಣನವರಿಗೂ ಅಷ್ಟೆ. ಅವರಿಗೆ ತಮ್ಮ ಮಗಳು ಅಣ್ಣನಮಗಳು ಎನ್ನುವ ಭೇದವಿಲ್ಲ. ಆದರೆ ನೋಡಿದ ಜನ ತಂದೆಯಿಲ್ಲದ ಹುಡುಗಿಯ ಲಗ್ನವನ್ನು ಕಾಟಾಚಾರಕ್ಕೆ ಮಾಡಿದ ಎಂದು ತಮ್ಮನ್ನು

ದೂರಬಾರದೆಂದು ಮದುವೆಯ ವಿಷಯದಲ್ಲಿ ಅತ್ತಿಗೆ ಹಾಕಿದ ಗೆರೆ ದಾಟಲಿಲ್ಲ. ಎರಡು ಮದುವೆಗಳನ್ನು ಒಟ್ಟಿಗೆ ಮಾಡಿದರೆ ಖರ್ಚು ಕಡಿಮೆ ಆಗಬಹುದೆಂದು ಆಲೋಚಿಸುತ್ತಿದ್ದ ಶ್ಯಾಮಣ್ಣನವರಿಗೆ, ಅತ್ತಿಗೆ ಕೂಡದು ಎರಡು ಮದುವೆ ಬೇರೆ ಬೇರೆಯಾಗಲಿ ಎಂದೊಡನೆಯೇ ಶ್ಯಾಮಣ್ಣನವರು ಕೋಲೇ ಬಸವನಂತೆ ಹೂಂಗುಟ್ಟಿದ್ದರು. ಕಾವೇರಮ್ಮ ಹುಡುಗಿಯ ಮೈಮೇಲೆ ಪಾವು ಬಂಗಾರ ಹಾಕಬೇಕೆಂದು ಸೂಚಿಸಿದಾಗ ಶ್ಯಾಮಣ್ಣನವರ ಮಗ, ಹೆಂಡತಿ ಮುಖವನ್ನು ಸೊಟ್ಟಮಾಡಿದರೂ ಶ್ಯಾಮಣ್ಣನವರು ಮಾತ್ರ "ಆಗಲಿ. ತಂದೆ ಇದ್ದಿದ್ದರೆ ಹಾಕುತ್ತಿರಲಿಲ್ಲವೇ" ಎಂದು ಅವಕ್ಕೂ ಒಪ್ಪಿಗೆಯಿತ್ತರು. ಇನ್ನು ಶಾರದ, ಶ್ಯಾಮಲೆಯರ ದ್ವಂದದಿಂದ ರಾಮಚಂದ್ರನನ್ನು ಬುಟ್ಟಿಗೆ ಕೆಡಹುವ ಉಪಾಯವನ್ನು ಸೂಚಿಸಿದವರೂ ಕಾವೇರಮ್ಮನೇ.

"ನಮ್ಮ ಶ್ಯಾಮಲೆಯನ್ನು ಯಾರಾದರೂ ಒಪ್ಪುವರು. ಆದರೆ ಶಾರದೆಯನ್ನು ಕಪ್ಪೆಂದು ಐಜೆಸುತ್ತಾರೆ. ಈ ಬಾರಿ ಹುಡುಗಿಯನ್ನು ತೋರಿಸುವಾಗ ಶ್ಯಾಮಲೆ ಜೊತೆಗೆ ತೋರಿಸಬೇಕು." ಎಂದು ಕಾವೇರಮ್ಮಾ ಹೇಳಿದಾಗ ಶ್ಯಾಮಣ್ಣನವರು ನಕ್ಕು 'ಆಗಲಿ' ಎಂದಿದ್ದರು. ಈಗ ಅವರ ಉಪಾಯ ಫಲಿಸಿ ತಕ್ಷಣ ಫಲಕೊಟ್ಟಿತ್ತು. ರಾಮಚಂದ್ರ ಬಲೆಗೆ ಬಿದ್ದ ಮೀನಿನಂತೆ ಆಗಿದ್ದ. ಆದರೆ ಅವನು ಬಡಪಟ್ಟಿಗೆ ಮೆತ್ತಗಾಗುವ ಮೀನಲ್ಲ. ಒಡ್ಡಿದ ಬಲೆಯ ಹುರಿಯನ್ನು ಕತ್ತರಿಸಿಕೊಂಡು ವಿಶಾಲ ಜೀವನ ಸಮುದ್ರಕ್ಕೆ ನುಣುಚಿಕೊಳ್ಳುವ ಘಾಟಿಮೀನು ಎಂದು ಅವರಿಗೆ ತಿಳಿದಿದ್ದರೆ ತಾನೆ ?

ರಾಮಚಂದ್ರ ಮದುವೆಯ ಮನೆಯಲ್ಲೇ ತನ್ನ ಭವಿಷ್ಯ ನಿರ್ಧರಿಸಿಕೊಂಡಿದ್ದ. ತನಗೆ ಮೋಸಮಾಡಿ ಕಪ್ಪು ಹುಡುಗಿಯನ್ನು ಗಂಟುಹಾಕಿದ್ದಾರೆ. ಅವರ ಮೋಸಕ್ಕೆ ತಕ್ಕ ಶಾಸ್ತಿ ಮಾಡದೇ ಹೋದರೆ ತಾನು ರಾಮಚಂದ್ರನೇ ಅಲ್ಲವೆಂದು ಅವನು ಲಗ್ನಮಂಟಪದಲ್ಲಿಯೇ ಹಲ್ಲುಕಡಿದಿದ್ದನು. ಈ ಬಗ್ಗೆ ಮದುವೆಯ ಮನೆಯಲ್ಲಿ ರಾದ್ಧಾಂತ ಮಾಡಿದರೆ ತನ್ನ ಹಿಂದೆ ಬಂದಿದ್ದ ನೆಂಟರಿಷ್ಟರಿಗೆ ಅವಮಾನವಾಗುವುದೆಂದು ಮನಸ್ಸನ್ನು ಬಿಗಿಹಿಡಿದು ಸುಮ್ಮನಿದ್ದ. ಬೀಗರ ಔತಣಮುಗಿದು ಊರಿಗೆ ಹೊರಡುವದಿನ ರಾಮಚಂದ್ರ ಶ್ಯಾಮಣ್ಣನವರಿಗೆ ಹೇಳಿಕಳುಹಿಸಿದ. ಶ್ಯಾಮಣ್ಣನವರು ಗಾಬರಿಯಾಗಿಯೇ ಬಂದರು. ರಾಮಚಂದ್ರ ಅಸಮಾಧಾನ

ಗೊಂಡಿರುವ ವಿಷಯ ಈ ಮೊದಲೇ ಅವರಿಗೆ ತಿಳಿದಿತ್ತು. ಅವರನ್ನು ಕಂಡೊಡನೆಯೆ ರಾಮಚಂದ್ರ ಅವರು ತನಗೆ ಕೊಟ್ಟಿದ್ದ ಪಠೋಪಚಾರದ ಸಾಮಾನು, ಸೂಟು, ಪೇಟ, ಮೊದಲುಗೊಂಡು ಎಲ್ಲವನ್ನೂ ಕಳಚಿ ಗುಡ್ಡೆ ಹಾಕಿ, "ನಿಮ್ಮ ಸಾಮಾನೆಲ್ಲ ನಿಮ್ಮ ಹುಡುಗಿಯ ಜತೆಯಲ್ಲಿ ನಿಮ್ಮಲ್ಲೇ ಇರಲಿ; ಈ ಗಳಿಗೆಯಿಂದ ನಿಮ್ಮ ಹುಡುಗಿಗೂ ನನಗೂ ಯಾವ ಸಂಬಂಧ ವಿಲ್ಲ." ಎಂದು ಹೇಳಿದವನೇ ಅಲ್ಲಿ ನಿಲ್ಲದೆ ಹೊರಟುಬಿಟ್ಟ. ಶ್ಯಾಮಣ್ಣ ನವರು ಬೆಪ್ಪಾಗಿ ನಿಂತು ಬಿಟ್ಟರು. ಏನೋ ಹೇಳಲು ಬಾಯಿ ತೆರೆದರು. ಆದರೆ ಮಾತು ಗಂಟಲಲ್ಲಿಯೇ ಸಿಕ್ಕಿಕೊಂಡಿತು. ತಮ್ಮ ತಪ್ಪನ್ನು ಮನ್ನಿಸಲು ರಾಮಚಂದ್ರನ ದಯಾ ಭಿಕ್ಷೆ ಬೇಡಲು ಅವನ ಹಿಂದೆ ಓಡಿದರು. ರಾಮ ಚಂದ್ರ ಬಿರಬಿರನೆ ಹೆಜ್ಜೆಹಾಕಿ ನಡೆದಿದ್ದ. ಶ್ಯಾಮಣ್ಣನವರು ಬಹಳ ವಿನಯ ವಾಗಿ ಅದನ್ನು ಮರೆತು ಬಿಡಲು ರಾಮಚಂದ್ರನಲ್ಲಿ ಮೊರೆಯಿಟ್ಟರು. ರಾಮ ಚಂದ್ರ ಕಿವುಡನಾಗಿದ್ದ. ಕಡೆಗೆ ಜೇಡಿ, ಜೀಸತ್ತು, ಜೋಲು ಮೋರೆ ಹೊತ್ತು ಹಿಂತಿರುಗಬೇಕಾಯಿತು—ಶ್ಯಾಮಣ್ಣನವರು. ಅವರ ಕಳೆಗುಂದಿದ ಮುಖ ವನ್ನು ಕಂಡೇ ಕಾವೇರಮ್ಮನವರು ಹೆದರಿದರು. ನಡೆದ ವಿಷಯ ತಿಳಿದಾಗ ಗೋಳೋ ಎಂದು ಅಳತೊಡಗಿದರು ತಾಯಿ ಅಳುವುದನ್ನೂ ಕಂಡು ಮಗಳೂ ಗಳಗಳನೆ ಅತ್ತಳು. ಶ್ಯಾಮಣ್ಣನವರಿಗೆ ಏನು ಮಾಡಲೂ ದಿಕ್ಕೇ ತೋಚಲಿಲ್ಲ.

ಅವರಿಗೂ ತಾವು ಮಾಡಿದ ತಪ್ಪಿನ ಅರಿವಾಗಿ ಅದರ ಭಯಂಕರ ಪರಿ ಣಾಮವನ್ನು ನೆನೆದು ಎದೆ 'ಜಲ್' ಎಂದಿತ್ತು; ದುಃಖ ಒತ್ತರಿಸಿಕೊಂಡು ಬಂದಿತ್ತು. ಅದನ್ನುತೋರಗೊಡದೆ ತಾಯಿಮಕ್ಕಳನ್ನು ಸಮಾಧಾನಪಡಿಸಿದರು.

"ಅಮ್ಮಾ ಶಾರದಾ, ನಿನ್ನ ಗಂಡ ಎಲ್ಲೂ ಹೋಗಲ್ಲಮ್ಮ. ಅಳಬೇಡ ಮಗು............ಅಳಬೇಡ. ಯಾರೋ ಏನೋ ಹೇಳಿ ಅವನ ತಲೆ ಕೆಡಿಸಿ ಬಿಟ್ಟಿದ್ದಾರೆ. ಕೊಂಚ ದಿನಕಳೆಯಲಿ—ಎಲ್ಲಾ ಸರಿಹೋಗುತ್ತೆ."

ಎಲ್ಲ ಸರಿಹೋಗುತ್ತದೆಂದು ಅವರ ಬಾಯಿ ನುಡಿಯುತ್ತಿದ್ದರೂ ಅವರ ಮನಸ್ಸಿನಲ್ಲಿ ತಳಮಳವಿದ್ದೇ ಇತ್ತು. ತಾವು ಮಾಡಿದ ಅಪರಾಧದ ಮೊಟ್ಟೆ ಯಿಂದ ಎಂತಹ ವಿಷಜಂತು ಹುಟ್ಟಿಕೊಳ್ಳುವುದೋ. ಎಷ್ಟೊಂದು ಜನವನ್ನು ಆಹುತಿ ತೆಗೆದುಕೊಳ್ಳುವುದೋ ಎನ್ನುವ ಭಯವಿದ್ದೇ ಇತ್ತು.

ಬೆಂಗಳೂರಿಗೆ ಬಂದ ರಾಮಚಂದ್ರನಿಗೂ ಮನಸ್ಸಿಗೆ ನೆಮ್ಮದಿಯಿರಲಿಲ್ಲ. ಶಾರದೆಯನ್ನು ಹೆಂಡತಿಯನ್ನಾಗಿ ತಿಳಿಯಲು ಅವನ ಮನಸ್ಸು ಒಪ್ಪದಾಗಿತ್ತು. ಶಾರದೆ ಕಪ್ಪಾಗಿದ್ದರೂ ನೋಡಲು ಸ್ಫುರದ್ರೂಪಿಯಾಗಿದ್ದಳು. ಅವಳ ತಿದ್ದಿದ ಮುಖ ಎಂಥವರಿಗೂ ಆಹ್ಲಾದಕೊಡಬಲ್ಲದು. ಅದರಲ್ಲಿ ಎಂತಹದೋ ಒಂದು ಸೌಮ್ಯಕಳೆ ಮನೆಮಾಡಿಕೊಂಡಿತ್ತು. ಅವಳ ಯೌವನಕ್ಕೆ ಎಂತಹ ವರ ಮೇಲೂ ಸಮ್ಮೋಹನಾಸ್ತ್ರ ಬೀರಬಲ್ಲ ಶಕ್ತಿಯಿತ್ತು. ಅವಳ ತುಂಬು ಮೈ ಚೆಲುವಾದ ನಿಲವು ಇವುಗಳನ್ನು ಕಂಡವರು ಶಾರದೆಯನ್ನು ಚಲುವೆಯೆಂದೇ ಹೇಳಬೇಕು. ಆದರೂ ಶ್ಯಾಮಲೆಯೊಂದಿಗೆ ಹೋಲಿಸಿದಾಗ ಮಾತ್ರ ಅವಳ ಮೈ ಬಣ್ಣ ಅವಳ ಸೌಂದರ್ಯಕ್ಕೆ ಅಂಟಿದ ಕಳಂಕವಾಗಿ ಅವಳ ಚೆಲುವನ್ನು ಸಪ್ಪೆಗೊಳಿಸುತ್ತಿತ್ತು. ಶ್ಯಾಮಲೆಯ ಮೋಹದ ರೂಪಕ್ಕೆ ಬಾಯಿಬಿಟ್ಟಿದ್ದ ರಾಮಚಂದ್ರನಿಗೆ ಶಾರದೆ ಕರಿಯ ಹೆಗ್ಗಣವಾಗಿ ಕಂಡಳು. ಅವನಿಗೆ ಶಾರದೆ ಎಂದರೆ ಅಷ್ಟು ಜಿಗುಪ್ಸೆ. ಇಂತಹವಳಿಗೆ ತಾನು ತಾಳಿಕಟ್ಟಿ ಹೆಂಡತಿಯನ್ನಾಗಿ ಮಾಡಿಕೊಂಡೆನಲ್ಲಾ ಎಂದು ಅವನಿಗೆ ತುಂಬಾ ಬೇಸರ. ಹುಡುಗಿಯ ಕತ್ತಿಗ ತಾಳಿ ಬಿಗಿಯದೇ ಲಗ್ನಮಂಟಪದಲ್ಲಿಯೇ ಎದ್ದು ಬಂದಿದ್ದರೆ ಚೆನ್ನಾಗಿತ್ತು. ಎಂದು ನೂರು ಬಾರಿ ಅಂದುಕೊಂಡ. ಆದರೇನು? ಇದು ಮೋಸದ ಮದುವೆ. ತಾನು ಹುಡುಗಿಯನ್ನು ಒಮ್ಮನಸ್ಸಿನಿಂದ ಮದುವೆಯಾಗಿಲ್ಲ. ಹುಡುಗಿಗೆ ಮಾಂಗಲ್ಯ ಕಟ್ಟಿದಾಕ್ಷಣಕ್ಕೆ ತಾನು ಅವಳ ಗಂಡನಾಗಿ ಬಿಟ್ಟೆನೇ ಎಂದು ಸಮಾಧಾನ ತಂದುಕೊಂಡನು. ಆದರೆ ಜಗತ್ತು ಬಾರಿ ಬಾರಿಗೂ ಅವನ ವಿಚಾರದ ಕಣ್ಣನ್ನು ಕುಕ್ಕಿ 'ಶಾರದೆ ನಿನಗೆ ಬೇಕಿರಲಿ—ಬೇಕಿಲ್ಲದಿರಲಿ, ಆಕೆ ನಿನ್ನ ಹೆಂಡತಿ, ನಿನ್ನ ಧರ್ಮಪತ್ನಿ ಎಂದು ಹಂಗಿಸುತ್ತಿತ್ತು. ರಾಮಚಂದ್ರ ಈ ಕರಾಳ ಸತ್ಯವನ್ನು ಎದುರಿಸಲಾರದೆ, ಥರಥರ ನಡುಗುತ್ತಿದ್ದ. ಮನದಲ್ಲೇ ಮರುಗುತ್ತಿದ್ದ. ದಿನಕಳೆದಂತೆ ಅವನಿಗೆ ಊಟತಿಂಡಿಗಳಲ್ಲಿ ಆಸಕ್ತಿ ಕಡಿಮೆ ಯಾಗಿ ಮನೋರೋಗ ತಂದುಕೊಂಡು ಒಂದೇ ಸಮನೆ ಸವೆಯತೊಡಗಿದ.

ರಾಮಚಂದ್ರ ಮದುವೆಯನ್ನು ಮುಗಿಸಿಕೊಂಡು ಊರಿಗೆ ಬಂದು ಒಂದು ವಾರವಾದರೂ ತಂದೆಗೆ ಮುಖತೋರಿಸಲಿಲ್ಲ. ತಂದೆಗೆ ಮುಖ ತೋರಿಸಲು ಅವನಿಗೆ ತುಂಬಾಹೀನಾಯ. ಆಸ್ಪತ್ರೆಯಲ್ಲಿ ಶ್ರೀಕಂಠಪ್ಪ ಮದುವೆ ಮಾಡಿಕೊಂಡ ಮಗನು ನೊಸೆಯೊಡನೆ ಇಂದು ಬರುತ್ತಾನೆ, ನಾಳೆ ಬರು

ತ್ತಾನೆಂದು ಪ್ರತಿದಿವಸ ಕಾದು ನಿರಾಶೆಗೊಂಡರು. ಮದುವೆಯಾಗಿ ವಾರವಾದರೂ ಮಗ ತನ್ನನ್ನು ಕಾಣಲು ಬಾರದುದನ್ನು ಕಂಡು ಅವರಿಗೆ ಗಾಭರಿಯಾಗಿ ಮಗನ ವಿಳಾಸಕ್ಕೆ ಕಾಗದ ಬರೆಸಿದರು. ಆ ಕಾಗದ ಕಂಡು ರಾಮಚಂದ್ರನಿಗೆ ತನ್ನ ತಪ್ಪಿನ ಅರಿವಾಗಿ ತಂದೆಯನ್ನು ನೋಡಲು ಆಸ್ಪತ್ರೆಗೆ ಓಡಿಬಂದನು. ಶ್ರೀಕಂಠಪ್ಪ ಮಗನ ನಿಸ್ತೇಜಮುಖವನ್ನು ನೋಡಿಯೇ ಹೆದರಿದರು.

" ಆರೋಗ್ಯವಾಗಿದ್ದಿಯಾ ರಾಮೂ ? " ಎಂದರು ಕ್ಷೀಣಧ್ವನಿಯಲ್ಲಿ.

ರಾಮಚಂದ್ರ ಅಷ್ಟೇ ಕ್ಷೀಣಧ್ವನಿಯಲ್ಲಿ 'ಹ್ಞೂಂ' ಎಂದ. ಮಗನ ಮುಖದಲ್ಲಿಯೂ, ಧ್ವನಿಯಲ್ಲಿಯೂ ನಿರುತ್ಸಾಹವನ್ನು ಕಂಡು ಶ್ರೀಕಂಠಪ್ಪ ಕೇಳಿದರು. " ಯಾಕೆ ತುಂಬಾ ಸಪ್ಪಗಿದ್ದಿಯಾ. ಮೈಯಲ್ಲಿ ಚೆನ್ನಾಗಿಲ್ಲವೇ ?" ರಾಮಚಂದ್ರ ಕೃತಕನಗೆ ನಗುತ್ತಾ ತಂದೆಯನ್ನು ನೋಡಿದ.

" ನೀನು ಮದುವೆಯಾದ ಮೇಲೆ ನನ್ನನ್ನು ಬಂದು ಕಾಣುವುದಾಗಿ ನಾನು ತುಂಬಾ ಆಶೆಯಿಟ್ಟುಕೊಂಡಿದ್ದೆ. ನೀನು ಈ ಕಡೆ ಅಡ್ಡಾಡಲಿಲ್ಲ. ಯಾಕೆ ? ಮದುವೆಯಲ್ಲಿ ಏನಾದರೂ ಅಚಾತುರ್ಯ ನಡೆಯಿತೆ ? " ರಾಮಚಂದ್ರನಿಗೆ ಆಸ್ಪತ್ರೆಯ ಆವರಣದಲ್ಲಿ, ನಡೆದ ಕಥೆಯನ್ನು ಹೇಳಲು ಮೊದಲು ಸಂಕೋಚವೆನಿಸಿತು. ಅಲ್ಲದೆ ನಡೆದ ವಿಷಯವನ್ನು ಕೇಳಿ ತಂದೆಯ ಮನಶ್ಶಾಂತಿ ಕದಡಿದರೆ ಕೊರಗಹತ್ತಿ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟಾಗಬಹುದೆಂದು ಹೆದರಿದನು. ಆದರೂ ತಂದೆಯ ಉದ್ವೇಗವನ್ನು ಕಂಡು ಸುಮ್ಮನಿರಲಾರದೆ, ನಾಲ್ಕೇ ಮಾತಿನಲ್ಲಿ ಮದುವೆಯ ವೈಭವವನ್ನು ಹೇಳಿದನು. ಆದರೆ ತನಗೆ ಮೋಸಮಾಡಿ ಕಪ್ಪು ಹುಡುಗಿಯನ್ನು ಗಂಟು ಹಾಕಿದ ಕಥೆ, ತಾನು ಬರುವಾಗ ಅವರು ಕೊಟ್ಟಿದ್ದ ಸಾಮಾನನ್ನು ಅಲ್ಲೇ ಬಿಸಾಡಿ ಹುಡುಗಿಯ ಸಂಬಂಧವನ್ನು ಕತ್ತರಿಸಿಕೊಂಡು ಬಂದ ಕಥೆಗಳನ್ನು ಮಾತ್ರ ತಿಳಿಸಲಿಲ್ಲ, ದುರ್ಬಲಹೃದಯಿಯಾದ ತಂದೆಗೆ ಮನೋಘಾತವಾದೀತೆಂದು ಹೆದರಿ.

ಮಗನ ಭೇಟಿಯಿಂದ ಶ್ರೀಕಂಠಪ್ಪನಿಗೆ ಆಗಬೇಕಾಗಿದ್ದ ಸಂತೋಷವಾಗಲಿಲ್ಲ. ಮದುವೆಯ ಮುನ್ನ ಹುಡುಗಿಯನ್ನು ಒಪ್ಪಿಬಂದ ದಿನಗಳಲ್ಲಿ ಮಗನಲ್ಲಿದ್ದ ಸಂತೋಷ, ಉತ್ಸಾಹ, ಲವಲವಿಕೆಗಳು ಈಗ ಮದುವೆಯಾದ ಮೇಲೆ ದ್ವಿಗುಣಿಸುವ ಬದಲು ಬತ್ತಿ ಹೋಗಿರುವುದನ್ನು ಕಂಡು ಅವರಿಗೇಕೋ

ಕೆಡಕೆನಿಸಿತು. ಮದುವೆಯಲ್ಲಿ ಏನೋ ನಡೆದಿದೆ. ತನ್ನೊಂದಿಗೆ ಅದನ್ನು ಹೇಳಲು ಮಗ ಸಂಕೋಚಪಟ್ಟುಕೊಳ್ಳುತ್ತಿದ್ದಾನೆ. ಎಂದು ಅವರಿಗೆ ತಿಳಿದು ಹೋಯಿತು. ಒಂದು ದಿನ ರಾಮಚಂದ್ರ ಅವರನ್ನು ಕಾಣಬಂದಾಗ ಹೀಗೆಂದರು. "ರಾಮೂ, ನೀನು ತುಂಬಾ ಬಡವಾಗುತ್ತಿದ್ದೀ. ನೀನು ಮೊದಲಿನಂತೆ ಉಂಡು ತಿಂದು ಮಾಡುತ್ತಿದ್ದಿಯೋ ಇಲ್ಲವೋ ಕಾಣೆ! ನೀನು ಮನಸ್ಸಿನಲ್ಲಿ ಏನನ್ನೋ ಚಿಂತಿಸುತ್ತಿದ್ದಿಯೆ. ಬಹುಶಃ ನಾನು ನಿನ್ನಿಂದ ಹಣ ಖರ್ಚು ಮಾಡಿಸುತ್ತಿದ್ದೇನೆ. ಸಾಯದೇ ಇನ್ನೂ ಬದುಕಿದ್ದೇನೆ ಎಂದೋ ಏನೋ........"

ರಾಮಚಂದ್ರ ಈ ಮಾತನ್ನು ಕೇಳಿ ತುಂಬಾ ನೊಂದುಕೊಂಡನು.

"ಅಣ್ಣಾ, ಈ ಮಾತು ಹೇಳಬೇಡ. ನೀನು ಸಾವಿರವರ್ಷ ಬದುಕು. ನೊದಲು ನಿನ್ನ ಖಾಯಿಲೆ ವಾಸಿಯಾಗಲಿ. ಹಣ ಇನ್ನಿಷ್ಟು ಖರ್ಚಾಗಲಿ, ಚಿಂತೆ ಇಲ್ಲ. ನೀನು ಸಂಪಾದಿಸಿದ ಆಸ್ತಿಯ ಚಿಕಿತ್ಸೆಗೂ ನಿನ್ನದೇ ಆಗಿದೆ. ಅದೂ ನಾಲದೇ ಹೋದರೆ ಪ್ರಾಣವನ್ನಾದರೂ ಒತ್ತೆಯಿಟ್ಟು ನಿನ್ನನ್ನು ನೋಡಿ ಕೊಳ್ಳುತ್ತೇನೆಯೇ ಹೊರತು ನಿನ್ನನ್ನು ಕೈ ಬಿಡುವುದಿಲ್ಲ."

ಈ ಮಾತು ಕೇಳಿ ಶ್ರೀಕಂಠಪ್ಪನವರ ಮುಖದ ಮೇಲೆ ಸಮಾಧಾನದ ನಗೆ ಕಾಣಿಸಿಕೊಂಡಿತು.

"ಹಾಗಾದರೆ ನೀನೇಕೆ ಚಿಂತಿಸುವುದು? ನಿನ್ನ ಕೊರಗಿಗೆ ಕಾರಣ ವಾದರೂ ಏನು? ಮದುವೆಯ ಮೊದಲು ಇದ್ದ ನಿನ್ನ ಉತ್ಸಾಹ ಅದೆಲ್ಲಿ ಹೋಯಿತು?"

ರಾಮಚಂದ್ರನಿಗೆ ನಡೆದ ಕಥೆಯನ್ನು ಹೇಳದಹೊರತು ಈಗ ಗತ್ಯಂತರ ವಿಲ್ಲ. ಸೂಕ್ಷ್ಮವಾಗಿ ಶ್ಯಾಮಣ್ಣನವರು ತನಗೆ ಮೋಸಮಾಡಿದ ಕಥೆ ಹೇಳಿದ. ಶ್ರೀಕಂಠಪ್ಪ ಕೇಳಿ ತುಂಬಾ ನೊಂದುಕೊಂಡರು. ತನ್ನ ಏಕಮಾತ್ರ ಪುತ್ರನಿಗೆ ಇಂತಹ ಅನ್ಯಾಯವಾಗಬಹುದೇ? ಎಂದು ಮನಸ್ಸಿನಲ್ಲಿ ಮರುಗಿದರು. ತಾನು ಗಟ್ಟಿ ಮುಟ್ಟಿಯಾಗಿದ್ದರೆ ಮಗನ ಪಾಡು ಖಂಡಿತ ಹೀಗಾಗುತ್ತಿರಲಿಲ್ಲ, ಎಂದು ಬಿಸುಸುಯ್ದರು.

'ರಾಮೂ ಹುಡುಗಿ ಕಪ್ಪೆಂದರೆ ಎಷ್ಟು ಕಪ್ಪು? ಆ ನರ್ಸನಷ್ಟು ಕಪ್ಪೇ?' ಎಂದು ವರಾಂಡದಲ್ಲಿ ಯಾವನೋ ರೋಗಿಯ ಉಷ್ಣಾಂಶ

ವನ್ನು ಆಳಿಯಲು ಬಂದಿದ್ದ ಇಂಡಿಯನ್ ಕ್ರಿಶ್ಚಿಯನ್ ಹುಡುಗಿಯನ್ನು ತೋರಿಸಿದರು.

ರಾಮಚಂದ್ರ ಆ ನರ್ಸ್‌ನ ಮುಖ ನೋಡಿದ. ಆ ಹುಡುಗಿ ಇದ್ದಲಿಗಿಂತಲೂ ಕಪ್ಪಾಗಿದ್ದಳು. ಅವಳು ತೊಟ್ಟಿದ್ದ ಚಲುವೆ ಮಾಡಿದ ಬಿಳಿಯ ಉಡುಪಿನಲ್ಲಿ ಆಕೆಯ ಮುಖ ಕಪ್ಪಗೆ ಮಿನುಗುತ್ತಿತ್ತು. ರಾಮಚಂದ್ರನಿಗೆ ನಗು ಬಂತು.

ಶಾರದೆ ಅಷ್ಟು ಕಪ್ಪಾಗಿಲ್ಲವೆಂದು ತಂದೆಗೆ ಹೇಳಿದ. ಆಗ ಶ್ರೀಕಂಠಪ್ಪನಿಗೆ ಕೊಂಚ ಸಮಾಧಾನ.

"ಹಾಗಾದರೆ ಹುಡುಗಿ ಅಂತಹ ಕಪ್ಪೇನೂ ಅಲ್ಲ..........ಕೊಂಚ ಆಲೋಚಿಸಿ ಮಾತು ಮುಂದುವರಿಸಿದರು.

"ಎಣ್ಣೆಗಪ್ಪಾಗಿದ್ದರೇನಂತೆ. ನೋಡಲು ಲಕ್ಷಣವಾಗಿದ್ದಾಳೆ ತಾನೆ?"

ರಾಮಚಂದ್ರ ಹ್ಞೂಗುಟ್ಟಿದ.

"ರಾಮೂ ನೀನೇನೂ ತಿಳಿಯಬೇಡ. ಸಾಯುವ ಮುನ್ನ ನನ್ನ ಸೊಸೆಯನ್ನೊಮ್ಮೆ ನಾನು ನೋಡಬಹುದೇ?"

ತಂದೆಯ ದನಿಯಲ್ಲಿ ದೈನ್ಯವಿತ್ತು. ಮಗ ಸುಮ್ಮನಿದ್ದ.

'ರಾಮೂ ಅವಳನ್ನೊಮ್ಮೆ ಕರೆತಂದು ತೋರಿಸಲಾರೆಯಾ?'

ರಾಮಚಂದ್ರ ಆಲೋಚಿಸುತ್ತಿದ್ದ.

"ನಾನು ಹೆಚ್ಚೆಂದರೆ ಇನ್ನೊಂದು ತಿಂಗಳು ಬದುಕಿದ್ದೇನು."

ಮಗ ಸಾವಿನ ಸುದ್ದಿ ಎತ್ತಬಾರದೆಂದು ಗದರಿಕೊಂಡ.

"ನನಗೆ ಆರು ತಿಂಗಳ ಹಿಂದೆಯೇ ಕರೆಬಂದಿತ್ತು. ನಿನ್ನ ಮದುವೆಯನ್ನು ನೋಡಿ ನಿಶ್ಚಿಂತೆಯಿಂದ ಹೊರಟು ಬರುವುದಾಗಿ ಯಮರಾಯನಿಗೆ ಮಾತು ಕೊಟ್ಟಿದ್ದೆ. ನನ್ನ ಅವಧಿ ಇನ್ನೇನು ಮುಗಿಯುತ್ತಾ ಬಂದಿದೆ. ಅಂದು ನನ್ನ ಮಾತಿನಂತೆ ಮದುವೆಗೆ ಒಪ್ಪಿದೆ. ಇಂದು ಮದುವೆಯಾದ ಹೆಂಡತಿಯನ್ನು ಒಮ್ಮೆ ಕರೆತರಬಾರದೇ?"

ಶ್ರೀಕಂಠಪ್ಪನಿಗೆ ಕೆಮ್ಮು ಒತ್ತರಿಸಿಕೊಂಡು ಬಂತು. ಕೆಮ್ಮಿನೊಂದಿಗೆ ರಕ್ತಮಯವಾಗಿದ್ದ ಶ್ಲೇಷ್ಮ ಕೆಪ್ಪು ಹೆಪ್ಪಾಗಿ ಹೊರಬಿತ್ತು. ದಾದಿಯೊಬ್ಬಳು ಕೊಠಡಿಗೆ ಬಂದು ಹೊರಗಿನ ಶೀತಲಗಾಳಿ ಒಳಗೆ ಬರದಂತೆ ಮುಚ್ಚಿ ಮಾತು

ಸಾಕೆಂದು ರಾಮಚಂದ್ರನಿಗೆ ಸಂಜ್ಞೆಮಾಡಿದಳು. ರಾಮಚಂದ್ರ ಹೊರಡಲು ಅನುವಾದ.

ಶ್ರೀಕಂಠಪ್ಪ "ನನ್ನ ಮಾತು ?" ಎಂದರು.

"ಆಗಲಿ ನೋಡೋಣ" ಎಂದು ಹೇಳುತ್ತಾ ರಾಮಚಂದ್ರ ಅಲ್ಲಿಂದ ಎದ್ದು ಹೊರಟ.

ರಾಮಚಂದ್ರ ದಾರಿಯುದ್ದಕ್ಕೂ ಯೋಚಿಸುತ್ತಾ ಹೆಜ್ಜೆಹಾಕಿದ. ತಂದೆ ಮಗನ ಮೇಲಿನ ಪ್ರೇಮದಿಂದ—ಅಧಿಕಾರ ವಾಣಿಯಿಂದಲ್ಲ—ದೈನ್ಯದಿಂದ ಪ್ರಾರ್ಥಿಸುತ್ತಿದ್ದಾರೆ, ಒಮ್ಮೆ ಸೊಸೆಯ ದರ್ಶನ ಮಾಡಿಸು ಎಂದು. ಹೆಂಡತಿ ಯನ್ನು ಕರೆತಂದು ತೋರಿಸಬೇಕೆ ? ಬಿಡಬೇಕೆ ? ಕಳೆದ ಮೂರು ನಾಲ್ಕು ತಿಂಗಳಿಂದ ಕೊರಟೆಯ ಕಡೆ ಅವನು ತಲೆಯಿಟ್ಟಿರಲಿಲ್ಲ. ಅವರು ಕೊಟ್ಟಿದ್ದ ಹಬ್ಬದ ಆಮಂತ್ರಣಗಳನ್ನು ತಿರಸ್ಕರಿಸಿದ್ದ. ಶಾರದೆಗೂ ತನಗೂ ಯಾವ ಸಂಬಂಧವೂ ಇಲ್ಲವೆಂದು ಅಂದೇ ಸಾರಿ ಬಂದಿರುವಾಗ ಇಂದು ತಂದೆಗಾಗಿ ತನಗಾದ ಮೋಸವನ್ನು ಮರೆತು ಹೆಂಡತಿಯನ್ನು ಕರೆತಂದು ತೋರಿಸಬೇಕೆ ! ಮನಸ್ಸು ನಿಷ್ಠುರವಾಗಿ ಬೇಡವೆಂದಿತು. ತಂದೆಯ ಕಾರಣದಿಂದ ಅಲ್ಲವೇ ಇಷ್ಟೆಲ್ಲಾ ಅನರ್ಥ ? ತಂದೆಯೂ ಬಲವಂತ ಮಾಡದಿದ್ದರೆ ತಾನು ಆತುರ ದಲ್ಲಿ ದುಡುಕಿ ಶಾರದೆಯ ಕೈ ಹಿಡಿಯುತ್ತಿರಲಿಲ್ಲ. ಈಗ ತಂದೆಗಾಗಿ ಬಿಟ್ಟು ಬಂದ ಹೆಂಡತಿಯ ಮುಖವನ್ನು ಮತ್ತೆ ನೋಡಬೇಕೇ ?

ತಂದೆ ಸೊಸೆಯನ್ನು ಕರೆತರಲು ಮಗನನ್ನು ಬಲವಂತ ಪಡಿಸುತ್ತಲೇ ಬಂದರು. ಮಗ ಆಗಲಿ ಎಂದು ತಳ್ಳುತ್ತಲೇ ಬಂದನು.

ಒಂದು ದಿನ ಬೆಂಗಳೂರಿಗೆ ಯಾವುದೋ ಕೋರ್ಟು ಕೆಲಸಕ್ಕೆ ಬಂದಿದ್ದ ಶ್ಯಾಮಣ್ಣನವರು ಅಳಿಯನನ್ನು ಮಾತನಾಡಿಸಿಕೊಂಡು ಹೋಗಲು ಬಂದರು. ಮನೆಯಲ್ಲಿ ಆ ವೇಳೆಗೆ ಶ್ಯಾಮಲೆಯ ಮದುವೆಯಾಗಿತ್ತು. ಅವಳ ಗಂಡ ಸೀತಾರಾಮು ಹಬ್ಬ ಹರಿದಿನಗಳಿಗೆಲ್ಲ ಹಳ್ಳಿಗೆ ಬಂದಿದ್ದ. ಅವರು ಸಂತೋಷ ವಾಗಿರುವುದನ್ನು ಕಂಡು ಆ ಸುಖ ತನ್ನ ಮಗಳಿಗೆ ಇಲ್ಲದೇ ಹೋಯಿತೇ ಎಂದು ಕಾವೇರಮ್ಮನ ಕರುಳು ಜುರ್‌ಗುಟ್ಟುತ್ತಿತ್ತು. ಅವರು ಮೈದುನನಿಗೆ ಒಂದೇ ಸಮನೆ ಹೇಳತೊಡಗಿದ್ದರು. 'ಮದುವೆ ಮಾಡಿದವರು ನೀವು. ಈಗ ಶಾರದೆಯ ಸಂಸಾರವನ್ನು ನೀವೇ ಕುದುರಿಸಿಕೊಡಿ.'

ಶ್ಯಾಮಣ್ಣನವರದು ಹೆಂಗರುಳು. ಅವರು ಹೆಣ್ಣು ಹೆತ್ತವರು. ಹೆಣ್ಣಿನ ದುಃಖದ ಅರಿವಿತ್ತು. ಶಾರದೆ ಅಣ್ಣನದುಗಳಾದರೂ ಸಾಕಿದವರು ಶ್ಯಾಮಣ್ಣನವರೇ. ಹೇಗಾದರೂ ಮಾಡಿ ರಾಮಚಂದ್ರನ ಸಿಟ್ಟನ್ನು ಕಳೆದು ಅವರ ಸಂಸಾರವನ್ನು ನೆಟ್ಟಗೆ ಮಾಡಬೇಕೆಂದು ರಾಮಚಂದ್ರನನ್ನು ಮಾತಾಡಿಸಿ ಹೋಗಲು ಬಂದರು. ಆದರೆ ಅವರ ಗ್ರಹಚಾರ! ರಾಮಚಂದ್ರ ಊರಿನಲ್ಲಿ ಇರಲಿಲ್ಲ. ಅವನು ಒಂದೆರಡು ದಿನ ರಜ ತೆಗೆದುಕೊಂಡು ಗೆಳೆಯರೊಡನೆ ಪ್ರವಾಸಹೋಗಿದ್ದ. ಶ್ಯಾಮಣ್ಣನವರಿಗೆ ತುಂಬಾ ನಿರಾಶೆಯಾಯಿತು. ಹೇಗೂ ಬಂದದ್ದು ಆಗಿದೆ. ಶ್ರೀಕಂಠಪ್ಪನವರನ್ನೇ ಮಾತನಾಡಿಸಿಕೊಂಡು ಬರೋಣ ಎಂದು ಆಸ್ಪತ್ರೆಗೆ ಹೋದರು. ಶ್ಯಾಮಣ್ಣನವರು ಮದುವೆಯಾದ ಮೇಲೆ ಶ್ರೀಕಂಠಪ್ಪನವರನ್ನುನೋಡುತ್ತಿರುವುದು ಇದೇ ಮೊದಲು. ಶ್ರೀಕಂಠಪ್ಪನವರಿಗೆ ತಟಕ್ಕನೆ ಶ್ಯಾಮಣ್ಣನವರ ಗುರುತು ಸಿಕ್ಕಲಿಲ್ಲ. ಶ್ಯಾಮಣ್ಣನವರಿಗೂ ಅಷ್ಟೆ. ಶ್ರೀಕಂಠಪ್ಪ ತುಂಬಾ ಕೃಶವಾಗಿ ಬಿಟ್ಟಿದರು. ಮೈಯಲ್ಲಿದ್ದ ಮಾಂಸ ಕಂಡಗಳು ಕರಗಿ ಹೋಗಿ ಚಕ್ಕಳದ ಬೊಂಬೆಯಾಗಿದ್ದರು.

" ನನ್ನ ಗುರುತು ನಿಮಗೆ ಸಿಕ್ತಿತೇ? ನಾನು....ಕೊರಟ....ಶ್ಯಾಮಣ್ಣ.... ಆರೋಗ್ಯವಾಗಿದ್ದೀರಾ ?........" ಎಂದರು ಶ್ಯಾಮಣ್ಣನವರು.

" ಏನು ಶ್ಯಾಮಣ್ಣೋರೇ ನೀವು..........." ಎನ್ನುತ್ತಿರುವಾಗಲೇ ಕೆಮ್ಮಿನ ದಾಳಿಗೆ ಆರಂಭವಾಯಿತು. ಕೊಂಚಕಾಲ ಬಿಟ್ಟುಕೊಂಡು ಮತ್ತೆ ಆರಂಭಿಸಿದರು.

" ನಾನು ಹೀಗೆ ಹೇಳ್ತೀನಿ ಅಂತ ನೀವು ಕೋಪಿಸ್ಕೋಬೇಡಿ. ನೀವು ಹಿರಿಯರಾಗಿದ್ದುಕೊಂಡು ನಮ್ಮ ಹುಡುಗನಿಗೆ ಹೀಗೆ ಅನ್ಯಾಯ ಮಾಡ ಬಹುದೇ ? ಇದು ನಿಮಗೆ ಸರಿಯೆ ಸ್ವಾಮಿ ? "

ಶ್ಯಾಮಣ್ಣನವರು ಪಕ್ಕನೆ ನಾಲಿಗೆ ಕಚ್ಚಿಕೊಂಡರು. ಶ್ರೀಕಂಠಪ್ಪನಿಗೆ ಈ ವಿಷಯ ಎಲ್ಲ ತಿಳಿದಿದೆ ಎಂದುಕೊಂಡು ನಡೆದ ಸಂಗತಿಯನ್ನೆಲ್ಲ ಚಾಚೂ ಬಿಡದೆ ಹೇಳಿದರು.

" ಈಗ ನಮಗೂ ತುಂಬಾ ವ್ಯಥೆಯಾಗುತ್ತಿದೆ. ಹಿರಿಯರ ವಾಕ್ಯದಂತೆ ನೂರು ಸುಳ್ಳು ಹೇಳಿ ಮದುವೆ ಮಾಡಿದೆವು. ಅದರ ಫಲ ಏನೂ ಅರಿಯದ ಆ ಕಂದಮ್ಮ ಅನುಭವಿಸಬೇಕಾಗಿದೆ. ನಾನು ತಪ್ಪು ಮಾಡಿದ್ದೇನೆ. ಇದಕ್ಕೆ

ಪ್ರಾಯಶ್ಚಿತ್ತ ರೂಪದಲ್ಲಿ ಏನು ಹೇಳಿದರೂ—ಮಾಡುತ್ತೇವೆ ನೀವು ದೊಡ್ಡ ಮನಸ್ಸು ಮಾಡಿ ಮುರಿದ ಸಂಸಾರವನ್ನು ಒಂದು ಮಾಡಿಕೊಡಬೇಕು. ಇದು ನಿಮ್ಮಿಂದ ಸಾಧ್ಯ" ಎಂದು ಹನಿಗೂಡಿದ್ದ ಕಣ್ಣನ್ನು ಒರಸಿಕೊಂಡರು.

"ಆಗಿಹೋದದ್ದನ್ನು ನೆನೆಸಿಕೊಂಡು ನೀವೇಕೆ ಮರುಗಬೇಕು. ಅವನ ಹಣೆಯಲ್ಲಿ ಅವಳನ್ನೇ ಮದುವೆಯಾಗಬೇಕೆಂದು ಬರೆದಿದ್ರೆ ಯಾರೇನು ಮಾಡ್ತಾರೆ ಹೇಳಿ. ನಿಮಗಿಂತ ಮುಂಚೆ ನಾನೇ ರಾಮೂಗೆ ಹೇಳ್ತಾಇದ್ದೇನೆ. ಕಟ್ಟಿಕೊಂಡ ಮೇಲೆ ಕಪ್ಪು ಅಂತ ಬಿಡೋಕೆ ಆಗುತ್ತ್ಯೆ. ಪಾಲಿಗೆ ಬಂದದ್ದು ಅಂತ ಸಂಸಾರ ಮಾಡಬೇಕು. ಮಾವನ ಮೇಲಿನ ಸಿಟ್ಟನ್ನು ಹುಡುಗಿಯ ಮೇಲೆ ಯಾಕೆ ತೋರಿಸ್ತೀ. ಒಮ್ಮೆ ಹುಡುಗೀನ ಕರೆತಂದು ತೋರಿಸು, ತೋರಿಸು ಅಂತ ಕೇಳಿ ಕೊಳ್ತಿದೀನಿ. ಆದ್ರೂ ಅವನ ಮನಸ್ಸು ಕರಗಲಿಲ್ಲ. ಪಾಪ ಆ ಹೆಣ್ಣು ಮಗಳು ಇವನ ಕೈ ಹಿಡಿದು ಎಷ್ಟು ಸಂಕಟ ಪಟ್ಟು ಕೊಂಡಾಳೋ........"

ಮತ್ತೆ ಕೆಮ್ಮಿನ ಅವಾಂತರವಾಯಿತು.

"ಶಾಮಣ್ಣೋರೆ ನಂದೊಂದು ಮಾತಿದೆ. ನಡೆಸಿಕೊಡ್ತೀರಾ?"

"ಹ್ಞಾಂ. ಆಗೋದಾದ್ರೆ ಖಂಡಿತ ನಡೆಸಿಕೊಡ್ತೇನೆ"

"ಏನಿಲ್ಲ. ಮಗನ ಮದುವೆಯೇನೋ ಆಯ್ತು. ಸೊಸೆಯನ್ನು ನಾನು ನೋಡೋಕೆ ಆಗಲಿಲ್ಲ. ಒಮ್ಮೆ ಕರೆತಂದು ತೋರಿಸ್ತೀರಾ? ಸಾಯೋ ಮುನ್ನ ಸೊಸೇನ್ನ ಮಗನ ಉಡಿಗೆ ಹಾಕಿ ಅವರು ಒಂದಾಗೋದನ್ನು ಕಣ್ಣಿಂದ ನೋಡಿ ಸಂತೋಷವಾಗಿ ಪ್ರಾಣ ಬಿಡಬೇಕೂಂತ ಇದ್ದೇನೆ—"

ಈ ಮಾತು ಕೇಳಿ ಶ್ಯಾಮಣ್ಣನವರು ಶ್ರೀಕಂಠಪ್ಪನವರಿಗೆ ಕೂತಲ್ಲಿಂದಲೇ ಕೈಮುಗಿದು ಅವರು ತಮ್ಮ ಭಾಗದ ದೇವರೆಂದೇ ತಿಳಿದರು.

"ಆಗಲಿ ಖಂಡಿತ ಕರೆತರುತ್ತೇನೆ" ಎಂದು ಹೇಳಿ ಶ್ರೀಕಂಠಪ್ಪನಿಂದ ಬೀಳ್ಕೊಂಡರು.

ಈ ಭೇಟಿ ನಡೆದ ಮೂರನೆಯ ದಿನವೇ ಶ್ಯಾಮಣ್ಣನವರು ಶಾರದೆ ಯೊಂದಿಗೆ ಆಸ್ಪತ್ರೆಯಲ್ಲಿ ಹಾಜರಾದರು. ಶಾರದೆ ಮದುವೆಯಾದ ಮೇಲೆ ತುಂಬಾ ತೆಗೆದು ಹೋಗಿದ್ದಳು. ಅವಳ ಮುಖದಲ್ಲಿ ಕಾಂತಿ ಎಂದಿನಂತೆ ಬಾಡದಿದ್ದರೂ, ದೇಹ ಮನಸ್ಸು ತುಂಬಾ ಸೊರಗಿತ್ತು. ಅವಳು ಮಾವನನ್ನು

ಕಾಣಲು ಹೆಚ್ಚಿನ ಆಡಂಬರಕ್ಕೆ ಹೋಗದೆ ಒಂದು ಬಿಳಿಯ ವಾಯಿಲ್ ಸೀರೆ, ಗುಲಾಬಿ ಬಣ್ಣದ ರವಿಕೆತೊಟ್ಟು ಬಂದಿದ್ದಳು. ಅವಳು ಮಾವನನ್ನು ಕಂಡೊಡನೆಯೇ ಅವರ ಕಾಲಿಗೆ ನಮಸ್ಕರಿಸಿ ಬಿಕ್ಕಿ ಬಿಕ್ಕಿ ಅತ್ತಳು. ಶ್ರೀಕಂಠಪ್ಪನೇ ಅವಳನ್ನು ಸಮಾಧಾನ ಪಡಿಸಿದರು. ಹುಡುಗಿಯನ್ನು ಕ್ಷಣಕಾಲದಿಟ್ಟಿಸಿ ನೋಡಿ 'ಹುಡುಗಿ ಕಪ್ಪಾಗಿದ್ದರೂ ಎಷ್ಟು ಚೆನ್ನಾಗಿದ್ದಾಳೆ–ಕೆತ್ತಿದ ಬೊಂಬೆಯಂತೆ ಇರುವ ಇವಳನ್ನು ಕಡೆಗಣಿಸಲು ನಮ್ಮ ರಾಮೂಗೆ ಅದು ಹೇಗೆ ಮನಸ್ಸಾಯಿತು' ಎಂದು ತಮ್ಮಲ್ಲೇ ಅಂದುಕೊಂಡರು.

ಅದೇ ಹೊತ್ತಿಗೆ ಧರ್ಮಕರ್ಮ ಸಂಯೋಗದಿಂದಲೋ ಅಥವಾ ಶಾರದೆಯ ಶಾಪವಿಮೋಚನೆಗಾಗಿಯೋ ಎಂಬಂತೆ ಪ್ರವಾಸ ಹೋಗಿದ್ದ ರಾಮಚಂದ್ರ ಊರಿಗೆ ಹಿಂತಿರುಗಿ ತಂದೆಯನ್ನು ನೋಡಲು ಆಸ್ಪತ್ರೆಗೆ ಬಂದನು. ಅವನಿಗೆ ಹತ್ತುಮಾರು ದೂರದಲ್ಲೇ ತಂದೆಯ ವಾರ್ಡಿನಲ್ಲಿ ಹೊಸಬರು ಇರುವ ವಿಷಯ ತಿಳಿಯಿತು. ಯಾರೆಂದು ನೋಡಲು ಆತುರವಾಗಿ ಬಂದ. ಮೊದಲು ಕಣ್ಣಿಗೆ ಬಿದ್ದ ವ್ಯಕ್ತಿ ಎಂದರೆ ನಿರಾಭರಣ ಸುಂದರಿಯಾಗಿದ್ದ ಶಾರದೆ! ಅವಳನ್ನು ನೋಡಿ ಕ್ಷಣಕಾಲಬೆರಗಾಗಿ ನಿಂತುಬಿಟ್ಟ. ಶಾರದೆಯೂ ರಾಮಚಂದ್ರನನ್ನು ನೋಡಿದಳು. ಅವಳ ದೇಹದಲ್ಲಿ ವಿದ್ಯುಚ್ಛಕ್ತಿಯ ಸಂಚಾರವಾಯಿತು. ಹೃದಯ ಉದ್ವೇಗದಿಂದ ಹೊಡೆದುಕೊಂಡಿತು. ಕೆಲವು ತಿಂಗಳ ಹಿಂದೆ ತನ್ನನ್ನು ತೊರೆದು ಹೋಗಿದ್ದ ತನ್ನ ಸ್ವಾಮಿಯನ್ನು ಹೀಗೆ ಹಠಾತ್ತಾಗಿ ಸಂದರ್ಶಿಸಿದಾಗ ಅವಳ ಭಾವನೆಗಳನ್ನು ಹೀಗೆಂದು ಹೇಳುವುದು ಕಷ್ಟ. ಅವಳಿಗೆ ಏಕಕಾಲದಲ್ಲಿ ಆಶ್ಚರ್ಯವೂ, ಸಂತೋಷವೂ, ದುಃಖವೂ ಉಂಟಾದವು. ರಾಮಚಂದ್ರ ದೃಷ್ಟಿಯನ್ನು ತಂದೆಯ ಕಡೆ ಹೊರಳಿದಾಗ ತಂದೆಯ ಬಳಿ ಕುಳಿತಿದ್ದ ಶ್ಯಾಮಣ್ಣನವರು ಕಣ್ಣಿಗೆ ಬಿದ್ದರು. ಅವರನ್ನು ನೋಡಿದೊಡನೆಯೇ ಅವನ ಮುಖ ಗಂಭೀರವಾಯಿತು. ಕ್ಷಣಾರ್ಧದಲ್ಲಿಯೇ ಗಂಟಿಕ್ಕಿತು. ಒಂದೆರಡು ನಿಮಿಷಗಳು ಯಾರೂ ಮಾತನಾಡಲಿಲ್ಲ. ಕೋಣೆಯನ್ನು ಗಾಢ ಮೌನ ಆಕ್ರಮಿಸಿತ್ತು.

ಶ್ಯಾಮಣ್ಣನವರೇ ಮಾತನಾಡಿಸಿದರು.

"ನೀವು ಎಂದು ಬಂದಿರಿ ?"

ರಾಮಚಂದ್ರ ಸಿಟಿದುಕೊಂಡೇ ಉತ್ತರಿಸಿದ "ಬೆಳಿಗ್ಗೆ"

" ನಾನು ನಿಮ್ಮನ್ನು ಹುಡುಕಿಕೊಂಡು ಮೊನ್ನೆ ಬಂದಿದ್ದೆ ನೀವು ಪ್ರವಾಸ ಹೋಗಿರುವ ವಿಷಯ ತಿಳಿಯಿತು."

ರಾಮಚಂದ್ರ ಸುಮ್ಮನಿದ್ದ.

" ಹಾಗೆಯೇ ಶ್ರೀಕಂಠಪ್ಪನವರನ್ನು ನೋಡಲು ಮನಸ್ಸಾಗಿ ಬಂದೆ. ಅವರು ಶಾರದೆಯನ್ನು ಒಮ್ಮೆ ನೋಡಬೇಕೂಂತ ಅಂದ್ರು"........

" ನೀವು ಅಷ್ಟೇಸಾಕು ಮಾನ ಮರ್ಯಾದೆ ಇಲ್ಲದೆ ಕರೆತಂದು ಬಿಟ್ಟಿರಿ!" ಎಂದು ರಾಮಚಂದ್ರ ಒರಟಾಗಿ ಹೇಳಿದ.

ಈ ಮಾತು ಕೇಳಿ ಶ್ರೀಕಂಠಪ್ಪನವರು ಕೆರಳಿ ಹೇಳಿದರು.

" ರಾಮು, ಹಿರಿಯರೆದುರು ಮಾತನಾಡುವಾಗ ಬಾಯಿಯನ್ನು ಹದ್ದಿನಲ್ಲಿಡು. ಶಾರದೆಯನ್ನು ಅವರಾಗಿ ಕರೆತರಲಿಲ್ಲ. ನಾನೇ ಹೇಳಿ ಕಳುಹಿಸಿ ಕರೆಸಬೇಕಾಯಿತು."

" ಅಂತಹ ಪ್ರಮಾದವೇನಿತ್ತೋ " ಎಂದು ಕೊಂಕು ನುಡಿದ ರಾಮಚಂದ್ರ.

" ನೀನಂತೂ ಮಣ್ಣುತಿಂದು ಹುಡುಗನೆನ್ನಿಸಿಕೊಂಡೆ. ಹಿರಿಯರಾದ ನಾವೂ ನಿನ್ನಂತೆ ಮಣ್ಣುಮುಕ್ಕಬೇಕೋ ''

" ಮಣ್ಣು ಮುಕ್ಕಿಸಿದವರು ಯಾರೋ "

" ಮಣ್ಣು ಮುಕ್ಕುವಾಗ ನಿನ್ನ ಬುದ್ಧಿಯನ್ನು ಯಾರಿಗೆ ಕೊಟ್ಟಿದ್ದೆ? "

" ಇವರು ಹೀಗೆ ಸಂಚು ಮಾಡುವರೆಂದು ಯಾರಿಗೆ ಗೊತ್ತಿತ್ತು."

" ಇವರು ಮಾಡಿದ ಸಂಚಾದರೂ ಏನೋ ಕಾಣೆ "

" ಬಿಳಿ ಹುಡುಗಿಯನ್ನು ತೋರಿಸಿ ಕರೀ ಹುಡುಗಿಯನ್ನು ಕಟ್ಟಿದ್ರು"

" ಕರಿ ಹುಡುಗಿಯೇ ನಿನ್ನ ಹಣೆಯಲ್ಲಿ ಬರೆದಿದ್ದರೆ ಅವರೇನು ಮಾಡುತ್ತಾರೆ ? "

" ಗಂಡನಿದ್ದೂ ವಿಧವೆಯ ಬಾಳು ಬಾಳುವುದು ಅವಳ ಹಣೆಯಲ್ಲಿ ಬರೆದಿದ್ದರೆ—ಯಾರೇನು ಮಾಡ್ತಾರೆ ? "

ಈ ಮಾತು ಕೇಳಿ ಶ್ರೀಕಂಠಪ್ಪನಿಗೆ ತಡೆಯಲಾರದ ಸಿಟ್ಟುಬಂತು.

" ಮಾಡೋದೇನೂ ಇಲ್ಲ. ನಿನ್ನಂಥ ಕಲ್ಲೆದೆಯವನ ಮುಂದೆ ತಲೆ ಚಚ್ಚಿಕೊಳ್ಳಬೇಕು." ಎಂದು ಏದುತ್ತಾ ಹೇಳಿದರು. ಶ್ರೀಕಂಠಪ್ಪ ತುಂಬಾ

ಮಾತನಾಡಿದುದರಿಂದ ಅವರ ಉಚ್ಛ್ವಾಸ ನಿಶ್ವಾಸ ಹೆಚ್ಚಾಗಿ ಬಾಯಿ ಆರಿತು. ಎದೆ ಒಂದಕ್ಕೆ ಸೂರ್ಮಾಡಿಯಾಗಿ ಹೊಡೆದುಕೊಳ್ಳತೊಡಗಿತು.

"ಮಾವ ನನ್ನ ದೆಸೆಯಿಂದ ತಂದೆ ಮಕ್ಕಳಿಗೇಕೆ ವೈಮನಸ್ಸು? ಅವರಂದಂತೆ ವಿಧವೆಯ ಬಾಳು ನನ್ನ ಕರ್ಮ ಎಂದು ಕೊಳ್ಳುತ್ತೇನೆ. ನನಗಾಗಿ ಮಾತನಾಡಿ ನೀವೇಕೆ ದಣಿಯಬೇಕು. ಮಲಗಿಕೊಳ್ಳಿ ಮಾವ........ಸುಮ್ಮನಾಗಿ ಮಾವ........" ಎಂದು ಬಲವಂತವಾಗಿ ಭುಜಹಿಡಿದು ಮಲಗಿಸಿ, ಕಿತ್ತಳೆ ಹಣ್ಣನ್ನು ಸುಲಿದು ಅದರ ತೊಳೆಯಿಂದ ಬಾಯನ್ನು ಒಪ್ಪೆಮಾಡಿದಳು. ಶಾರದೆ.

ಶ್ಯಾಮಣ್ಣನವರು ತಂದೆ ಮಕ್ಕಳ ಸಂವಾದವನ್ನು ಕೇಳುತ್ತಾ ಅಪರಾಧಿಯಂತೆ ಕುಳಿತಿದ್ದರು. ಶ್ರೀಕಂಠಪ್ಪ ಕಿತ್ತಳೆಯ ತೊಳೆಯನ್ನು ತಿನ್ನುತ್ತಾ "ಇಂತಹ ಚಿನ್ನದಂತಹ ಹುಡುಗಿ, ಭಾಗ್ಯಲಕ್ಷ್ಮಿಯಾಗಿ ಮನೆಗೆ ಬನ್ತೇನೇಂದ್ರೆ ಕಾಲಿನಿಂದ ಒದೆಯುತ್ತೀಯಾ? ಯೋಚನೆ ಮಾಡು........ಈಗಲೂ ಕಾಲ ಮಿಂಚಿಹೋಗಿಲ್ಲ...." ಎಂದರು. ರಾಮಚಂದ್ರ ತಂದೆಯನ್ನು ಎವೆಯಿಕ್ಕದೇ ನೋಡುತ್ತಿದ್ದನೇ ಹೊರತು ಮಾತನಾಡಲಿಲ್ಲ.

ಶ್ಯಾಮಣ್ಣನವರು ಮುಖವನ್ನು ಒಂದು ತರಹ ಮಾಡಿಕೊಂಡು, ನಾವಿನ್ನು ಬರುತ್ತೇವೆ. ಅಪ್ಪಣೆ ಕೊಡುತ್ತೀರಾ? ಎಂದರು.

ಶ್ರೀಕಂಠಪ್ಪನವರು "ಹಾಗಾದ್ರೆ ಹೋಗ್ತೀರಾ?........ರಾಮು ಅಷ್ಟು ದೂರದಿಂದ ಬಂದಿರೋ ಇವರಿಗೆ ಏನಾದ್ರೂ ಹೇಳಿ ಕಳುಹಿಸಬಾರದೇ........" ಎಂದರು ಮಗನ ಕಡೆಗೆ ತಿರುಗಿ. ರಾಮಚಂದ್ರ ಸುಮ್ಮನಿದ್ದ. ಶಾರದೆ ಹೋಗುವಾಗ ಮಾವನಿಗೆ ಮತ್ತೊಮ್ಮೆ ನಮಸ್ಕರಿಸಿದಳು.

"ನಮ್ಮ ರಾಮುನಿಗೆ ದೇವರು ಸದ್ಬುದ್ಧಿಯನ್ನು ಕೊಟ್ಟು ನಿನ್ನನ್ನು ಮನೆಗೆ ಕರೆಸಿಕೊಳ್ಳಲಿತಾಯಿ!" ಎಂದು ಮುಕ್ತ ಮನಸ್ಸಿನಿಂದ ಹರಿಸಿದರು. ಅವರು ಹೊರಟು ಹೋದ ಮೇಲೆ ಮಗನಿಗೆ ಹೇಳಿದರು. "ಬಂಗಾರದಂತಹ ಹುಡುಗಿ. ಇವಳ ಕೈ ಬಿಡಬೇಡ ರಾಮು!" ರಾಮಚಂದ್ರ ಅನ್ಯಮನಸ್ಕನಾಗಿ "ಹ್ಞೂಂ" ಎಂದು ತಲೆಯಲ್ಲಾಡಿಸಿ ಮನೆಯ ಕಡೆ ಹೊರಟ.

ಆ ರಾತ್ರೆ ಎಲ್ಲಾ ಶ್ರೀಕಂಠಪ್ಪನವರ ಮನಸ್ಸು ತುಂಬಾ ಕ್ಷುಬ್ಧವಾಗಿತ್ತು. ಸಂಜೆ ತಮ್ಮ ಶಕ್ತಿಮೀರಿ ಮಾತನಾಡಿ ಎದೆಯನ್ನು ಒಣಗಿಸಿಕೊಂಡಿದ್ದರು.

ಹೃದಯದ ರಕ್ತಚಲನೆ ಜೋರಾಗಿತ್ತು. ಉಸಿರಾಟ ಸಹಜವಾಗಿ ನಡೆಯುವ ಬದಲು ಉಬ್ಬಸಕ್ಕೆ ಇಟ್ಟುಕೊಂಡಿತ್ತು. ಗಂಟಲಲ್ಲಿ ಗೊರ್ ಗೊರ್ ಶಬ್ದ. ಅದಕ್ಕೆ ಒಮ್ಮೊಳಪಾಗಿ ಎದೆಯ ಮೂಳೆಗಳನ್ನು ಪುಡಿ ಪುಡಿಗುಟ್ಟಿಸುವ ರಕ್ತ ಮಯವಾದ ಶ್ಲೇಷ್ಮದ ಕೆಮ್ಮು. ಆ ರಾತ್ರಿ ಡಾಕ್ಟರು ಹತ್ತು ಬಾಗಿ ಶ್ರೀಕಂಠಪ್ಪ ನನ್ನು ಪರೀಕ್ಷಿಸಿಕೊಂಡು ಹೋದರು. ಕೆಮ್ಮು ನಿಲ್ಲಲು ಒಂದೆರಡು ಸೂಜಿ ಮದ್ದು ಕೊಟ್ಟರು. ಏನೂ ಫಲಕಾರಿಯಾಗಲಿಲ್ಲ. ಯಾಕೋ ಅನುಮಾನದ 'ಕೇಸ್' ಅಂದುಕೊಂಡು ರಾಮಚಂದ್ರನಿಗೆ ಸುದ್ದಿಕೊಟ್ಟರು. ರಾಮಚಂದ್ರ ಬೇಗನ ಜಾವದ ಚಳಿಯಲ್ಲೇ ನಡುಗುತ್ತಾ ಬಂದ. ಹೊರಗೆ ರಸ್ತೆಯಲ್ಲಿ ಹತ್ತುಮಾರು ದೂರ ಕಾಣದಷ್ಟು ಹಿಮ ಬೀಳುತ್ತಿತ್ತು. ಹಿಮಗಾಳಿಯು ಶಿಲ್ಲು ಹೊಡೆಯುತ್ತಾ ಗಿಡಮರಗಳಿಗೆ ಚಕ್ಕುಲುಗುಲಿ ಇಡುತ್ತಿತ್ತು. ರಾಮ ಚಂದ್ರ ಓಡುತ್ತಾ ಬಂದ. ತಂದೆಯ ವಾರ್ಡಿನ ತುಂಬಾ ಜನಸೇರಿದ್ದರು. ರಾಮಚಂದ್ರ ಬಂದವನೇ ತಂದೆಯನ್ನು ಅಲುಗಿಸಿದ. ಈ ವೇಳೆಗೆ ರಾತ್ರಿ ಎಲ್ಲಾ ಕೆಮ್ಮಿ ಕೆಮ್ಮಿ ಹೃದಯದ ರಕ್ತವನ್ನೆಲ್ಲಾ ಹೊರಚೆಲ್ಲಿದ್ದ ಶ್ರೀಕಂಠಪ್ಪ ಕಣ್ಣು ತೆರೆಯುವುದೇ ಕಷ್ಟವಾಗಿತ್ತು. ಆದರೂ ಕಷ್ಟಪಟ್ಟುಕೊಂಡು ರಾಮ ಚಂದ್ರನನ್ನು ನೋಡಿ ಒಮ್ಮೆ "ರಾಮೂ........ಆ....ಹುಡುಗಿಯ....ಕೈ........" ಎಂದರು. ಹೃದಯದ ಬಡಿತ ನಿಧಾನವಾಗಿ ಸಾಗುತ್ತಿದ್ದುದು ಹಠಾತ್ತನೆ ನಿಂತು ಹೋಯಿತು. ಅವರ ದೇಹದ ಬಿಸಿ ಆರುತ್ತಾ ಬಂದು ಹೊರಗಿನ ಹಿಮಗಾಳಿಯಷ್ಟೇ ಶೀತವಾಯಿತು.

೩

ರಾಮಚಂದ್ರನ ಮದುವೆಯಾಗಿ ಮೂರುವರ್ಷಗಳು ಸಂದಿವೆ. ಇದು ವರೆಗೂ ರಾಮಚಂದ್ರ ಒಮ್ಮೆಯಾದರೂ ಹೆಂಡತಿಯನ್ನು ಏನು ಎಂದು ವಿಚಾ ರಿಸಲಿಲ್ಲ. ಒಂದು ಬಾರಿಯೂ ಆ ಕಡೆ ಸುಳಿಯಲಿಲ್ಲ. ಒಂದು ಕಾಗದ ಬರೆಯಲಿಲ್ಲ. ದಿನಕಳೆದಂತೆ ರಾಮಚಂದ್ರನ ಮನಸ್ಸು ಹದಕ್ಕೆ ಬರುವ ಬದಲು ಇನ್ನಷ್ಟು ಮುರುಡಾಯಿತು. ಈ ಅವಧಿಯಲ್ಲಿ ಶಾರದೆ ತನ್ನ ಹೆಂಡತಿ

ಎಂಬುದನ್ನು ಮರೆತೇ ಬಿಟ್ಟ. ತಂದೆ ಇದ್ದಾಗ ಒಮ್ಮೊಮ್ಮೆ ಶಾರದೆಯ ನೆನಪು ಅವನಿಗೆ ಬರುತ್ತಿತ್ತು. ತಾನು ಮಾಡಿದುದು ಸರಿಯೋ ತಪ್ಪೋ ಎಂದು ಎಂದಾದರೊಮ್ಮೆ ಅಪ್ಪಿತಪ್ಪಿ ವಿಚಾರ ಮಾಡುತ್ತಿದ್ದುದುಂಟು. ಆದರೆ ತಂದೆ ಸತ್ತ ನಂತರ ಅವರ ಚಿತೆಯಲ್ಲಿಯೇ ಶಾರದೆಯ ನೆನಪನ್ನೂ ಸುಟ್ಟು ಬಂದಿದ್ದ. ಈಗ ರಾಮಚಂದ್ರ ನಿರಂಕುಶ ಸಲಗನಂತಾಗಿದ್ದ. ಅವನು ಏನು ಮಾಡಿದರೂ ಯಾಕೆಂದು ಕೇಳುವವರು ದಿಕ್ಕಿಲ್ಲ. ಅವನಲ್ಲಿ ಈಗ ಯೌವನವಿತ್ತು. ತಂದೆಯು ಸತ್ತನಂತರ ಹಳ್ಳಿಯಲ್ಲಿ ಉಳಿದಿದ್ದ ಆಸ್ತಿಗಳನ್ನೆಲ್ಲಾ ಮಾರಿ ಕೈಯ್ಯಲ್ಲಿ ಕೊಂಚಹಣ ಮಾಡಿಕೊಂಡಿದ್ದ. ತನ್ನ ಪಾಲಿಗೆ ಇಲ್ಲದ ಹೆಂಡತಿಯ ಬಗ್ಗೆ ಕೊರಗಿ ಇರುವ ಸುಖವನ್ನು ಏಕೆ ಹಾಳುಮಾಡಿಕೊಳ್ಳಬೇಕೆಂದು ಯೌವನನ ನೂರು ಕರೆಗೆ ಓಗೊಟ್ಟು, ಈಗ ರಾಮಚಂದ್ರ ಸುಖಿ. ಅವನ ಹೃದಯದ ಹಸಿವು ಹಿಂಗಿಸಲು ಹತ್ತುದಾರಿ ಕಂಡುಕೊಂಡಿದ್ದ.

ಅತ್ತ ಹಳ್ಳಿಯಲ್ಲಿ ಕುಳಿತ ಶಾರದೆಗೆ ಈ ಎಲ್ಲ ಸುಖ ಎಲ್ಲಿ ಬರಬೇಕು ? ಅವಳಂತೂ ಈ ನಲವತ್ತು ತಿಂಗಳಲ್ಲಿ ಒಂದಲ್ಲಾ ಒಂದು ದಿನ ಗಂಡ ತನ್ನನ್ನು ಕರಸಿಕೊಳ್ಳುತ್ತಾನೆ ತಾನೂ ಎಲ್ಲರಂತೆ ಸುಖ ಸಂಸಾರ ಮಾಡಿಕೊಂಡಿರಬಹುದೆನ್ನುವ ಕನಸನ್ನು ಹತ್ತುಬಾರಿ ಕಟ್ಟಿ ಹತ್ತುಬಾರಿ ಒಡೆದಿದ್ದಳು. ಗಂಡನ ಅನುಗ್ರಹಕ್ಕಾಗಿ ಕಾದು ಕಾದು ಅವಳು ಈಗ ಹತಾಶಳಾಗಿದ್ದಳು. ಇಂತಹ ಬರಡು ಬಾಳು ತನ್ನ ಹಣೆಯ ಬರಹವೆಂದು ಗಂಡನ ಚಪಲವನ್ನು ಬಿಟ್ಟುಬಿಟ್ಟಳು. ಆದರೆ ತಾಯಿ ಕಾವೇರಮ್ಮ ಈ ಹಂಬಲವನ್ನು ಬಿಡಬೇಕಲ್ಲ. "ಅಯ್ಯೋ ಕಂದ ನೋಡಿ ನೋಡಿ ಎಂತಹ ಹೆಬ್ಬುಲಿಗೆ ನಿನ್ನನ್ನು ಆಹುತಿ ಕೊಟ್ಟೆನಲ್ಲೋ ಎಂದು ಶಾರದೆಯನ್ನು ಕಂಡಾಗಲೆಲ್ಲಾ ಕಣ್ಣೀರಿಡುತ್ತಿದ್ದರು. ಮಾತೆತ್ತಿದರೆ ಶ್ಯಾಮಲೆಯ ಸುಖ ತನ್ನ ಮಗಳಿಗೆ ಇಲ್ಲವಾಯಿತೇ ಎನ್ನುವ ಕೊರಗು ಅವರಿಗೆ.

ಶ್ಯಾಮಲೆ, ಶಾರದ ಒಬ್ಬ ತಾಯಿಮಕ್ಕಳಂತೆ ಹೂವಿನ ಹಾಸಿಗೆಯಲ್ಲೇ ಬೆಳೆದರು. ಕಡೆಗಾದುದೇನು ? ಶ್ಯಾಮಲೆಗೆ ಅನುರೂಪನಾದ ಗಂಡನೇ ಸಿಕ್ಕಿದ. ಹೆಂಡತಿ ಎಂದರೆ ಪ್ರಾಣಬಿಡುವ ಗಂಡ. ಕೋಲಾರದ ಹೈಸ್ಕೂಲಿನಲ್ಲಿ ಕೆಲಸ. ಬರುವ ಆದಾಯ ಅವರಿಗೆ ಸಾಕು. ಪುಟ್ಟಮನೆ—ಪುಟಾಣಿ ಸಂಸಾರ : ಗಂಡ, ಹೆಂಡತಿ, ಮಗು, ಮದುವೆಯಾದ ವರ್ಷವೇ ಶ್ಯಾಮಲೆ

ಸಕಲ ವೈಭವದಿಂದ ಗಂಡನಮನೆ ಸೇರಿದಳು. ಹೊಸ ಸಂಸಾರದ ರಾಣಿ ಪದವಿ ಗೇರಿದಳು. ಕಳೆದ ವರ್ಷವಷ್ಟೇ ಶ್ಯಾಮಲೆಯ ಸಂಸಾರಾಂಬುದಿಗೆ ಚಂದ್ರ ನಂತೆ, ಚಂದ್ರನನ್ನೇ ಹೋಲುವ ರಾಜ ಹುಟ್ಟಿದ. ಮೊಮ್ಮಗನ ಉದಯಕ್ಕೆ ಮನೆ ಮಂದಿ ಮಕ್ಕಳು ಸಂತೋಷಪಟ್ಟರು. ಕಾವೇರಮ್ಮನೂ ಹೆಂಗರುಳಿನ ಸಹಜ ವಾತ್ಸಲ್ಯದಿಂದ ಮಗುವನ್ನು ಎತ್ತಿ ಮುದ್ದಾಡಿದರು. ಮಗುವನ್ನು ಎತ್ತಿಕೊಂಡಾಗಲೆಲ್ಲಾ ತಾವೂ ಇಂತಹ ಮೊಮ್ಮಗನನ್ನು ಕಾಣುವ ಹೃದ ಯಾಂತರಾಳದ ಬಯಕೆ ಆಸೆಗಳೆಲ್ಲ ಕೆರಳಿ ಭೂತವಾಗಿ ಅವರನ್ನು ಒಂದೇ ಸವನೆ ಪೀಡಿಸುವವು. ಈಗ ಶಾರದೆಯು ಹಣೆಯ ಬರಹವನ್ನು ನೆನೆದು ಅಳು ವರು. ಮೊದಲ ದಿನಗಳಲ್ಲಿ ಮನೆಯವರು ಸಮಾಧಾನ ಮಾಡುತ್ತಿದ್ದರು. ಆದರೆ ಇದು ದಿನಂಪ್ರತಿಯ ಗೋಳಾದುದನ್ನು ಕಂಡು ಎಲ್ಲರೂ ನಿರ್ಲಕ್ಷಿಸುತ್ತಾ ನಡೆದರು. ಕಡೆಗೆ ಒಬ್ಬರನ್ನೊಬ್ಬರು ಸಂತೈಸಲು ತಾಯಿ ಮಕ್ಕಳೇ ಉಳಿದರು.

"ಯಾಕಮ್ಮಾ ಅತ್ತೀಯಾ........ನಾನೇ ಗಂಡು, ನಾನೇ ಹೆಣ್ಣು ಅಂತ ತಿಳ್ಕೊಂಡು ಸುಮ್ಮನಿರಬಾರ್ದೆ" ಎಂದು ಮಗಳು ಹೇಳಿದಳು.

"ಮನೆತಪ್ಪಿದ ಮಗಳಾದರೆ ಹಾಗೆ ತಿಳಿಯಬಹುದಾಗಿತ್ತು ಕಂದ. ಆದರೆ ಕೈಹಿಡಿದ ಗಂಡ ಬದುಕಿರುವಾಗ ಮನಸ್ಸು ಮಾಡಿದರೆ ಕ್ಷಣಮಾತ್ರದಲ್ಲಿ ಎಲ್ಲ ಸೌಭಾಗ್ಯವನ್ನು ಕೊಡಬಲ್ಲ ಗಂಡ ಜೀವಂತನಿರುವಾಗ........"

"ಅವನಿಗೆ" ಗಂಡನನ್ನು ಏಕವಚನದಲ್ಲಿ ಸಂಭೋದಿಸಿದುದಕ್ಕಾಗಿ ನಾಲಿಗೆ ಕಚ್ಚಿಕೊಂಡು "ಅವರು" ಎಂದು ತಿದ್ದಿಕೊಂಡಳು ಶಾರದ. ಅವಳಿಗೆ ಗಂಡನ ವಿಷಯದಲ್ಲಿ ಅಷ್ಟು ರೋಸಿಹೋಗಿತ್ತು.

"ಅವರಿಗೆ ನಾನು ಬೇಡವಾಗಿರುವಾಗ ನನಗೂ ಅವರು ಬೇಡವೇಬೇಡ."

"ನಿನ್ನನ್ನು ಬಿಟ್ಟು ಅವರು ಸುಖದಿಂದ ಇರಬಹುದು. ಗಂಡಸರಿಗೆ ಇದು ಸಾಧ್ಯ. ಹೆಂಡತಿಯ ಯಾವ ತಪ್ಪೂ ಇಲ್ಲದೆ ಗಂಡ ಅಕಾರಣವಾಗಿ ಹೆಂಡತಿಯನ್ನು ಬಿಟ್ಟರೂ ಲೋಕದಲ್ಲಿ ಆ ಗಂಡಿಗೆ ಪುರಸ್ಕಾರವಿದೆ. ಆದರೆ ಹೆಣ್ಣಿಗೆ ಪುರಸ್ಕಾರ ಎಲ್ಲಿ ತಾಯಿ ?"

"ಹೆಣ್ಣಿನ ಬಗ್ಗೆ ಏಕೆ ಈ ಪಕ್ಷಪಾತ ?"

"ಈ ಪ್ರಶ್ನೆಗೆ ಸಮಾಜವನ್ನು ಕೇಳು"

" ಸಮಾಜವಂತೆ ಸಮಾಜ. ಗಂಡಸಿಗಾಗಿ ನಿರ್ಮಿತ ಸಮಾಜಕ್ಕೆ ಧಿಕ್ಕಾರ ! ಗಂಡಸು ಸಾವಿರ ತಪ್ಪುಮಾಡಿದರೂ ಅದನ್ನು ಒಪ್ಪಿ ಹೆಣ್ಣಿನ ಬಗೆಗೆ ದುಷ್ಟಶಾಸನಮಾಡಿ, ಒಂದು ಕಣ್ಣಿಗೆ ಸುಣ್ಣ, ಒಂದು ಕಣ್ಣಿಗೆ ಬೆಣ್ಣೆ ಹಚ್ಚುವ ಸಮಾಜ ಇದ್ದರೆಷ್ಟು, ಬಿಟ್ಟರೆಷ್ಟು ? "

"ಹಾಗೆಂದರೆ ಹೇಗೆ ಕಂದ! ನಮಗೆ ಸಮಾಜ ಬೇಡವಾದರೂ ಸಮಾಜಕ್ಕೆ ನಾವು ಬೇಕು. ನಮ್ಮನ್ನು ಹಿಂಸಿಸಿ ಹಿಂಡಿ ಹಿಪ್ಪೆಗೊಳಿಸಲು ಸಮಾಜಕ್ಕೆ ನಾವು ಬೇಕೇಬೇಕು. ಅದರ ಪಾಶದಿಂದ ನೀನು ತಪ್ಪಿಸಿಕೊಳ್ಳಲಾರೆ ! "

" ಹಾಗಾದರೆ ಸಮಾಜವನ್ನು ನಂಬಿ ನಾವು ಪಡುವಸುಖ ? "

" ಸುಖವೆಲ್ಲ ಗಂಡಿನ ಸೊತ್ತು. ಹೆಣ್ಣಾಗಿ ಹುಟ್ಟಿದವಳಿಗೆ ಸಮಾಜ ಕಾದಿರಿಸುವುದು ಸುಖದಗುಡಾಣವಲ್ಲ—ಕಣ್ಣೀರಿನ ಕಡಲು ! "

" ಇಂತಹ ಅನಿಷ್ಟಸಮಾಜದ ಮೇಲೆ ಸೇಡು ತೀರಿಸಿಕೊಂಡರೆ ? "

" ಅಂದರೆ " ಎಂದು ತಾಯಿ ಕೇಳಿದರು.

" ನಾನು ಎರಡನೆಯ ಲಗ್ನವಾಗುತ್ತೇನೆ. ನನಗಿನ್ನೂ ಮದುವೆಯಾಗಿಲ್ಲ ವೆಂದು ಎರಡನೆಯ ಮದುವೆಯಾಗುತ್ತೇನೆ."

" ಅದೆಲ್ಲಿ ಸಾಧ್ಯ ಮಗು ? ಅದು ಹೇಗೆ ಸಾಧ್ಯ ? " ಎಂದಳು ತಾಯಿ.

ಕಾವೇರಮ್ಮನೂ ಇಂತಹ ಕ್ರಾಂತಿಕಾರಕ ವಿಚಾರಗಳನ್ನು ತನ್ನ ಪ್ರಾಯದಲ್ಲಿ ತಾನು ಮನೆತಪ್ಪಿದಾಗ ವಿಚಾರಮಾಡಿ ಸಲ್ಲದ ವಿಷಯಗಳೆಂದು ತ್ಯಜಿಸಿದ್ದರು. ಅದು ಸುಮಾರು ೨೦-೨೫ ವರ್ಷಗಳ ಹಿಂದೆ. ಇಪ್ಪತ್ತನೆಯ ವಯಸ್ಸಿಗೆ ಗಂಡನನ್ನು ಕಳೆದುಕೊಂಡು ವಿಧವೆಯಾದಾಗ. ತಮ್ಮ ಮಗಳೂ ಸುಮಾರು ಅದೇ ವಯಸ್ಸಿನಲ್ಲಿ ಇದೇ ಬಗೆಯ ವಿಚಾರಗಳನ್ನುಮನನ ಮಾಡುವುದನ್ನು ಕಂಡು ಇದು ವಯಸ್ಸಿನ ಪರಿಣಾಮವೋ ಎಂದೆನಿಸಿತು. ಈಗ ಕಾವೇರಮ್ಮ ತಮ್ಮ ಹರೆಯದ ಅಂಕವನ್ನು ಮುಗಿಸಿ ವೃದ್ಧಾಪ್ಯದ ಹೊಸ್ತಿಲನ್ನು ತುಳಿದಿದ್ದಾರೆ. ಯೌವನದ ಬಿಸಿರಕ್ತ ಆರಿ ತಣ್ಣಗಾಗಿದೆ. ಹಾಗೆಯೇ ಭಾವೋದ್ವಿಗ್ನ ಹಸಿಬಿಸಿಯ ವಿಚಾರಗಳು. ಸಮಾಜ ಬಹುಕಾಲ ನಿದ್ರಿಸುತ್ತಾ ಮಲಗಿರುವ ರಾಕ್ಷಸನಂತೆ. ಒಮ್ಮೆ ನಿದ್ರೆಯಿಂದ ಎಚ್ಚತ್ತಾಗ ಇಂತಹ ಅರಿಯದ ಕಂದಮ್ಮಗಳನ್ನು ಬಲಿ ತೆಗೆದುಕೊಂಡು ಮತ್ತೆ ಕಣ್ಣು ಮುಚ್ಚುವನು. ಅವನು ಮಲಗಿರುವಾಗ ಅವನ ಕಣ್ಣುತಪ್ಪಿಸಿ ಎಂತಹ ಹುಚ್ಚಾಟವಾಡಿದರೂ ಅವನು

ಸುಮ್ಮನಿರುವನು. ಆದರೆ ಎಚ್ಚರವಿರುವಂದು ಅವನನ್ನು ಕೆಣಕಿ ಬದುಕುವವರಾರು ? ಗುದ್ದಾಡಿ ಗೆದ್ದವರಾರು ? ಸಮಾಜದ ಇಕ್ಕುಳಕ್ಕೆ ತಾರುಣ್ಯದಲ್ಲೇ ಸಿಕ್ಕಿ ವಿಲಿವಿಲಿ ಒದ್ದಾಡಿ ಈಗ ಸೋತು ಹಣ್ಣಾಗಿದ್ದ ತಾಯಿಯ ಮಾತ್ರ ಮಗಳಿಗೆ ಎಲ್ಲಿ ಹಿಡಿಸೀತು?

"ಏಕೆ ಸಾಧ್ಯವಿಲ್ಲ ?"

"ನೀನು ಅಂತಹ ಬಾಳು ಬಾಳಿದರೆ ಜನ ಏನೆನ್ನುತ್ತಾರೆ ಗೊತ್ತೇ ?"

"ಗೊತ್ತು. ನಡತೆ ತಪ್ಪಿದವಳು ಎನ್ನುತ್ತಾರೆ. ವ್ಯಭಿಚಾರಿಣಿ ಎನ್ನುತ್ತಾರೆ. ಅನ್ನುವವರು ಅಂದುಕೊಳ್ಳಲಿ. ನಮ್ಮ ಸುಖ ನಮ್ಮದಾದರೆ ಸರಿ!"

"ಅನ್ನುವವರು ಅಷ್ಟಕ್ಕೆ ಸುಮ್ಮನಾದರೆ ಸುಖ! ಆದರೆ ಸುಖ ಕನಸಿನ ಗಂಟು!"

"ಮತ್ತೇನು ಮಾಡುತ್ತಾರೆ ?"

"ಸಮಾಜದಿಂದ ಹೊರಗಟ್ಟುತ್ತಾರೆ. ತಲೆಗೊಂದು ಕಲ್ಲಿನಂತೆ ಇಕ್ಕಿ ಕೊಲ್ಲುತ್ತಾರೆ." ಎಂದು ವಿಷಾದ ಪೂರ್ಣವಾಗಿ ನಕ್ಕಳು ತಾಯಿ.

ಮಗಳು ಬಹಳ ಹೊತ್ತು ಮೌನತಾಳಿ ಕಡೆಗೆ "ಎಂತಹ ಸಮಾಜದ ಮಕ್ಕಳು ನಾವು ?" ಎಂದು ಹೇಳಿ ಅಲ್ಲಿಂದ ಎದ್ದು ಹೊರಟಳು.

ಈ ಎಲ್ಲ ಮಾತುಕತೆಯಿಂದ ಕಾವೇರಮ್ಮನ ಮೇಲೆ ಭಯಂಕರ ಪರಿಣಾಮವುಂಟಾಯಿತು. ಮಗಳ ಮನಸ್ಸಿನ ಅಗ್ನಿಪರ್ವತದೊಳಗೆ ಎಂತಹ ಬೆಂಕಿ ಕಾವು ಅಡಗಿದೆ ಎಂದು ಮೊದಲು ಬಾರಿ ಕಂಡುಕೊಂಡಳು. ಇಂತಹ ವಿಚಾರಗಳು ದಿನಕಳೆದಂತೆ ಪುಟಗೊಳ್ಳುತ್ತಾ ಹೋದರೆ ಗತಿ ? ಎಂದು ಆಕೆ ತುಂಬಾ ಅಧೀರಳಾದಳು.

ಶಾರದೆಯ ವಯಸ್ಸು ಅಂಥದು. ಅವಳು ಹದಿನೇಳು-ಹದಿನೆಂಟು ವರ್ಷದ ಪ್ರಾಯದ ಹುಡುಗಿ. ಅವಳ ವಯಸ್ಸಿನ ಹಳ್ಳಿಯ ಹುಡುಗಿಯರೆಲ್ಲ ಈ ವೇಳೆಗೆ ಅತ್ತೆಯ ಮನೆಯನ್ನು ಸೇರಿ ಒಂದೆರಡು ಮಕ್ಕಳ ತಾಯಿಯಾಗಿದ್ದರು. ಆದರೆ ತಾನು ಮಾತ್ರ ಹುಟ್ಟುಬಂಜೆಯಂತೆ ಗುಂಡುಗೋವಿಯಾಗಿದ್ದೇನೆ. ಮೊಗ್ಗಾಗಿ ಇದ್ದವಳು ಇಂದು ಪ್ರಫುಲ್ಲಿತ ಸುಂದರ ಪುಷ್ಪವಾಗಿದ್ದರೂ ತನ್ನೆಡೆಗೆ ಯಾವ ದುಂಬಿಯೂ ಝೇಂಕರಿಸಿ ಬಂದಿಲ್ಲ. ಹೇಗೆ ಬಂದೀತು ? ತಾನು ಒಂದೇ ಒಂದು ದುಂಬಿಗೆ ಮೀಸಲಿಟ್ಟ ಪುಷ್ಪವಾಗಿರುವಾಗ. ಆ

ದುಂಬಿಯೋ ಬೇರೆ ಹೂಗಳ ಮಕರಂದ ಪಾನದಿಂದ ಮೈಮರೆತಿರುವಾಗ ತನಗಾಗಿ ಕಾದಿರುವ ಪುಷ್ಪದ ನೆನಪೆಲ್ಲಿಯದು ? ತಾನು ಹೀಗೆಯೇ ಒಂದುದಿನ ಸೊರಗಿ, ಬಾಡಿ, ತೊಟ್ಟಿನಿಂದ ಕಳಚಿಬೀಳುವೆ. ತಾನು ಇತರ ಹೂಗಳಂತೆ ಕಾಯಾಗುವುದಿಲ್ಲ. ಹಣ್ಣಾಗುವುದಿಲ್ಲ. ಎಲ್ಲರಂತೆ ಧರೆಗೆ ತನ್ನ ಸಂತಾನವನ್ನು ಚೆಲ್ಲಿ ಅದು ತನ್ನಂತೆ ಬೆಳೆದು ಹೂ ಬಿಟ್ಟು, ಕಾಯಾಗಿ, ಹಣ್ಣಾಗಿ, ನಳನಳಿಸುವ ನಂದನವನವಾಗುವುದನ್ನು ಕಾಣುವ ಪುಣ್ಯ ತನಗಿಲ್ಲ ಎಂದು ಶಾರದೆ ಸೊರಗುವಳು.

ಚಿಕ್ಕಂದಿನಿಂದಲೂ ಶಾರದೆಗೆ ಮಕ್ಕಳೆಂದರೆ ಪ್ರಾಣ. ಮನೆಯಲ್ಲಿ ಚಿಕ್ಕ ಮಕ್ಕಳು ಇಲ್ಲದೆ ಇದ್ದುದರಿಂದ ಹಳ್ಳಿಯ ಒಕ್ಕಲಿಗರ ಮಕ್ಕಳನ್ನು ಎತ್ತಿ ಇಳಿಸಿ ತಾಯಿಯ ಆನಂದಪಡುತ್ತಿದ್ದಳು. ಒಕ್ಕಲು ಮಕ್ಕಳ ಕೊಳಕುತನ, ಹೇಸಿಕೆ ಇವುಗಳೊಂದೂ ಶಾರದೆಯ ಗಮನಕ್ಕೆ ಬಾರವು. ಅವಳ ಮಾತೃಹೃದಯಕ್ಕೆ ಕೊಳೆಯಾಗಿದ್ದ ಮಕ್ಕಳೂ ಒಂದೇ ಶುಚಿಯಾಗಿರುವ ಮಕ್ಕಳೂ ಒಂದೇ. ತಾವು ಬ್ರಾಹ್ಮಣರಾಗಿದ್ದು ಶೂದ್ರರ ಮಕ್ಕಳನ್ನು ಮುಟ್ಟಬಾರದೆಂದು ಕಾವೇರಮ್ಮ ಎಷ್ಟೋ ಬಾರಿ ಶಾರದೆಯನ್ನು ಗದರಿ, ಬೈದು, ಸೋತಿದ್ದರು. ಒಂದು ದಿನ ಹಜಾಮರ ಲಕ್ಷ್ಮಿಯ ಮಗಳನ್ನು ಅಡಿಗೆಯ ಮನೆಗೆ ಕರೆತಂದು ಕಾಫಿ ಕುಡಿಸುತ್ತಿದ್ದಾಗ ಭಾಗೀರಥಮ್ಮನಿಂದ ಕಪಾಳ ಮೋಕ್ಷವಾಗಿತ್ತು. ಅಂದಿನಿಂದ ಶಾರದೆ ಕೊಂಚ ಬುದ್ಧಿ ಕಲಿತಳು. ಆದರೂ ತನ್ನ ಹೃದಯದ ಆಸೆಯನ್ನು ತಣಿಸಲು ಶೂದ್ರರ ಮಕ್ಕಳನ್ನು ಮುಟ್ಟಲಾಗದುದರಿಂದ ತನ್ನ ಸಮವಯಸ್ಸಿನ ಶ್ಯಾಮಲೆಯನ್ನೇ ಮಗುವಾಗಿ ಮಾಡಿಕೊಂಡು ಆಡಿಸಿ ಸಂತೋಷಪಡುತ್ತಿದ್ದಳು. ಇದನ್ನು ಕಂಡು ಶ್ಯಾಮಣ್ಣನವರು ಒಮ್ಮೆ 'ಥೂ ಹುಚ್ಚು ಹುಡುಗಿ. ಈಗಿನಿಂದಲೇ ಇವಳಿಗೆ ಮಕ್ಕಳ ವ್ಯಾಮೋಹ. ಇವಳಿಗೆ ನೂರು ಮಕ್ಕಳಾಗಲಿ. ಕಲಿಯುಗದ ಗಾಂಧಾರಿಯಾಗಲಿ' ಎಂದು ಶಾರದೆಯ ಕಿವಿಹಿಂಡಿ ಹಂಗಿಸಿದ್ದರು.

ಒಮ್ಮೊಮ್ಮೆ ಶಾರದೆ ಒಂಟಿಯಾಗಿ ಕುಳಿತು ಏನನ್ನೋ ಧ್ಯಾನಿಸುವಾಗ ಬಾಲ್ಯದ ಸವಿ ನೆನಪುಗಳು ಅವಳನ್ನು ಮುತ್ತುವವು. ಆ ದಿನಗಳು ಮತ್ತೆ ಬಾರವೇ ಎಂದುಕೊಳ್ಳುವಳು. ಅಂತಾದರೆ ಜೀವನ ಯಾತ್ರೆಯ ಬೇಸರ ಬದುಕಿನ ಬಿಸಿಲು ಬೇಸಿಗೆಯನ್ನು ಮರೆತು ನೆನಪಿನ ಸೊಂಪಿಡದು ಬೆಳೆದ ಮರಗಳ ತಣ್ಣೆಳಲಿನ ತಂಪಿನಲ್ಲಿ ಹಾಯಾಗಿ ದಣಿವಾರಿಸಿಕೊಳ್ಳಬಹುದು........

ಆದರೆ ನೆನಪಿನಿಂದ ಉಂಟಾಗುವ ಸುಖ ಕ್ಷಣಿಕ ಸುಖ. ಮತ್ತೆ ಪಯಣದ ಹಾದಿಯಲ್ಲಿ ಸಾಗುವಾಗ ಅದರ ನೂರು ಎಡರುತೊಡರುಗಳನ್ನು ಎದುರಿಸಲೇ ಬೇಕು.

ಶ್ಯಾಮಲೆ ಅತ್ತೆಯ ಮನೆಯನ್ನು ಸೇರಿದ ಮೇಲೆ ಮನೆಯ ಹೆಣ್ಣು ಮಗಳೆಂದರೆ ಶಾರದೆಯೇ ಆಗಿದ್ದಳು. ಶ್ಯಾಮಣ್ಣನವರದು ದೊಡ್ಡ ಸಂಸಾರ. ದನಕರುಗಳು, ಬಂದು ಹೋಗುವವರು ಹೆಚ್ಚು. ಮನೆಯಲ್ಲಿ ಹತ್ತು ಜನ ದುಡಿದರೂ ಮಿಗಿಯುದ ಕೆಲಸಗಳು ಇದ್ದೇ ಇರುತ್ತಿದ್ದುವು.

ಕಾವೇರಮ್ಮ ಸಾಮಾನ್ಯವಾಗಿ ಅಡಿಗೆಯ ಕೆಲಸ ನೋಡಿಕೊಳ್ಳುವರು. ಶ್ಯಾಮಣ್ಣನವರ ಹೆಂಡತಿ ಭಾಗೀರಥಮ್ಮ ದನಗಳ ಹುಲ್ಲು ಹೊಟ್ಟುಗಳನ್ನು ಅಕ್ಕಿ ರಾಗಿಯ ಮೇಲ್ವಿಚಾರಣೆಯನ್ನೂ ನೋಡಿಕೊಳ್ಳುವರು. ಶಾರದೆಗೆ ನೀರು ಸೇದುವುದು, ಬಟ್ಟೆ ಒಗೆಯುವುದು, ಉಪ್ಪುಗಾರಣ್ಣೆ, ಎಂಜಲು ಗೋಮೆ........ಇಂಥವೇ ಕ್ಷಣಕಾಲ ಪುರುಸೊತ್ತು ಇಲ್ಲದ ಕೆಲಸಗಳು ಇದ್ದೇ ಇರುವವು. ವಿರಾಮವೆಂದರೆ ಊಟವಾದ ಮೇಲೆ ಒಂದೆರಡು ತಾಸು ಸಂಜೆ ದನಕರುಗಳು ಮನೆಗೆ ಬರುವತನಕ. ಈ ಬಿಡುವಿನಲ್ಲಿ ತಾಯಿಗೆ ಏನನ್ನಾದರೂ ಕಥೆ, ಕಾದಂಬರಿ, ರಾಮಾಯಣ ಮಹಾಭಾರತಗಳನ್ನು ಓದಿಹೇಳುವಳು. ಅವು ಇಲ್ಲವಾದರೆ ಒಂದು ಕಸೂತಿ, ಇಲ್ಲ ಹೊಲಿಗೆಯ ಕೆಲಸ, ಬಿತ್ತಲಿನ ಮೂಗಿಡಗಳಿಗೆ ನೀರೆರೆಯುವುದು. ಹೂಕಟ್ಟಿ ದೇವರ ಫೋಟೋಗಳಿಗೆ ಹಾಕುವುದು. ಇಂತಹವೇ ಸಣ್ಣಪುಟ್ಟ ಕೆಲಸಗಳು ಶಾರದೆಯ ಬೇಸರ ಕಳೆಯುವುವು. ಹೀಗಾಗಿ ಕೆಲಸದ ವೇಳೆಯಲ್ಲಿ ಶಾರದೆ ತನ್ನ ಹಿಂದಿನ ನೆನ ಪನ್ನು ಕ್ಷಣಕಾಲಮರೆತು ಶಾಂತಿ ಸಮಾಧಾನ ಹೊಂದುವಳು. ಆದರೆ ಮನೆಗೆ ನೆಂಟರು ಬಂದು, ಶಾರದೆಯನ್ನು ಕಂಡು ' ಏಕೆ ಈ ಹುಡುಗಿ ಅತ್ತೆಯಮನೆಗೆ ಹೋಗಿಲ್ಲ. ಈ ಹುಡುಗಿಗೆ ಎಷ್ಟು ಮಕ್ಕಳು ? " ಇಂತಹವೇ ಕ್ಷೇಮಸಮಾ ಚಾರದ ಪ್ರಶ್ನೆಗಳನ್ನು ಕೇಳಿದಾಗ, ಶಾರದೆ ಬಲವಂತವಾಗಿ ಗತಸ್ಮೃತಿಗಳ ಬೆಂಕಿಯಲ್ಲಿ ಹಾಯ್ದು ಬರುವಳು. ಇವರುಗಳೆಲ್ಲಾ ಯಾಕಾದರೂ ಬರು ತ್ತಾರೋ ಎಂದು ಎಲ್ಲರ ಕಣ್ಣುತಪ್ಪಿಸಿ ಮೂಲೆ ಹಿಡಿದು ಕುಳಿತುಕೊಳ್ಳುವಳು. ಆಗ ತಾಯಿ ಕಾವೇರಮ್ಮನೋ, ಇಲ್ಲ ಶ್ಯಾಮಣ್ಣನವರೋ ಹುಡುಕಿಕೊಂಡು ಬಂದು ಸಂತೈಸಿ ಕರೆತರಬೇಕು.

ಈಚೆಗೆ ಶ್ಯಾಮಲೆ ಬಾಣಂತನಕ್ಕೆ ಹಳ್ಳಿಗೆ ಬಂದ ಮೇಲೆ ಮನೆಯೆಂಬುದು ಶಾರದೆಗೆ ನರಕ. ತಾನೂ ಶ್ಯಾಮಲೆಯಂತೆ ಕರೆಸಿಕೊಂಡಾಗ ತವರಿಗೆ ಬಂದು ಎಲ್ಲರ ಕಣ್ಣಿನ ಬೊಂಬೆಯಾಗದೆ ಗಂಡನ ಅಲಕ್ಷ್ಯಕ್ಕೆ ಪಕ್ಕಾಗಿ ತಾಯಿಯ ಮನೆಯನ್ನೇ ಪಟ್ಟಾಗಿ ಹಿಡಿದಿರುವ ದುಃಖ ಒಂದು ಪಾಲಾದರೆ, ಶ್ಯಾಮಲೆ ಯಂತೆ ಹೆಣ್ಣಿನ ಸಾರ್ಥಕತೆ, ವಂಶೋದ್ಧಾರವನ್ನು ಪಡೆಯುವ ಪುಣ್ಯ ತನಗಿಲ್ಲ ವೆನ್ನುವ ಕೊರಗು ನೂರ್ಮಡಿ. ಹೀಗಿದ್ದರೂ ಶ್ಯಾಮಲೆಯ ಬಗ್ಗೆ ಶಾರದೆಗೆ ಎಳ್ಳಷ್ಟೂ ಅಸೂಯೆ, ಹೊಟ್ಟೆಕಿಚ್ಚು ಇರಲಿಲ್ಲ. ತನಗಿಲ್ಲದ ಸುಖ ತನ್ನ ತಂಗಿ ಗಾದರೂ ಇದೆಯಲ್ಲ ಎನ್ನುವ ಸಂತೋಷದಲ್ಲಿ ಎಷ್ಟೋ ಬಾರಿ ಮೈಮರೆತಿದ್ದಳು. ಶ್ಯಾಮಲೆಗೆ ಹೆರಿಗೆಯ ದಿನಗಳು ಸಮೀಪಿಸಿದಂತೆಲ್ಲಾ ಅವಳ ದಾದಿಯಾಗಿ ಶಾರದೆ ದುಡಿದಳು. ಅವಳ ನೆರಳಿನಂತೆ ಇದ್ದು ಅವಳ ಸೇವೆಮಾಡಿದಳು. ಶ್ಯಾಮಲೆ ಹೆರಿಗೆಯ ನೋವು ತಿಂದಾಗ ಶಾರದೆ ಅವಳಷ್ಟೇ ನೊಂದು ಏನಾಗು ವುದೋ ಎಂದು ಭೂಮಿಗೆ ಇಳಿದು ಹೋಗಿದ್ದಳು. ಶ್ಯಾಮಲೆಗೆ ಸುಖಪ್ರಸವ ವಾಗಲೆಂದು ದೇವರ ಮುಂದೆ ಹಚ್ಚಿಟ್ಟ ನಂದಾದೀಪ ತಿಂಗಳಕಾಲ ಆರಲಿಲ್ಲ. ಶ್ಯಾಮಲೆ ಹಡೆದ ಮಗುವನ್ನು ಶಾರದೆಯ ಕೈಗೆ ಕೊಟ್ಟಾಗ ಅದನ್ನು ಎತ್ತಿ ಎದೆಗೆ ಅವುಚಿಕೊಂಡು ತಾನೇ ಅದರ ತಾಯಿಯೋ ಎನ್ನುವಂತೆ ಸಂತೋಷ ಪಟ್ಟಿದ್ದಳು. ಹೀಗಿದ್ದರೂ ಒಮ್ಮೊಮ್ಮೆ ಶ್ಯಾಮಲೆ ಶಾರದೆಯರ ನಡುವೆ ಮನ ಸ್ತಾಪ ಅಂಕುರಿಸದೆ ಇರಲಿಲ್ಲ. ಅವರ ವಿಶ್ವಾಸ ಹಳಸಿಕೊಂಡಾಗ ಶಾರದೆ ಶ್ಯಾಮಲೆಗಿಂತ ಹೆಚ್ಚು ಮರಗುವಳು.

ಒಂದು ಬಾರಿ ಶ್ಯಾಮಲೆ ರಾಜನನ್ನು ಎತ್ತಿಕೊಳ್ಳಲು ಶಾರದೆಯ ಕೈಗೆ ಕೊಟ್ಟು ಮೈ ತೊಳೆದುಕೊಳ್ಳಲು ಬಚ್ಚಲಿಗೆ ಇಳಿದಿದ್ದಳು. ರಾಜ ಏಕೋ ತುಂಬಾ ರಗಳೆಮಾಡಿದುದರಿಂದ ಪಾಪ ಹಸಿವೆಯೋ ಏನೋ ಎಂದುಕೊಂಡು ಶಾರದೆ ಅವನನ್ನು ಅಲ್ಲೇ ಮಲಗಿಸಿ, ಹಾಲು ತರಲು ಅಡಿಗೆಯ ಮನೆಗೆ ಹೋದಳು. ರಾಜ ಅಂಬೆಗಾಲಿಕ್ಕುತ್ತಾ ಹೋಗಿ ಅಲ್ಲಿಯೇ ಹರವಿದ್ದ ಹಸಿಯ ಅವರೆಕಾಳನ್ನು ಬಾಯಿಯಲ್ಲಿ ಇಟ್ಟುಕೊಂಡು ನುಂಗಿಬಿಟ್ಟ. ಅವರೇ ಕಾಳು ಗಂಟಲಲ್ಲಿಯೇ ತಗುಲಿಕೊಂಡಿತು. ಮಗು ಅಷ್ಟಕ್ಕೆ ಕಿಟಾರನೆ ಕಿರಚಿಕೊಂಡಿತು. ಕೈಕಾಲನ್ನು ಪಟಪಟನೆ ನೆಲಕ್ಕೆ ಬಡಿದು ತೇಲುಗಣ್ಣು ಮೇಲುಗಣ್ಣು ಮಾಡಿತು. ಶಾರದೆ ಅವನ ಕೂಗು ಕೇಳಿ ಓಡಿಬಂದು ಮಗುವನ್ನು ಎತ್ತಿ

ಕೊಂಡಳು. ಮಗು ಉಸಿರಾಡಿಸದೆ ತತ್ತರಿಸುತ್ತಿತ್ತು. ಆಗ ಕಾವೇರಮ್ಮ ಧಡಾರನೆ ಓಡಿಬಂದು ಬಾಯಲ್ಲಿ ಏನೋ ಇದೆಯೆಂದು ಊಹಿಸಿ, ಕೈಹಾಕಿ ಗಂಟಲಲ್ಲಿದ್ದ ಅವರೆಕಾಳನ್ನು ಹೊರತೆಗೆಯುವ ಹೊತ್ತಿಗೆ ಮಗುವಿಗೆ ಹೋದ ಪ್ರಾಣ ಮರಳಿ ಬಂದಂತಾಯಿತು. ಈ ಅಚಾತುರ್ಯಕ್ಕೆ ಕಾರಣಳಾದ ಶಾರದೆಯನ್ನು ಎಲ್ಲರೂ ಬಾಯಿಗೆ ಬಂದಂತೆ ಬೈದರು.

" ಹೀಗೇನೆನೇ ನೀನು ಮಗುವನ್ನು ನೋಡಿಕೊಳ್ಳೋದು " ಎಂದು ಎಲ್ಲರೂ ಅವಳನ್ನು ಜರಿದರು. ಎಂದೂ ಒಂದು ಕಟು ನುಡಿ ಆಡದಿದ್ದ ಶ್ಯಾಮಲೆ " ಸ್ವಲ್ಪದರಲ್ಲಿ ಮಗುವನ್ನು ಕೊಂದು ಬಿಡ್ತಿದ್ದೀಯಲ್ಲೇ " ಎಂದು ಛೀ ಮಾರಿ ಹಾಕಿದಳು.

ಭಾಗೀರಥಮ್ಮ ಇದ್ದುಕೊಂಡು "ತನ್ನ ಹೊಟ್ಟೆಯಲ್ಲಿ ಮಕ್ಕಳಿದ್ದರೆ ತಾನೇ ಅದರ ಕಷ್ಟ ಸುಖ ತಿಳಿಯಬೇಕಾದ್ರೆ" ಎಂದು ಹಂಗಿಸಿದರು.

ಈ ಎಲ್ಲ ಕೊಂಕುನುಡಿಗಳನ್ನು ಕೇಳಿ ಶಾರದೆ ತುಂಬಾ ನೊಂದು ಕೊಂಡಳು. ಒಂದೊಂದು ಮಾತು ಈಟಿಯಮೊನೆಯಂತೆ ಅವಳ ಹೃದಯ ವನ್ನು ಬೇಧಿಸಿ ಘಾತಿಸಿದುವು. ಅವಳು ಬಿಕ್ಕುತ್ತಾ ಚಿಕ್ಕಮನೆ ಸೇರಿಬಿಟ್ಟಳು. ಏನೋ ಕೈ ತಪ್ಪಿನಿಂದ ಆದ ಅಚಾತುರ್ಯಕ್ಕೆ ತನ್ನನ್ನು ಶ್ಯಾಮಲೆ, ಭಾಗೀರ ಥಮ್ಮ ಇಷ್ಟೊಂದು ಬೈಯ್ಯಬೇಕೇ, ಇಷ್ಟೊಂದು ರಾದ್ಧಾಂತವೆಬ್ಬಿಸಬೇಕೇ ಎಂದು ಅವಳಿಗೆ ಸಂಕಟವಾಯಿತು. ತಾನು ಇಷ್ಟೊಂದು ಮುಂದಿಗೆ ಹುಣ್ಣಿನ ಬೊಬ್ಬೆಯಾಗಿ ಬದುಕುವುದಕ್ಕಿಂತ ಸಾಯುವುದೇ ಲೇಸು ಎಂದುಕೊಂಡಳು. ತಾನು ರಾಜನ ವಿಷಯದಲ್ಲಿ ತಾಯಿಗಿಂತಲೂ ಹೆಚ್ಚಿನ ಆಸ್ಥೆವಹಿಸಿದ್ದರೂ ಶ್ಯಾಮಲೆ ತನ್ನನ್ನುಜರೆದು ಆಡಿದಳಲ್ಲಾ ಎನ್ನುವ ವಿಷಯ ಶಾರದೆಗೆ ಅಭಿಮಾನ ಭಂಗ ಉಂಟುಮಾಡಿತು.

ಆ ದಿನ ತಾಯಿ ಕಾವೇರಮ್ಮ ಮಗಳ ಬೆನ್ನು ಕಾಯದಿದ್ದರೆ ಶಾರದೆ ಯಾವ ಗಂಡಾಂತರ ತಂದುಕೊಳ್ಳುತ್ತಿದ್ದಳೋ ಹೇಳುವುದು ಕಷ್ಟ. ಅಂತೂ ಈ ಒಂದು ಘಟನೆಯಿಂದ ಮನೆಯವಾತಾವರಣ ಬಹಳ ಹದಗೆಟ್ಟಿತು.

ಕಾವೇರಮ್ಮನಿಗೆ ಶಾರದೆಯನ್ನುಶ್ಯಾಮಲೆ, ಭಾಗೀರಥಮ್ಮ ಇಬ್ಬರೂ ಥಳಿ ಸಿದುದು ಕೊಂಚವೂ ಹಿಡಿಸಲಿಲ್ಲ. ಏನೋ ಕೈ ತಪ್ಪಿನಿಂದ ಆದ ಕೆಲಸಕ್ಕೆ ಶಾರದೆಯನ್ನು ಸವತಿಯಂತೆ ದೂಷಿಸಿದುದು ಅವರಿಗೆ ಸರಿಬರಲಿಲ್ಲ. ಸಣ್ಣ

ವಿಷಯ. ತಾಯಿ ಮಗಳು ದೊಡ್ಡ ಮನಸ್ಸು ಮಾಡಿ ಕ್ಷಮಿಸಬಹುದಾಗಿತ್ತು. ಆದರೆ ಇದನ್ನೇ ದೊಡ್ಡದು ಮಾಡಿಕೊಂಡು ಹೃದಯದ ಕಷಾಯವನ್ನು ಅವರು ಹೊರ ಹಾಕಿದರಲ್ಲಾ, ತಮ್ಮನ್ನು ನೆರೆಮನೆಯವರಂತೆ ನಡೆಸಿಕೊಂಡರಲ್ಲಾ ಎನ್ನುವ ದುಃಖದಿಂದ ಮನಸ್ಸು ಬಹಳ ಮುದುಡಿಕೊಂಡಿತು. ಅವರಿಗೆ ಮನೆ ಕೆಲಸದಲ್ಲಿ ಇದ್ದ ಆಸಕ್ತಿ ಕಡಿಮೆಯಾಗಿತ್ತು. ತಾವು ಯಾರದೋ ಮನೆಗೆ ಆಳಾಗಿ ದುಡಿಯುತ್ತಿರುವೆವೆಂದು ಹೊಟ್ಟೆ ಹೊರೆಯುವ ಬಾರಿ ಅನಿಸಹತ್ತಿತು. ಗಂಡ ವೆಂಕಟರಾಯ ಸತ್ತದಿನದಿಂದ ಇಲ್ಲಿಯ ತನಕ ಇಂತಹ ಭಾವನೆಗಳು ಕಾವೇರಮ್ಮನ ತಲೆಯಲ್ಲಿ ಸುಳಿದಿರಲಿಲ್ಲ. ತಾವು ಎಷ್ಟು ದುಡಿದರೂ ಈ ಮನೆಗೆ ಪರಕೀಯರು ಎನ್ನುವ ಭಾವ ಬಂದ ಮೇಲೆ ಮನೆಯ ಕೆಲಸಗಳಲ್ಲಿ ಅವರಿಗೆ ನಿರ್ಲಿಪ್ತ ಭಾವ ಬಂದು ಹೋಯಿತು.

ಕಾವೇರಮ್ಮನವರ ಸ್ವಭಾವದಲ್ಲಿ ಆದ ಮಾರ್ಪಾಡು ಬಹುಬೇಗ ಶ್ಯಾಮಣ್ಣನವರ ಗಮನಕ್ಕೂ ಬಂತು. ಶ್ಯಾಮಣ್ಣನವರಿಗೆ ಅತ್ತಿಗೆಯೆಂದರೆ ತಾಯಿಯ ಸಮಾನ, ಅಷ್ಟೇ ಪ್ರೀತಿ, ಅಷ್ಟೇ ಗೌರವ. ಅವರನ್ನು ಒಂದು ಮಾತು ಕೇಳದೆ ಯಾವ ಗೃಹಕೃತ್ಯಕ್ಕೂ ಶ್ಯಾಮಣ್ಣನವರು ಕೈಹಾಕುತ್ತಿರಲಿಲ್ಲ. ಅತ್ತಿಗೆಯೂ ಮೈದುನನನ್ನು ಮಗನಂತೆ ನೋಡಿಕೊಂಡು ಬಂದಿದ್ದರು. ಆದರೆ ಹಠಾತ್ತಾಗಿ ಕಾವೇರಮ್ಮನಲ್ಲಿ ಕಾಣಿಸಿಕೊಂಡ ಅನಾಸಕ್ತ ಹಾಗೂ ನಿರ್ಲಿಪ್ತ ಭಾವಕಂಡು ಶ್ಯಾಮಣ್ಣನವರಿಗೆ ಯಾಕೋ ಕೆಡುಕೆನಿಸಿತು. ಅತ್ತಿಗೆಯನ್ನು ಎದುರಿಸಿ ಕೇಳಿ ತಿಳಿಯುವ ಧೈರ್ಯ ಅವರಿಗಿಲ್ಲದೆ ತಮ್ಮ ಹೆಂಡತಿಯನ್ನೂ ಶಾರದೆಯನ್ನೂ ವಿಷಯವೇನೆಂದು ಕೇಳಿದರು. ಯಾರೂ ಸಮಂಜಸವಾದ ಉತ್ತರ ಕೊಡಲಿಲ್ಲ. ಕಡೆಗೆ ಶ್ಯಾಮಣ್ಣನವರು ತಮ್ಮ ಊಹೆಯನ್ನೇ ಹರಿಯ ಬಿಡಬೇಕಾಯಿತು. ಈಚೆಗೆ ರಾಮಚಂದ್ರನ ವಿಷಯದಲ್ಲಿ ಒಡಕು ಸುದ್ದಿ ಹುಟ್ಟಿಕೊಂಡಿತ್ತು. ಬಹುಶಃ ಅದನ್ನು ಮನಸ್ಸಿಗೆ ಹಚ್ಚಿಕೊಂಡು ಹೀಗೆ ಮಂಕಾಗಿರುವರೆಂದು ಶ್ಯಾಮಣ್ಣವರು ಭಾವಿಸಿದರು.

ಬೆಂಗಳೂರಿಗೆ ಕೆಲಸದ ಮೇಲೆ ಹೋಗಿದ್ದ ಶ್ಯಾಮಣ್ಣನವರ ಮಗ ನರಸಿಂಹಮೂರ್ತಿ ಹಳ್ಳಿಗೆ ಬರುವಾಗ ಒಂದು ಹೊಸ ಸುದ್ದಿಯನ್ನು ತಂದಿದ್ದ. ಅದು ರಾಮಚಂದ್ರನ ನಡತೆಯ ವಿಷಯ. ನರಸಿಂಹಮೂರ್ತಿ ಸಾಗರ್ ಟಾಕಿಸಿಗೆ ಎರಡನೆಯ ಆಟಕ್ಕೆ ಹೋಗಿ ಬರುತ್ತಿರುವಾಗ ಅದೇ ಟಾಕೀಸಿನಿಂದ

ರಾಮಚಂದ್ರ ಯಾವಳೋ ಒಬ್ಬ ಹುಡುಗಿಯ ಕೈಯಲ್ಲಿ ಕೈಹಾಕಿಕೊಂಡು ಹೊರಬರುವುದನ್ನು ಕಂಡ. ನರಸಿಂಹಮೂರ್ತಿ ಅವನು ರಾಮಚಂದ್ರ ಹೌದೋ ಅಲ್ಲವೋ ಎಂದು ಖಚಿತ ಪಡಿಸಿಕೊಳ್ಳಲು ಅವರನ್ನೇ ಹತ್ತೆಂಟುಸಲ ನೋಡಿದ. ಅವನು ರಾಮಚಂದ್ರನೇ ಆಗಿದ್ದ. ಆಗ ನರಸಿಂಹಮೂರ್ತಿಗೆ ಆಶ್ಚರ್ಯಕ್ಕಿಂತಲೂ ಅಪಮಾನವಾಯಿತು. ಶಾರದೆಯ ಗಂಡ ಹೀಗೆ ಸಿಕ್ಕಿದವ ರೊಡನೆ ಅಲೆಯುವಂತಾಯಿತೇ ? ಎಂದು ದುಃಖವೂ ಆಯಿತು. ಈ ಮೊದಲೇ ರಾಮಚಂದ್ರನ ದುರ್ನಡತೆಯ ಬಗ್ಗೆ ನೂರೆಂಟು ಗಾಳಿಸುದ್ದಿ ಹಳ್ಳಿ ಯನ್ನು ತುಂಬಿತ್ತು. ರಾಮಚಂದ್ರ ಯಾವಳೋ ಮೋಡಂನ ಸಹವಾಸಮಾಡಿ ಕೊಂಡಿದ್ದಾನೆ. ಇನ್ನು ಶಾರದೆಯನ್ನು ಸಂಪೂರ್ಣವಾಗಿ ಬಿಟ್ಟಂತೆಯೇ ಸರಿ ಎಂದು ಪುಕಾರು ಎದ್ದಿತ್ತು. ಶ್ಯಾಮಣ್ಣನವರಾಗಲಿ, ಕಾವೇರಮ್ಮನಾಗಲೀ ಇದನ್ನು ನಂಬಿರಲಿಲ್ಲ. ಎಲ್ಲ ಜನರಾಡಿಕೊಳ್ಳುವ ಸುಳ್ಳಿನಕಂತೆ ಎಂದುಕೊಂಡಿ ದ್ದರು. ಆದರೆ ಖುದ್ದು ನರಸಿಂಹಮೂರ್ತಿಯೇ ಹೇಳಿದ ಮೇಲೆ ಈ ವಿಷಯ ವನ್ನು ನಂಬಬೇಕೇ ಬಿಡಬೇಕೇ ?

ಈ ಸಂಗತಿಯಿಂದ ಶಾರದೆಗಿಂತಲೂ ಕಾವೇರಮ್ಮನ ಮೇಲೆ ಭಯಂಕರ ಪರಿಣಾಮಉಂಟಾಯಿತು. ಅದು ಯಾವಮನೆ ಹಾಳರಂಡೆ ರಾಮಚಂದ್ರನಿಗೆ ಗಂಟು ಬಿದ್ದಿದ್ದಾಳೆ. ಎಂದು ಪೇಚಾಡಿ, ಯಾರನ್ನಾದರೂ ಸರಿಯಾದವರನ್ನು ಕಳುಹಿಸಿ, ರಾಮಚಂದ್ರನಿಗೆ ಬುದ್ಧಿ ಹೇಳಿಸಬೇಕೆಂದು ಅಂದುಕೊಂಡರು. ಇದೇ ವೇಳೆಗೆ ಮಹೋಬಲ ಶಾಸ್ತ್ರಿಗಳೂ ಶ್ಯಾಮಣ್ಣನವರ ಮನೆಗೆ ಯಾವುದೋ ಕೆಲಸದ ಮೇಲೆ ಬಂದರು. ಕಾವೇರಮ್ಮನಿಗೆ ಶಾಸ್ತ್ರಿಗಳು ಜಾತಕ ನೋಡು ವುದರಲ್ಲಿ ನಿಸ್ಸೀಮರೆಂದು ತಿಳಿದುದರಿಂದ ಶಾರದೆಯ ಜಾತಕವನ್ನು ಅವರ ಮುಂದೆ ಇಟ್ಟರು. ರಾಮಚಂದ್ರ ಇಷ್ಟೆಲ್ಲಾ ಕೆಡಲು ಶಾರದೆಯ ಗ್ರಹಗತಿ ನೆಟ್ಟಗಿಲ್ಲದುದೇ ಕಾರಣವೆಂದು ಅವರು ಭಾವಿಸಿದರು.

ಶಾಸ್ತ್ರಿಗಳು ಜಾತಕವನ್ನು ಚೆನ್ನಾಗಿ ಗುಣಿಸಿನೋಡಿ, "ಅಮ್ಮ, ಶಾರದೆಗೆ ಈಗ ಏಳರಾಟಿ ಶನಿಕಾಟವಮ್ಮ. ಅದಕ್ಕೇ ಇಷ್ಟೆಲ್ಲಾ ತೊಂದರೆ, ಸಂಕಟ. ಮೊನ್ನೆ ಪಾಡ್ಯಕ್ಕೆ ಆ ಮಹಾನುಭಾವ ತನ್ನ ಮನೆಯನ್ನು ಬದಲಾಯಿಸಿದ. ಇನ್ನು ಮುಂದೆ ಭಯವಿಲ್ಲ. ಶಾರದೆ ನೆಮ್ಮದಿಯಾಗಿರ್ತಾಳೆ. ನೀವೇನೂ

ಚಿಂತಿಸಬೇಡಿ. ರಾಮಚಂದ್ರನಿಗೆ ಒಳ್ಳೆಯ ಬುದ್ಧಿ ಬಂದು ಹೆಂಡತಿಯನ್ನು ಕರೆಸಿಕೊಳ್ಳುತ್ತಾನೆ........"

"ಎಂದು ಬುದ್ಧಿ ಬರುತ್ತೋ, ಎಂದು ಕರೆಸಿಕೊಳ್ಳುತ್ತಾನೋ. ನನಗೆ ಯಾಕೋ ಇದು ಒಂದೂ ನಂಬಿಕೆಯೇ ಇಲ್ಲ. ಇದುವರೆಗೆ ಹೆಂಡತಿ ಅಂತ ಕಣ್ಣೆತ್ತಿ ನೋಡದೆ ಇದ್ದೋನು ಈಗ ನೋಡ್ತಾನೆ ಅಂದ್ರೆ ಯಾರು ನಂಬುತ್ತಾರೆ" ಎಂದು ಗೊಣಗಿಕೊಂಡರು, ಕಾವೇರಮ್ಮ ಶಾಸ್ತ್ರಿಗಳ ಮಾತುಕೇಳಿ.

ನೀವು ಎಂದಿಗೂ ಹಾಗೆ ತಿಳಿಯಬೇಡಿ. ಇದುವರೆಗೆ ಶನಿಕಾಟವಿತ್ತು. ಆದ್ದರಿಂದಲೇ ಗಂಡ ಹೆಂಡತಿಗೆ ಸಮರಸವಿರಲಿಲ್ಲ. ಇನ್ನು ಮೇಲೆ ಗ್ರಹಗಳು ತುಂಬಾ ಚೆನ್ನಾಗಿವೆ ನೋಡಿ........ಶಾರದೆಗೆ ನಾಲ್ಕು ಮಕ್ಕಳಾಗುವ ಯೋಗ ಇದೆ. ಎಂದರು ಶಾಸ್ತ್ರಿಗಳು.

ಈ ಮಾತನ್ನು ಕೇಳಿ ಕಾವೇರಮ್ಮನವರು ವಿಷಾದದಿಂದ ನಕ್ಕರು.

"ಶಾರದೆಗೆ ನಾಲ್ಕು ಮಕ್ಕಳಾಗುವ ಯೋಗ–ಇದಕ್ಕಿಂತ ದೊಡ್ಡ ಸುಳ್ಳು ಬೇಕೇ ಶಾಸ್ತ್ರಿಗಳೇ........ನೋಡಿ ಇದು ವರೆಗೆ ರಾಮಚಂದ್ರನ ಮನಸ್ಸು ಕರಗಿ ಹೆಂಡತಿಯನ್ನು ಬರಮಾಡಿಕೊಳ್ಳುತ್ತಾನೆನ್ನುವ ದೂರದ ಆಸೆಯಿತ್ತು. ಆದರೆ ಅವನಿಗೆ ಯಾವಳೋ ಮೋಹಿನಿ ಗಂಟು ಬಿದ್ದಿದ್ದಾಳಂತೆ. ಅವಳ ಜೊತೆಯಲ್ಲಿ ಸುಖವಾಗಿ ಇರುವವನಿಗೆ ಶಾರದೆಯ ನೆನಪು ಹೇಗಾದೀತು ?"

"ಇದೇನಮ್ಮ, ಕಥೆ ಹೇಳ್ತಿದ್ದೀರಿ ?"

"ಕಥೆ ಅಲ್ಲ ಶಾಸ್ತ್ರಿಗಳೇ ನಡೆದದ್ದು. ನಮ್ಮ ನರಸಿಂಹಮೂರ್ತಿನೇ ಖುದ್ದು ಕಣ್ಣಿನಿಂದಲೇ ನೋಡಿದನಂತೆ ಆ ಮೋಹಿನೀನ್ನ"

"ಚೆನ್ನಾಯ್ತು ಹಾಗಾದ್ರೆ........ನಂ ರಾಮು ಇಷ್ಟು ಕೆಟ್ಟು ಹೋಗ್ತಾನೆ ಅಂತ ನಾನು ಕನಸುಮನಸ್ಸಿನಲ್ಲಿ ಎಣಿಸಿರಲಿಲ್ಲ.

"ಅವರು ಹೊಸದಾಗಿ ಕೆಟ್ಟು ಹೋಗಬೇಕೇ ಶಾಸ್ತ್ರಿಗಳೇ. ಅವರಪ್ಪನ ಕಾಲದಿಂದ ಬಂದ ಚಾಳಿಯಿರಬೇಕು ಇದು."

"ಇಲ್ಲಮ್ಮ, ಶ್ರೀಕಂಠಪ್ನೋರ್ನ ನಾನು ಕಾಣೆನೇ. ಅವರಂತಹ ಒಳ್ಳೇಯವರನ್ನು ನಾನಿದುವರೆಗೆ ಕಂಡಿಲ್ಲ. ದೇವತಾ ಮನುಷ್ಯ ಆತ. ಅಂತಹವರ ಹೊಟ್ಟೆಯಲ್ಲಿ ಕಬ್ಬಿನತುದೀಲಿ ಸೂಲಂಗಿ ಹುಟ್ಟಿದ ಹಾಗೆ ರಾಮು ಹುಟ್ಟಿದ್ದಾನೆ."

" ನೀವು ಏನು ಬೇಕಾದ್ರೂತಿಳಿದುಕೊಳ್ಳಿ. ಆ ಚಂಡಾಲನಿಗೆ ಮಗಳನ್ನು ಕೊಟ್ಟು ಅವಳ ತಲೆ ಮೇಲೆ ಬಂಡೆ ಎಳೆದೆವು. ಹುಡುಗಿ ಒಂದು ದಿನವಾದ್ರೂ ಸುಖಪಡಲಿಲ್ಲ. ಹೋದಜನ್ಮದಲ್ಲಿ ಯಾರ ಬಾಳುಕಿತ್ತಿದ್ದಳೋ ? ಈ ಜನ್ಮದಲ್ಲಿ ಅದನ್ನು ಅನುಭವಿಸುತ್ತಿದ್ದಾಳೆ. ಗಂಡ ಇದ್ದಾನೆಂದು ತಿಳಿಯದ ಹಾಗಿಲ್ಲ. ಇಲ್ಲವೆಂದು ನಿಶ್ಚಿಂತೆಯಾಗಿ ಇರುವಂತಿಲ್ಲ. ಸಾಯೋತನಕ ಈ ಬಾಳುರಿಯಲ್ಲಿ ಬೇಯುವುದು ಅವಳ ಹಣೆಯಬರಹವೋ ಏನೋ, ಯಾರು ಬಲ್ಲರು........" ಎಂದು ನಿಟ್ಟುಸಿರು ಬಿಟ್ಟರು ಕಾವೇರಮ್ಮ. ಅವರ ಕಣ್ಣು ಮಂಜಾಯಿತು. ಅದನ್ನು ಸೀರೆಯ ಸೆರಗಿನಿಂದ ಒರೆಸುತ್ತಾ ಅವನತಮುಖಿಯಾದರು.

ಕಾವೇರಮ್ಮನ ಮಾತು ಕೇಳಿ ಶಾಸ್ತ್ರಿಗಳಿಗೆ ಕರುಳು ಬಗೆದಂತಾಯಿತು. ಶಾರದೆಯ ಮದುವೆಗೆ ಅವರೇ ಮುಂದಾಳಾಗಿದ್ದರು. ಶಾರದೆಯನ್ನು ಕಂಡರೆ ಶಾಸ್ತ್ರಿಗಳಿಗೆ ಅಚ್ಚುಮೆಚ್ಚು. ಇಂತಹ ಹುಡುಗಿಗೆ ಎಂತಹ ಭವಣೆ ಬಂತು ಎಂದು ಯೋಚಿಸುತ್ತಾ ಕುಳಿತರು.

" ಅಮ್ಮ ನನಗೊಂದು ಆಲೋಚನೆ ಹೊಳೀತಿದೆ. ಶಾರದೆಗೆ ಗ್ರಹಗತಿ ಚೆನ್ನಾಗಿದೆ. ಹೋಗಿ ರಾಮಚಂದ್ರನನ್ನು ಏಕೆ ಮಾತನಾಡಿಸಿ ಬರಬಾರದು. ಅಂತ ಆಲೋಚಿಸುತ್ತಿದ್ದೇನೆ. ನಿಮ್ಮ ಇರಾದೆ ಏನು ? ಈಗಲಾದರೂ ದೇವರು ಕಣ್ಣು ಬಿಟ್ಟು ನೋಡಿದರೆ ಮುರಿದ ಮನೆ ಒಂದಾಗುತ್ತೆ."

ಶಾಸ್ತ್ರಿಗಳ ರಾಯಭಾರಕ್ಕೆ ಕಾವೇರಮ್ಮನೂ ಶ್ಯಾಮಣ್ಣನವರೂ ಸಂತೋಷದಿಂದ ಒಪ್ಪಿದರು. ಶಾಸ್ತ್ರಿಗಳು ಅಂದೇ ಬೆಂಗಳೂರಿಗೆ ಪ್ರಯಾಣ ಬೆಳಸಿದರು.

೪

ಗಂಡನ್ನು ಕುದುರಿಸಿಕೊಟ್ಟ ಶಾಸ್ತ್ರಿಗಳೇ ಗಂಡ-ಹೆಂಡಿರನ್ನು ಒಂದು ಮಾಡಲು ಮಧ್ಯಸ್ಥಿಕೆ ವಹಿಸಿದರು. ಈ ಕೆಲಸದಲ್ಲಿ ಯಶಸ್ಸುದೊರೆತರೆ ಚಂದ್ರಮೌಳೀಶ್ವರನಿಗೆ ಪಂಚಾಮೃತ ಅಭಿಷೇಕ ಮಾಡಿಸುವುದಾಗಿ ಹರಕೆ ಹೊತ್ತರು.

ಇಂತಹ ವಿಷಯಗಳಲ್ಲಿ ಶಾಸ್ತ್ರಿಗಳದು ನುರಿತ ಕೈ. ಶಾಸ್ತ್ರಿಗಳು ಕಸುಬಿನಿಂದ ವೈದಿಕರಾದರೂ ಲೌಕಿಕ ವ್ಯವಹಾರದಲ್ಲಿ ಯಾವ ಲೌಕಿಕರನ್ನೂ ಮೀರಿಸಬಲ್ಲ ಚತುರತೆ, ಜಾಣ್ಮೆ, ಮೇಲಾಗಿ ಅನುಭವ ಅವರಿಗಿತ್ತು. ಬೆರಳು ತೋರಿಸಿದರೆ ಹಸ್ತನುಂಗುವ ಕುಶಾಗ್ರಮತಿ. ಮನುಷ್ಯರ ಮರ್ಜಿಹಿಡಿದು ಕೆಲಸ ಸಾಧಿಸುವ ಗುಟ್ಟು ಅವರಿಗೆ ಕರತಲಾಮಲಕ. ಯಾರ ಮಾತಿಗೂ ಕಿವಿಕೊಡದ ಒರಟು ಗಂಡುಗಳು ಶಾಸ್ತ್ರಿಗಳ ಕೈಯಲ್ಲಿ ಪಳಗಿ ವಿವಾಹ ಸೂತ್ರದಿಂದ ಬಿಗಿಸಲ್ಪಟ್ಟಿದ್ದರು. ಎಷ್ಟೋ ಮುರಿದ ಸಂಸಾರಗಳು, ಅತ್ತೆಸೊಸೆ, ತಂದೆ ಮಕ್ಕಳ ಜಗಳಗಳು, ಕಪೆಗೆ ರಾಜಿ ಪಂಚಾಯತಿಗಳು ಇವರ ಪ್ರಯತ್ನದಿಂದ ಯಾರಿಗೂ ನೋವಾಗದ ರೀತಿಯಲ್ಲಿ ಬಗೆಹರಿಯಲ್ಪಟ್ಟಿದ್ದವು. ಹೀಗಾಗಿ ಆ ಪಟ್ಟಿಯಲ್ಲೆಲ್ಲ ಶಾಸ್ತ್ರಿಗಳೆಂದರೆ ತುಂಬಾ ಗೌರವ, ಆದರ, ಅಭಿಮಾನ.

ಶಾಸ್ತ್ರಿಗಳು ಬೆಂಗಳೂರಿಗೆ ಬಂದವರೇ ರಾಮಚಂದ್ರನ ರೂಂ ಪತ್ತೆಮಾಡಿ ಅವನಿಗಾಗಿ ಕಾದರು. ರಾತ್ರೆ ಸುಮಾರು ಏಳುಗಂಟೆಗೆ ರಾಮಚಂದ್ರನ ಬದಲು ಯಾರೋ ಕಾಕಿ ಬಟ್ಟೆಯ ಟೊಣಪ ರೂಂ ಗೆ ಬಂದರು. ಅವರನ್ನು ವಿಚಾರಿಸಲಾಗಿ ರಾಮಚಂದ್ರ ಒಂದೆರಡು ತಿಂಗಳ ಹಿಂದೆ ಆ ಕೋಣೆಯನ್ನು ಬಿಟ್ಟು ಹೋದನೆಂದು ತಿಳಿಯಿತು. ಅವನ ಹೊಸ ವಿಳಾಸ ಆ ಟೊಣಪನಿಗೆ ಗೊತ್ತಿಲ್ಲದಿದ್ದರೂ, ಅವನು ಊಟಕ್ಕೆ ಬರುತ್ತಿದ್ದ ಹೊಟಲು ತಿಳಿದಿತ್ತು. ಆತ ನಿರ್ದೇಶಿಸಿದ ಹೋಟೆಲನ್ನು ಹುಡುಕಿಕೊಂಡು, ಶಾಸ್ತ್ರಿಗಳು ಹೋಟೆಲು ಸಮೀಪಿಸುವುದಕ್ಕೂ ರಾಮಚಂದ್ರ ಅಲ್ಲಿಗೆ ಊಟಕ್ಕೆ ಬರುವುದಕ್ಕೂ ಸರಿಹೋಯಿತು. ರಾಮಚಂದ್ರ ಹ್ಯಾಟು ಬೂಟುಗಳನ್ನು ಧರಿಸಿ, ಶಿಲ್ಲು ಹೊಡೆಯುತ್ತಾ ಬಂದ. ಅವನ ಠೀವಿಯನ್ನು ನೋಡಿ, ರಾಮಚಂದ್ರ ತುಂಬಾ ಬದಲಾಗಿದ್ದಾನೆ ಎಂದು ಅಂದುಕೊಂಡರು ಶಾಸ್ತ್ರಿಗಳು.

" ರಾಮಚಂದ್ರರಾಯರಿಗೆ ನಮಸ್ಕಾರ " ಎಂದು ಶಾಸ್ತ್ರಿಗಳು ಹೇಳಿದಾಗಲೇ ಶಾಸ್ತ್ರಿಗಳತ್ತ ರಾಮಚಂದ್ರನ ಗಮನ ಹರಿದುದು. ಕ್ಷಣಕಾಲ ಅವನಿಗೆ ಶಾಸ್ತ್ರಿಗಳ ಗುರುತು ಸಿಗಲಿಲ್ಲ.

" ನಾನು ಮಹೋಬಲ ಶಾಸ್ತ್ರಿ " ಎಂದು ಶಾಸ್ತ್ರಿಗಳೇ ತಮ್ಮ ಪರಿಚಯ ಮಾಡಿಕೊಟ್ಟಾಗ ರಾಮಚಂದ್ರ "ಓಹೋ ನೀವಾ" ಎಂದು ರಾಗತೆಗೆದ. ಅವನಿಗೆ ಶಾಸ್ತ್ರಿಗಳ ದರ್ಶನವಾದದ್ದು ಏಕೋ ಕೆಡುಕೆನಿಸಿತು. ಶಾಸ್ತ್ರಿಗಳು ಸುಮ್ಮನೆ

ಬರುವ ಪ್ರಾಣಿಯಲ್ಲ. ಏನೋ ಕೆಲಸ ಹಚ್ಚಿಕೊಂಡು ಬಂದಿದ್ದಾರೆ ಎಂದು ಅವನ ಮನಸ್ಸಿಗೆ ಕಳವಳವಾದರೂ, ಅದನ್ನು ತೋರಗೊಡದೆ ಶಾಸ್ತ್ರಿಗಳ ಕ್ಷೇಮಸಮಾಚಾರ ವಿಚಾರಿಸಿದ. ಗಡಿಯಾರ ಎಂಟುಗಂಟೆ ಬಾರಿಸಿದಾಗ ಊಟ ವನ್ನು ನೆನೆಸಿಕೊಂಡು "ಶಾಸ್ತ್ರಿಗಳೇ ಊಟಕ್ಕೆ ಏಳ್ತಿರಾ" ಎಂದು ಹೇಳಿ ಆನಂತರ ಅನುಮಾನಿಸುತ್ತಾ "ಹೊಟೆಲಿನಲ್ಲಿ ನೀವೆಲ್ಲಿ ಊಟಮಾಡ್ತೀರಿ.... ನೀವು ಕೊಂಚ ಇಲ್ಲೇ ಕಾದಿರಿ..........ಒಂದೆರಡು ನಿಮಿಷಗಳಲ್ಲಿ ಬಂದು ಬಿಡ್ತೇನೆ" ಎಂದು ಹೇಳುತ್ತಾ ಶಾಸ್ತ್ರಿಗಳನ್ನು ಅತಿಥಿಗಳ ಕೋಣೆಯಲ್ಲಿ ಕೂಡಿಸಿ ಅಲ್ಲಿನ ಮೇಜಿನ ಮೇಲೆ ತಂದಿದ್ದ ಕೈಚೀಲವನ್ನು ಒಗೆದು ಊಟಕ್ಕೆ ಹೊರಟ. ಶಾಸ್ತ್ರಿಗಳ ದೃಷ್ಟಿ ರಾಮಚಂದ್ರನ ಕೈಚೀಲದ ಕಡೆ ಹೊರಳಿತು. ಕೈಚೀಲ ತುಂಬಾ ಹೊಸನಮೂನೆಯದಾಗಿತ್ತು. ಯಾರದೋ ಬುದ್ಧಿವಂತ ಕೈಯಿಂದ ರಚಿತವಾಗಿತ್ತು. ಅದರ ಒಳಗಿನಿಂದ ಮಲ್ಲಿಗೆ ಹೂವಿನ ವಾಸನೆಬರುತ್ತಿತ್ತು. ಹೂವಿನ ಜೊತೆಗೆ ಒಂದೆರಡು ಕಾಗದದ ಪೊಟ್ಟಣಗಳೂ ಇದ್ದವು. ಅವುಗಳ ತುಂಬಾ ಯಾವ ಯಾವುದೋ ಸಿಹಿತಿಂಡಿಯಿತ್ತು. ರಾಮಚಂದ್ರ ಹೇಳಿದ ಹೊತ್ತಿಗಿಂತ ಮುಂಚೆಯೇ ಊಟಮುಗಿಸಿ ಬಂದ. ಶಾಸ್ತ್ರಿಗಳ ಮುಖ ಕಂಡ ಮೇಲೆ ಅವನಿಗೆ ಒಮ್ಮನಸ್ಸಿನಿಂದ ಊಟಮಾಡಲಾಗಲಿಲ್ಲ. ಶಾಸ್ತ್ರಿಗಳು ಯಾವುದೋ ಕಾರ್ಯಾರ್ಥವಾಗಿ ಬಂದಿದ್ದಾರೆ. ಬಹುಶಃ ಕೋರಟಿಯಿಂದ ಬಂದಿದ್ದಾರೋ ಏನೋ........

ಊಟಮುಗಿಸಿ ರಾಮಚಂದ್ರ ತನ್ನ ಇನಿಯಳ ಮನೆಗೆ, ಹೂ ತಿಂಡಿಗಳ ಸಮೇತ ಹೋಗುವವನಿದ್ದ. ಆ ದಿನ ಯಾವುದೋ ಸಿನಿಮಾದ ಪ್ರೋಗ್ರಾಂ ಇಟ್ಟಿದ್ದ. ಹೀಗಿರುವಲ್ಲಿ ಶಾಸ್ತ್ರಿಗಳು ಕಾಣಿಸಿಕೊಂಡುದು ಅವನಿಗೆ ಭೂತ ಕಾಣಿಸಿಕೊಂಡಂತಾಗಿತ್ತು ಈ ಬ್ರಾಹ್ಮಣನನ್ನು ಹೇಗೆ ಸಾಗಹಾಕುವವುದು ಎನ್ನುವ ಯೋಚನೆಯಲ್ಲಿ ಮಾಣಿ ತಂದಿಟ್ಟ ಊಟ ಗಂಟಲಿನಲ್ಲಿ ಇಳಿಯಲೇ ಇಲ್ಲ.

ರಾಮಚಂದ್ರ ಅನ್ಯಮನಸ್ಕನಾಗಿ ಕೈತೊಳೆದುಕೊಂಡು ಹೊರಬಂದಾಗ ಶಾಸ್ತ್ರಿಗಳು ಹೊರಡಲು ಶಿದ್ಧರಾಗಿ ನಿಂತಿದ್ದರು.

"ಶಾಸ್ತ್ರಿಗಳೇ ನಿಮ್ಮ ಮೊಕ್ಕಾಂ ಎಲ್ಲಿ" ಎಂದು ಕೇಳಿದ.

"ಎಲ್ಲಿ ಅಂದರೆ ಅಲ್ಲೇ........ಹೇಗೂ ನಿನ್ನ ರೂಂ ಇದೆಯಲ್ಲ"

ಈ ಮಾತು ಕೇಳಿ ರಾಮಚಂದ್ರ ಸುಸ್ತುಹೊಡೆದ.

" ಶಾಸ್ತ್ರಿಗಳೇ ನನಗೆ ಕೊಂಚ ಕೆಲಸವಿದೆಯಲ್ಲ........ ನೀವು ನನ್ನನ್ನು ನಾಳೆ ನೋಡಿದರೆ ಆಗದೇ ? " ಎಂದ.

" ಅಂತಹ ರಾಜಕಾರ್ಯವೇನಪ್ಪ ನಿನಗೆ........ಸಿನಿಮಾ ಪ್ರೋಗ್ರಾಂ ತಾನೇ........" ಕೊಂಚ ನಿಧಾನಿಸಿ " ಹೋಗಲೇ ಬೇಕಾದರೆ ಹೋಗಿಬಾ.... ನಾನು ನೀನು ಬರುವ ತನಕ ನಿನ್ನ ರೂಂನಲ್ಲಿಯೇ ಇರುತ್ತೇನೆ" ಎಂದರು ಶಾಸ್ತ್ರಿಗಳು. ರಾಮಚಂದ್ರನಿಗೆ ಈಗ ಒಳ್ಳೆಯ ಪೀಕಲಾಟಕ್ಕೆ ಇಟ್ಟುಕೊಂಡಿತು. ಸಿನಿಮಾಕ್ಕೆ ಹೋದರೆ ತನ್ನ ಗುಟ್ಟು ಬಯಲಾಗುವ ಸಂಭವವಿದೆ. ಶಾಸ್ತ್ರಿಗಳು ತನ್ನನ್ನು ಹಿಂಬಾಲಿಸಲೂ ಸಿದ್ಧ. ಸಿನಿಮಾ ಪ್ರೋಗ್ರಾಂ 'ಕ್ಯಾನ್ಸಲ್' ಮಾಡಿದರೆ, ಮೋಹಿನಿ ಸಿಟ್ಟು ಮಾಡುವಳೋ ಏನೋ. ಈ ತಾಕಲಾಟದಲ್ಲಿ ಏನು ಮಾಡಲೂ ತೋಚದೆ, ರಾಮಚಂದ್ರ ನೇರರೂಮಿಗೆ ಬಂದನು. ತನ್ನನ್ನು ಕಂಡಾರಭ್ಯ ರಾಮಚಂದ್ರ ತಬ್ಬಿಬ್ಬಾದುದನ್ನು ಕಂಡು ಶಾಸ್ತ್ರಿಗಳಿಗೆ ಒಳ ಒಳಗೇ ನಗು.

ಕೋಣೆಗೆ ಬಂದ ಮೇಲೆ ಶಾಸ್ತ್ರಿಗಳ ದೃಷ್ಟಿ ಕೈಚೀಲದ ಮೇಲೆ ಇರುವುದನ್ನುನೋಡಿ ರಾಮಚಂದ್ರ "ಹೂ ಚೆನ್ನಾಗಿತ್ತು ದೇವರ ಫೋಟೋಕ್ಕೆ ಹಾಕಲು ಕೊಂಡುತಂದೆ" ಎಂದು ಹೇಳುತ್ತಾ ಗೋಡೆಗೆ ತಗುಲಿಹಾಕಿದ್ದ ಮಹಾಲಕ್ಷ್ಮಿಯ ಚಿತ್ರಕ್ಕೆ ಹಾರಹಾಕಿದ. ಆದರೆ ಅದರೊಡನೆ ತಂದಿದ್ದ ಮಲ್ಲಿಗೆಯ ದಂಡೆಯನ್ನೇನು ಮಾಡಬೇಕು ? ಶಾಸ್ತ್ರಿಗಳು ಎಲ್ಲಿ ಮಲ್ಲಿಗೆಯ ದಂಡೆಯನ್ನು ಕಂಡುಕೊಳ್ಳುವರೋ ಎಂದು ರಾಮಚಂದ್ರ ಕೈಚೀಲದಲ್ಲಿ ಅದನ್ನು ತುರುಕಿದ. ಅವನ ಗಾಬರಿಯನ್ನು ಕಂಡು ಶಾಸ್ತ್ರಿಗಳಿಗೆ ನಗುಬರದೇ ಇರಲಿಲ್ಲ. ಖೊಳ್ ಎಂದು ನಕ್ಕು ಬಿಟ್ಟರು.

" ಯಾಕೆ ಶಾಸ್ತ್ರಿಗಳೇ ನಗು ? "

" ಏನೂ ಇಲ್ಲಪ್ಪ. ಯಾವಾಗಿನಿಂದ ನೀನು ಲಕ್ಷ್ಮೀದೇವಿಯ ಪೂಜೆಗೆ ಶುರುಮಾಡಿದ್ದೀ "

ರಾಮಚಂದ್ರ ಸುಮ್ಮನೆ ನಕ್ಕುಬಿಟ್ಟ.

" ಅಂತೂ ನೀನು ಶ್ರೀದೇವಿ ಭೂದೇವಿಯರನ್ನು ಒಲಿಸಿಕೊಳ್ಳುವ

ಸಂಭ್ರಮದಲ್ಲಿ ನಿನಗಾಗಿ ಕಾದು ಕುಳಿತಿರುವ ಆ ಮೂದೇವಿಯನ್ನು ಮರತೇ ಬಿಟ್ಟಿದ್ದೀಯೋ! " ನಗುತ್ತಲೆಂದರು ಶಾಸ್ತ್ರಿಗಳು.

ಈ ಮಾತು ರಾಮಚಂದ್ರನ ಮೇಲೆ ಶಾಸ್ತ್ರಿಗಳ ನಿರೀಕ್ಷೆಗೂ ಮೀರಿದ ಪರಿಣಾಮ ಉಂಟಾಯಿತು. ಅವನ ಕಳ್ಳ ಮನಸ್ಸು ಈ ಮಾತಿನಿಂದ ಅಳುಕಿತು. ಆದರೂ ಅದನ್ನು ತೋರ್ಪಡಿಸದೆ ವಿನೋದವಾಗಿ ಹೇಳಿದ. "ಶ್ರೀದೇವಿಯೇನೋ ಸರಿ–ಲಕ್ಷ್ಮಿಯಾಯಿತು. ಭೂದೇವಿ, ಮೂದೇವಿಯರು ಯಾರೋ ತಿಳಿಯಲಿಲ್ಲ."

"ಮೂದೇವಿ ಯಾರೂ ಅಲ್ಲ. ನಿನ್ನ ಧರ್ಮಪತ್ನಿ ಶಾರದೆ. ನಿನ್ನ ಚಿಂತೆಯಲ್ಲಿ ಅವಳು ಮೂಲೆ ಹಿಡಿದು ಮೂದೇವಿಯಾಗಿದ್ದಾಳೆ. ಇನ್ನು ಭೂದೇವಿಯಾರು ಅಂತೀಯಾ ?"

ರಾಮಚಂದ್ರ ತನ್ನ ಗುಟ್ಟು ರಟ್ಟಾಗುವುದೋ ಎಂದು ಹೆದರಿದ. ಗಾಬರಿಗೊಂಡ ದನಿಯಲ್ಲಿ " ಯಾರು ? " ಎಂದ.

" ಯಾರೆಂದು ನಿನಗೆ ಗೊತ್ತು. ಆದರೂ ನನ್ನಿಂದಲೇ ಹೊರಡಿಸಬೇಕೆನ್ನುತ್ತೀಯಾ ಘಾಟೀ........"

ರಾಮಚಂದ್ರನ ಮುಖ ಕಪ್ಪಿಟ್ಟು ಸುಟ್ಟ ಬದನೆಯಕಾಯಿಯಾಯಿತು. ಆದರೂ ಆ ವಿಷಯ ತನಗೆ ಗೊತ್ತಿಲ್ಲವೆಂದು ತಲೆಯಲ್ಲಾಡಿಸಿದ.

" ಈ ಕೈಚೀಲದ ಮಲ್ಲಿಗೆ ಮೊಗ್ಗಿನವಂಡೆ, ಕಾಗದದ ಪೊಟ್ಟಣದ ಸಿಹಿತಿಂಡಿ ಯಾವ ದೇವಿಗೆ ನೈವೇದ್ಯವೋ ಆ ದೇವಿಯೇ ಭೂದೇವಿ! "

ಈ ಮಾತನ್ನು ಕೇಳಿ ರಾಮಚಂದ್ರ ಸ್ಥಂಭೀಭೂತನಾಗಿ ಕುಳಿತ. ಶಾಸ್ತ್ರಿಗಳು ಇಷ್ಟು ನೇರವಾಗಿ, ಇಷ್ಟು ಸರಳವಾಗಿ ತನ್ನ ಗುಟ್ಟನ್ನು ಬಯಲು ಮಾಡುವರೆಂದು ಅವನು ಎಣಿಸಿರಲಿಲ್ಲ. ಶಾಸ್ತ್ರಿಗಳ ಮುಂದೆ ತನ್ನ ಆಟ ಸಾಗದೆಂದು ಬೇರೊಂದು ವರಸೆ ತೆಗೆದ. ಅವನ ಮುಖದಲ್ಲಿ ದೈನ್ಯತೆಯಿತ್ತು.

" ಶಾಸ್ತ್ರಿಗಳೇ ನಿಮಗೂ ನನ್ನ ವಿಷಯದಲ್ಲಿ ಸಂಶಯವೇ ? "

" ಛೆ! ಛೆ!! ನಿನ್ನ ವಿಷಯದಲ್ಲಿ ನನಗೆ ಎಳ್ಳಷ್ಟೂ ಸಂಶಯವಿಲ್ಲ."

" ಹಾಗಾದರೆ ನೀವು ಭೂದೇವಿಯ ವಿಷಯ ಎತ್ತಿದಿರಲ್ಲ ?"

" ಅದೋ........ನಮ್ಮೂರಿನ ತನಕ ಬಂದಿರೋ ಗಾಳಿ ಸುದ್ದಿ!"

" ನೀವು ಇಷ್ಟು ತಿಳಿದೂ ತಿಳಿದೂ ಅದನ್ನೆಲ್ಲಾ ನಂಬುತ್ತೀರಲ್ಲಾ! "

" ಇಲ್ಲಪ್ಪ ಖಂಡಿತ ಅವುಗಳನ್ನು ನಾನು ನಂಬುವದಿಲ್ಲ. ಆದರೆ ನಮ್ಮೂರಿನ ಜನ ಎಂಥವರು ಇದ್ದಾರೆ ಅಂತಿದ್ದೀಯಾ........ಇಂತಹ ವಿಷಯಗಳಲ್ಲಿ ಅವರು ಖದೀಮರು! ನಾನೇ ನನ್ನ ಕಣ್ಣಿಸಿಂದ ನೋಡಿದೆ ಅಂತ ಒಬ್ಬ ಅಂದರೆ- ನಾನು ಮಾತ್ನಾಡಿಸಿಬಂದೆ ಅಂತ ಇನ್ನೊಬ್ಬ. ಹೀಗೆಲ್ಲಾ ಗುಲ್ಲೇ ಗುಲ್ಲು ಎಬ್ಬಿಸಿ ಬಿಟ್ಟಿದ್ದಾರೆ. ಯಾರು ನೋಡಿದರೂ ಶಾಮಣ್ಣೋರ್‍ನ ನಿಮ್ಮ ಅಳಿಯ ಮೋಡಂ ಸಹವಾಸ ಮಾಡಿಕೊಂಡಿದ್ದಾನಂತೆ—ಹೆಂಡತೀನ ಬಿಟ್ಟಿದ್ದಾನಂತೆ ಹೌದೇ........ಅಂತ ಕೇಳಿ ಕಿರುಕಳ ಕೊಡ್ತಿದಾರೆ......."

" ಶ್ಯಾಮಣ್ಣೋರು ಇದನ್ನು ನಿಜ ಅಂತ ನಂಬುತ್ತಾರಾ ? "

" ಇಲ್ಲಪ್ಪ! ಅವರು ನನ್ನ ಅಳಿಯ ಹಾಗೆಲ್ಲ ಅಡ್ಡದಾರಿ ಹಿಡಿಯೋನಲ್ಲ. ಅವನ ವಿಷಯ ನಿಮಗೇನು ಗೊತ್ತು ಎಂದು ಬಾಯಿ ಮುಚ್ಚಿಸುತ್ತಿದ್ದಾರೆ...."

" ಹಾಗಾದ್ರೆ ಶ್ಯಾಮಣ್ಣೋರ್‍ಗೆ—ಮನೆ ಹೆಂಗಸರಿಗೆ ನನ್ನ ವಿಷಯದಲ್ಲಿ ಇನ್ನೂ ಒಳ್ಳೆ ಅಭಿಪ್ರಾಯಾನೇ ಇದೆ! "

" ಖಂಡಿತವಾಗಿ! "

" ನೋಡಿ ಶಾಸ್ತ್ರಿಗಳೇ ನಾನೇನೂ ರಾಮಕೃಷ್ಣಾಅಂತ ಇಲ್ಲಿ ಕಾಲ ಹಾಕ್ತಾ ಇದ್ದರೆ ಆ ಹಳ್ಳಿ ಪಟಿಂಗರು ಏನೇನೋ ಸುಳ್ಳು ಸುದ್ದಿ ಹರಡಿಬಿಟ್ಟಿದ್ದಾರೆ. ಮಾನವಂತರು ಆ ಊರಿನಲ್ಲಿ ತಲೆ ಎತ್ತಿಕೊಂಡು ತಿರುಗೋಕೆ ಆಗುತ್ತ್ಯೆ" ಎಂದು ವಿಷಾದ ವ್ಯಕ್ತಪಡಿಸಿದ.

ಶಾಸ್ತ್ರಿಗಳು " ಅಯ್ಯೋ ಪಾಪ ! ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿದ್ರೆ........" ಎಂದುಕೊಂಡರು ಮನಸ್ಸಿನಲ್ಲಿ.

" ಇರಲಿ ತಾವು ಬಂದ ಕೆಲಸ ಅಪ್ಪಣೆ ಕೊಡಿಸಲೇ ಇಲ್ಲವಲ್ಲ." ಎಂದು ಆರಾಮವಾಗಿ ಹೇಳಿದ ರಾಮಚಂದ್ರ.

" ಏನೂ ಇಲ್ಲಪ್ಪ........ಪಾಪ ಆ ಹೆಣ್ಣು ಮಗಳು ಎಷ್ಟು ದಿನ ಹೀಗೆ ಕೊರಗಬೇಕೂಂತ ಹೇಳ್ತೀ ? "...........ಅವಳ ಚಿಕ್ಕಪ್ಪ ಮಾಡಿದ ತಪ್ಪಿಗೆ ಅವಳಿಗೆ ಶಿಕ್ಷೆಯೇ ? " ಎಂದರು ರಾಗವಾಗಿ

ರಾಮಚಂದ್ರನಿಗೆ ಶಾಸ್ತ್ರಿಗಳು ಭೂದೇವಿಯ ವಿಷಯ ಬಿಟ್ಟು ಬೇರೆ ಮಾತು ತೆಗೆದರೆ ಸಾಕೆನಿಸಿತ್ತು.

" ಅದು ಸರಿ, ಶಾಸ್ತ್ರಿಗಳೇ ನನಗೆ ಅವರು ಮೋಸಮಾಡಬಹುದೋ "

" ತಪ್ಪು ತಪ್ಪು ! ಅವರ ಒಳಮತ್ತು ನನಗೆ ಮೊದಲೇ ಗೊತ್ತಾಗಿದ್ರೆ ನಾನೇ ಬೇಡ ರಾಮುಚಂದ್ರ ಅಂತ ಹೇಳಿ ಬಿಡುತ್ತಿದ್ದೆ. ಅವರು ನಿನ್ನ ಜೊತೆಗೆ ನನಗೂ ಮುಂಕುಬೂದಿ ಹಾಕಿದರು."

" ಅವಕ್ಕೆ ಅನುಭವಿಸಲಿ ಅನ್ನೋದು." ವ್ಯಗ್ರನಾಗಿ ಹೇಳಿದ ರಾಮುಚಂದ್ರ.

" ಈಗ ಆಗಿಹೋದ ಕಥೇನ ತೋಡಿಕೊಂಡು ಮತ್ತೆ ಮನಸ್ಸನ್ನೇಕೆ ಕಹಿ ಮಾಡಿಕೊಳ್ಳಬೇಕು? ನಾನು ಕೊರಟಿಗೆ ಹೋಗಿ 'ನಾನು ಮಾಡಿದ್ದು ಸರ್ವಾಪರಾಧವಾಯಿತು.' ಅಂತ ಶ್ಯಾಮಣ್ಣೋರ ಕೈಯಲ್ಲಿ ನಿನ್ನ ಕಾಲು ಹಿಡಿಸಿ ತಪ್ಪು ಒಪ್ಪಿಕೊಳ್ಳೋ ಹಾಗೆ ಮಾಡಲೇನು ? "

" ಛೇ ! ನಿಮಗೇಕೇ ಅಷ್ಟೆಲ್ಲಾ ತೊಂದರೆ ? "

" ತೊಂದರೆಯೂ ಅಲ್ಲ, ಎಂಥದೂ ಅಲ್ಲ. ಅವರು ನಿನಗೆ ಮಾತ್ರ ಮೋಸ ಮಾಡಲಿಲ್ಲ. ಅವರ ಜತೆಗೆ ನನಗೂ ಮಾಡಿದ್ದಾರೆ. ನಿನಗಾದ ಅವಮಾನ ನನಗೂ ಅಲ್ಲವೇ........ಅವರು ಬಂದು ನಿನ್ನ ಕಾಲು ಹಿಡಿದು ತಪ್ಪಾಯಿತು ಅಂತ ಹೇಳಿ ತಪ್ಪುಕಾಣಿಕೆ ಕೊಡೋತನಕ ನನಗೆಲ್ಲಿ ಮನಶ್ಶಾಂತಿ ? "

" ತಪ್ಪುಕಾಣಿಕೆ ಅಂದ್ರೆ ? "

ಇದು ಯೋಗ್ಯ ಸೂಚನೆ ರಾಮುಚಂದ್ರನಿಗೆ. ಈಚೆಗೆ ರಾಮುಚಂದ್ರ ನಿಗೆ ' ಆಕೆ 'ಯ ದೆಸೆಯಿಂದ ಕೊಂಚ ಸಾಲವಾಗಿತ್ತು. ಬರುವ ಸಂಪಾದನೆ ಹೊಟ್ಟೆ ಬಟ್ಟೆಗೆ ಸರಿಹೋಗಿ ಸಾಲಮಾತ್ರ ಏರುತ್ತಲೇ ಹೋಗಿತ್ತು. ಅದನ್ನು ತೀರಿಸುವ ಬಗೆ ಹೇಗೆಂದು ಆಲೋಚಿಸುತ್ತಿರುವಾಗ ಶಾಸ್ತ್ರಿಗಳ ಮಾತು ಅವ ಕ್ಕೊಂದು ದಾರಿ ತೋರಿಸಿತ್ತು.

" ಹಾಗಾದರೆ ನಾನು ಹಾಕುವಷ್ಟು ದಂಡ ಅವರು ಕೊಡ್ತಾರಾ ? "

" ಯಾರುಪಕಾರಕ್ಕೆ ಕೊಡ್ತಾರ ? ಅಲ್ಲದೆ ನೀನೇನು ಹೊರಗಿನವನೇ?"

" ಅಲ್ಲಿ ನಾನು ಸಾವಿರ ರೂಪಾಯಿ ಅಂದರ............"

" ಸಾವಿರ ಕೇಳಿದರೆ ಐನೂರಾದರೂ ಗಟ್ಟಿ............ನೀನು ಸಾವಿರ ಏಟುಹಾಕು."

"ಆಗಲಿ ಯಾವುದನ್ನೂ ಆಲೋಚಿಸಿ ತಿಳಿಸುತ್ತೇನೆ." ಎಂದು ಹಾಸಿಗೆ ಉರುಳಿಸಿಮಲಗಿದ. ಶಾಸ್ತ್ರಿಗಳೂ ರಾಮಚಂದ್ರನ ಬಲವಂತಕ್ಕೆ ಒಂದೆರಡು ಬಾಳೆಯಹಣ್ಣಿನ ಫಲಾಹಾರ ಮಾಡಿ ಅಲ್ಲಿಯೇ ಮಲಗಿದರು. ರಾಮಚಂದ್ರ ರಾತ್ರಿಯೆಲ್ಲಾ ಶಾರದೆಯನ್ನು ಮನೆಗೆ ಕರೆಸಿಕೊಳ್ಳುವ ವಿಚಾರವನ್ನು ಹತ್ತು ರೀತಿಯಲ್ಲಿ ಮನಸ್ಸಿನಲ್ಲೇ ತಿರುವಿಹಾಕಿದ. ಹಲವಾರು ಅಂಶಗಳು ರಾಮಚಂದ್ರ ಹೆಂಡತಿಯನ್ನು ಬಿಟ್ಟಿದ್ದು ಸರಿಯಲ್ಲವೆಂದು ದೂರಿದವು. ತಂದೆ ಶ್ರೀಕಂಠಪ್ಪ ಸಾಯುವ ಮುನ್ನ 'ಆ ಹುಡುಗಿಯನ್ನು ಕೈಬಿಡಬೇಡ ಎಂದು ಹೇಳಿ' ತೀರಿಕೊಂಡಿದ್ದರು. ತಂದೆಯ ಕೊನೆಯಾಸೆ ತೀರಿಸದ ಹೊರತು ಅವರ ಆತ್ಮಕ್ಕೆ ಶಾಂತಿಯಿಲ್ಲ. ಇದರ ಜತೆಗೆ ಭೂತದಯಾ ಪ್ರೇರಿತವಿಚಾರ ಬೇರೆ. ಯಾರೋ ಮಾಡಿದ ತಪ್ಪಿಗೆ ಯಾರಿಗೋ ಶಿಕ್ಷೆವಿಧಿಸುವುದೇ. ತನ್ನನ್ನು ಕೈಹಿಡಿದು ಆ ಹುಡುಗಿ ಏನುಸುಖಬಟ್ಟಳು. ತಾನೇನೋ ಲಗಾಮಿಲ್ಲದ ಕುದುರೆಯಂತೆ ಯೌವನದ ನೂರು ಆಸೆಗಳನ್ನು ಈಡೇರಿಸಿಕೊಂಡಿದ್ದೇನೆ. ಆದರೆ ಆ ಹೆಣ್ಣಿನಪಾಡು. ಈ ವಾದಕ್ಕೆ ಪುಷ್ಟಿಕೊಡಲು ರಾಮಚಂದ್ರನ ಆರ್ಥಿಕ ಮುಗ್ಗಟ್ಟು ಬೇರೆ. ನಾಲದ ಹೊರೆ ದಿನದಿನಕ್ಕೆ ಜಾಸ್ತಿಯಾಗಿ ಹೊಟ್ಟೆಯಿಟ್ಟು ತನ್ನ ಸಂತಾನವನ್ನು ಬೇಸುತ್ತಲೇ ಇತ್ತು. ಅದನ್ನು ತೀರಿಸಲು ರಾಮಚಂದ್ರನಿಗೆ ಶಾಸ್ತ್ರಿಗಳು ತೋರಿಸಿದ ದಾರಿ ವಿನಹ ಬೇರೆ ಮಾರ್ಗವಿಲ್ಲ. ಇದಲ್ಲದೆ ಮೋಹಿನಿಯ ಪರಿಚಯದ ಲಾಗಾಯಿತು ರಾಮಚಂದ್ರನಿಗೆ ಅವನ ಅನೇಕ ಮೊಂಡು ವಿಚಾರಗಳು ಸಾಣೆಗೊಂಡಿದ್ದವು. ಅವನ ಭಾಗಕ್ಕೆ ಕರಿಯ ಹೆಗ್ಗಣವಾಗಿ ತೋರಿದ್ದ ಶಾರದೆಗೆ ಹೃದಯವಿದೆ, ಆಕೆಗೂ ತನ್ನಂತೆ ಬದುಕಿ ಬಾಳುವ ಆಸೆಯಿದೆ ಎಂದು ತಿಳಿಯುವಷ್ಟು ಸುಸಂಸ್ಕೃತನಾಗಿದ್ದ. ಇದರ ಜೊತೆಗೆ ರಾಮಚಂದ್ರನ ಸಪತೆಯ ವಿಷಯದಲ್ಲಿ ಎದ್ದಿರುವ ಅಪಮಾನದ ಭೂತ ಬೇರೆ. ಇದನ್ನು ನಿರ್ಲಕ್ಷಿಸಿ ಬಾಳುವಷ್ಟು ದಿಟ್ಟೆದೆಯವನಲ್ಲ ಅವನು. ತನ್ನ ಪಟ್ಟಣದ ಬಾಳು ಬಯಲಾಗದೆ ಇರಲು ಶಾರದೆಯನ್ನು ಮತ್ತೆ ಕೂಡಿಕೊಳ್ಳುವುದೇ ಉತ್ತಮ ದಾರಿ. ಎಂದೆಲ್ಲಾ ಆಲೋಚಿಸಿ ಶಾರದೆಯನ್ನು ಕರೆಸಿಕೊಳ್ಳುವ ತನ್ನ ನಿರ್ಧಾರ ಶಾಸ್ತ್ರಿಗಳಿಗೆ ತಿಳಿಸಿಬಿಟ್ಟ.

ಶಾಸ್ತ್ರಿಗಳು ರಾಮಚಂದ್ರ ಇಷ್ಟು ಬೇಗನೆ ಹದಕ್ಕೆ ಬರುವನೆಂದು ಖಂಡಿತ ತಿಳಿದಿರಲಿಲ್ಲ. ಎಲ್ಲವೂ ಚಂದ್ರಮೌಳೀಶ್ವರನ ಕೃಪೆ ಎಂದು ಅವನನ್ನು ಮನಸಾರೆ

ವಂದಿಸಿದರು. ಅವರು ಅಂದೇ ಕೊರಟಿಗೆ ಬಂದು ನಡೆದ ವಿಷಯವನ್ನು ವರದಿ ಮಾಡಿದರು. ಕಾವೇರಮ್ಮನಿಗೆ ಈ ಸುದ್ದಿ ಕೇಳಿ ಸಂತೋಷದಿಂದ ಉಸಿರುಕಟ್ಟಿತು. ಹಣದ ವಿಷಯ ಎತ್ತಿದಾಗ ಅವರು ಮೊದಲಿನ ಮನುಷ್ಯರೇ ಆದರು.

" ಹಾಗಾದರೆ ಇನ್ನೂ ಕೊಂಡಿ ತಗುಲಿಕೊಂಡೇ ಇದೆ....ಹಣ—ಅವನು ಕೇಳುವಷ್ಟು ಹಣ ಎಲ್ಲಿಂದ ತಂದು ಪೂರೈಸುವುದು ?" ಎಂದು ಯೋಚಿಸುತ್ತಾ ಕುಳಿತು ಬಿಟ್ಟರು.

ಈ ವೇಳೆಗೆ ಹಳ್ಳಿಗೆ ಹೋಗಿದ್ದ ಶ್ಯಾಮಣ್ಣನವರೂ ಮನೆಗೆ ಬಂದು ಎಲ್ಲ ವಿಷಯ ತಿಳಿದು ಸಮಾಧಾನದ ನಿಟ್ಟುಸಿರನ್ನು ಬಿಟ್ಟರು.

" ಸಧ್ಯ ದೇವರು ಇಂದಾದರೂ ಕಣ್ಣುಬಿಟ್ಟು ನೋಡಿದನಲ್ಲ ! "

ಶಾಸ್ತ್ರಿಗಳು ತಪ್ಪುಕಾಣಿಕೆಯ ವಿಷಯವೆತ್ತಿದರು.

ಶ್ಯಾಮಣ್ಣನವರು ಆಗಲಿ ನೋಡೋಣವೆಂದು ಮೌನ ತಾಳಿದರು.

ಒಂದೆರಡು ದಿನ ಮನೆಯಲ್ಲಿ ತುಂಬಾ ತೊಂಜಾವಂಜ. " ತಾವು ಮದುವೆಯಲ್ಲೇ ತಮ್ಮ ಶಕ್ತಿಗೆ ಮೀರಿದ ವರೋಪಚಾರ ಮಾಡಿರುವಾಗ ಈಗೆಂತಹ ಹಣ ?" ಎಂದು ಮಗ ನರಸಿಂಹ ಮೂರ್ತಿ ಭಾಗೀರಥಮ್ಮ ಗೊಣಗಿಕೊಂಡರು. ಕಾವೇರಮ್ಮ ಅದನ್ನು ಕೇಳಿಯೂ ಕೇಳದವರಂತೆ ಸುಮ್ಮನಿದ್ದು ಬಿಟ್ಟರು. ಶ್ಯಾಮಣ್ಣನವರು " ಹಾಳು ಹಣದ ಮುಖ ನೋಡಬೇಕೋ ಹುಡುಗಿಯ ಸುಖ ನೋಡಬೇಕೋ " ಎಂದರು.

ಗಂಡನ ಮಾತು ಸರಿಬರದೆ ಭಾಗೀರಥಮ್ಮ ಕೊಲಿಕೆ ಹಾಕಿದರು.

" ಹಣ ಕೊಟ್ಟಮೇಲೆ ಹುಡುಗಿಯನ್ನು ಸುಖವಾಗಿ ಬಾಳಿಸುತ್ತಾನೆ ಅನ್ನೋದು ಏನು ಗ್ಯಾರಂಟಿ ?"

ಈ ಮಾತು ಕೇಳಿ ಶ್ಯಾಮಣ್ಣನವರು ರೇಗಿದರು.

" ಇದಕ್ಕೇ ಹೇಳೋದು ಅಧಿಕ ಪ್ರಸಂಗಿತನ ಅಂತ. ನೀನು ಮಹಾ ಕಂಡಿದ್ದಿ. ಅವಳು ಬದುಕೋದೂ—ಬಿಡೋದೂ. ತೆಪ್ಪಗೆ ಅಡಿಗೆ ಮಾಡೋದು ಬಿಟ್ಟು ಈ ಸುದ್ದಿ ಎಲ್ಲಾ ನಿನಗೆ ಯಾಕೆ ? "

ಅವರೆಂದೂ ಈ ಬಗೆ ಆಡಿರಲಿಲ್ಲ. ಭಾಗೀರಥಮ್ಮ ತೆಪ್ಪಗಾದರು. ಆದರೆ ಮಗ ಸುಮ್ಮನಿರಬೇಕಲ್ಲ !

"ಆಗಲಪ್ಪ. ಶಾರದೆ ಸುಖವಾಗಿರೋದಾದ್ರೆ ಹಣ ಕೊಡೋಣ. ಆದರೆ ಹಣ ಈಗಲೇ ಬೇಕೂಂತಅಂದ್ರೆ ನಾವು ಎಲ್ಲಿಂದ ತಂದುಕೊಡೋದು?" ಎಂದ ನರಸಿಂಹಮೂರ್ತಿ.

"ಎಲ್ಲಿಂದ ಅಂದರೆ—ಯಾವುದಾದರೂ ಜಮೀನು ಮಾರೋದು."

ಈ ಮಾತು ಕೇಳಿ ಗಾಬರಿಯಾದ ನರಸಿಂಹಮೂರ್ತಿ. ಅವನಿಗೆ ಅಂಗೈಯಗಲ ಜಮೀನು ಮಾರುವುದೆಂದರೆ ತನ್ನ ಅಂಗ ಊನವಾದಷ್ಟೇ ದುಃಖ. ಜಮೀನುಗಳ ವಿಷಯದಲ್ಲಿ ಅಷ್ಟೊಂದು ಮಮತೆ ಅವನಿಗೆ.

"ಜಮೀನು ಮಾರೋದು ಹೇಗಾಗುತ್ತಪ್ಪಾ" ಎಂದು ರಾಗ ತೆಗೆದ ಮಗ. ತಂದೆ ಮಗನ ಮುಖ ನೋಡಿದರು. ಮಗನ ಮುಖದಲ್ಲಿ ನಿಷ್ಠುರ ಭಾವವಿತ್ತು. ಶ್ಯಾಮಣ್ಣನವರು ಅಧೀರರಾದರು. ಹೌದು. ವಸುಂಧರೆಯನ್ನು ನಂಬಿ ಕುಳಿತಿರುವ ತಾವು ಆಕೆಯನ್ನು ಪರಾಧೀನ ಮಾಡುವುದೇ? ಹಣ ಗಳಿಸಲು ಬೇರೆ ದಾರಿ ಕಾಣಿಸದಾಯ್ತು ಅವರಿಗೆ. ಹೆಣ್ಣುಮಕ್ಕಳ ಸುಖಕ್ಕಿಂತಲೂ ಭೂಮಿ ಹೆಚ್ಚೇ?" ಎಂದು ಆಲೋಚಿಸಿ ಏನನ್ನೋ ನಿರ್ಧರಿಸಿ ಮಗನಿಗೆ ಹೇಳಿದರು.

"ಅಣ್ಣನ ಮಗಳಾದ ಅವಳಿಗೆ ಅಣ್ಣನ ಆಸ್ತಿಯಲ್ಲಿ ಹಕ್ಕಿಲ್ಲವೇ? ಗಂಡು ಮಗನಾಗಿದ್ದರೆ ಸಮಪಾಲು ಕೇಳುತ್ತಿರಲಿಲ್ಲವೇ? ಈಗ ಅವಳು ಕೇಳುವದಾದರೂ ಏನು? ಅಲ್ಲ....ನಾವು ಕೊಡುವುದಾದರೂ ಏನು? ಅವಳ ಅರಿಶಿನ ಕುಂಕುಮಕ್ಕೆಂದು ಒಂದು ಚೂರು ಭೂಮಿಯ ಮೌಲ್ಯ. ಇದಕ್ಕೆ ನಾವು ಹಿಂದು ಮುಂದು ತುಳಿದರೆ ದೇವರು ಮೆಚ್ಚಿಯಾನೇ? ಜನ ಮೆಚ್ಚಿಯಾರೇ?"

ಶ್ಯಾಮಣ್ಣನವರಿಗೆ ದೇವರ ಭೀತಿಯಷ್ಟೇ ಜನರ ಭೀತಿಯಿತ್ತು. ಹತ್ತು ಮಂದಿಗೆ ಮಾರ್ಗದರ್ಶಕರಾಗಿದ್ದ ಅವರೇ ಈ ವಿಷಯದಲ್ಲಿ ಹಿಂದೇಟು ಹೊಡೆದರೆ ಇದುವರೆಗೆ ಗಳಿಸಿದ ಕೀರ್ತಿ—ಧರ್ಮರಾಯರೆನ್ನುವ ಕೀರ್ತಿಗೆ ಇದು ಕಳಂಕವಲ್ಲದೆ ಮತ್ತೇನು? ತಾವು ಜಮೀನನ್ನು ಮಾರುವುದೇ ಸರಿ ಎಂದು ಜಮೀನ ವ್ಯಾಪಾರ ಹುಟ್ಟಿಸಿದರು. ಇಲ್ಲಿಗೆ ಮಗ ತಂದೆಯನ್ನು ತಡೆಯಲು ನಿಶ್ಯಕ್ತನಾದ. ಆದರೂ ಅವನ ಹೃದಯದ ತುಂಬಾ ಅಸಮಾಧಾನ. ಭಾಗೀರಥಮ್ಮನಂತೂ "ಎಲ್ಲ ಮನೆ ಹಿಡಿದ ಈ ಮೂದೇವಿಯಿಂದ" ಎಂದು ಶಾರದೆಯ ಎದುರಿಗೇ ನೆಟಿಕೆ ಮುರಿದರು. ಹಣ ಕೊಡುವ ವಿಷಯದಲ್ಲಿ ಮನೆ

ಯಲ್ಲಿ ಒಮ್ಮತವಿಲ್ಲದುದನ್ನು ಕಂಡು ಶಾರದೆ ಶ್ಯಾಮಣ್ಣನವರು ಒಬ್ಬರೇ ಇದ್ದಾಗ ಅವರಿಗೆ ಹೀಗೆಂದಳು

"ಚಿಕ್ಕಪ್ಪನ ಮನೆಯವರಿಗೆ ಇಷ್ಟವಿಲ್ಲವ ಕೆಲಸವನ್ನು ನನಗಾಗಿ ನೀವೇಕೆ ಮಾಡಬೇಕು ? ಇದು ನಾನು ಕೇಳಿಕೊಂಡು ಬಂದಿರುವ ಪುಣ್ಯ ಎಂದು ಕೊಂಡು ಇಲ್ಲೇ ಬಿದ್ದಿರುತ್ತೇನೆ. ಅಲ್ಲಿ ದುಡಿಯುವುದನ್ನು ಇಲ್ಲಿ ದುಡಿದು ಕೊಂಡು ಗಂಡಾಗಿ ಇಲ್ಲೇ ಇರುತ್ತೇನೆ. ಇಷ್ಟೆಲ್ಲಾ ಪಾಡು ಬಿದ್ದು ಹಣತೆತ್ತು ಒಲ್ಲದ ಅವರಿಗೆ ನಾನೇಕೆ ತಲೆಮೂಟೆಯಾಗಲಿ ? "

" ಏನಮ್ಮ ನಿನ್ನ ಮಾತು ? "

" ಹೌದು ಚಿಕ್ಕಪ್ಪ—ಪಾಪ ಅವರು ಅಲ್ಲಿ ಯಾರೊಂದಿಗೋ ನೆಮ್ಮದಿ ಯಾಗಿ ಇರುವಾಗ ಭೇತಾಳನಂತೆ ನಾನು ಅಲ್ಲಿಗೆ ಬೆನತ್ತಿ ಹೋಗಿ ಅವರನ್ನೇಕೆ ಪೀಡಿಸಲಿ ? "

" ನೀನು ಪೀಡಿಸುವುದೇನಮ್ಮ ಬಂತು. ಇದುವರೆಗೂ ಅವನು ನಿನ್ನ ಪೀಡಿಸಿದ್ದು ಸಾಲದೇ. ಶುದ್ಧ ಪೆದ್ದು ಹುಡುಗಿ ಕಾಣೆ ನೀನು. ನೀನು ಹೀಗೆ ಅಂದುಕೊಂಡು ಸನ್ಯಾಸಿನಿ ಆಗಿದ್ರಿಂದಲೇ ಅವನು ಅಲ್ಲಿ ನಿನ್ನನ್ನು ಮರೆತು ಬಿಟ್ಟಿದ್ದು." ಎಂದು ಮಗಳ ತಲೆ ನೇವರಿಸಿದರು ಶಾಮಣ್ಣ.

" ಹಾಗಾದ್ರೆ ನಂದೊಂದು ಮಾತಿದೆ ನಡೆಸಿಕೊಡ್ತೀರಾ ? "

ಶಾಮಣ್ಣನವರು ಏನೆಂದು ಕೇಳಿದರು.

" ನೋಡಿ, ಮದುವೇಲಿ ನನಗೆ ಚಿನ್ನದ ಸರ ಕೈಬಳೆ ಹೇಗೂ ಮಾಡಿ ಸಿದ್ದೀರಿ. ಅದನ್ನು ನಾನು ಪೆಟ್ಟಿಗೇಲೇ ಹಾಕಿದ್ದೇನೆ. ಭೂಮಿ ಕಾಣೆ ಮಾರೋ ಬದಲು ಅವುಗಳನ್ನು ಮಾರಿದರೆ ಯಾರ ಮನಸ್ಸಿಗೂ ನೋವಿಲ್ಲ. "

" ಏನು ನಿನ್ನ ಮಾತು ? ನಿನ್ನ ಸರ ಮಾರಿ ಹಣ ತರಬೇಕೇ ? ಚೆನ್ನಾಯಿತು. ಈ ಮಾತು ನಿನ್ನ ಬಾಯಲ್ಲಿ ಬರಬಾರದಮ್ಮ. ನಾವು ನಿನ್ನ ತಂದೆಯ ಋಣ ತಿನ್ನುತ್ತಿದ್ದೇವೆ. ಈಗ ನಾಲ್ಕು ಕಾಸು ಬೇಕಾದಾಗ ನಾವು ಹೆಣ್ಣುಮಗಳಿಗೆ ಕೈಯಾರೆ ಮಾಡಿಸಿದ ಚಿನ್ನದ ಸರ ಮಾರಬೇಕೆ ? ನೀನು ಅನ್ಯಥಾ ಭಾವಿಸಬೇಡ ಮಗು. ನೀನು ಬೇರೆಯಲ್ಲ. ನಮ್ಮ ಶ್ಯಾಮಲೆ ಬೇರೆ ಯಲ್ಲ. ಇಂಥ ಮಾತನ್ನು ನೀನು ಇನ್ನುಮೇಲೆ ಆಡಬಾರ್ದು ! "

ಶ್ಯಾಮಣ್ಣನ ಕಣ್ಣಿನಲ್ಲಿ ನೀರು ಬಂತು. ತಮ್ಮ ಮಗ ಹೆಂಡತಿಯ

ವರ್ತನೆಯಿಂದ ಶಾರದೆ ಎಷ್ಟು ನೊಂದುಕೊಂಡಿರುವಳೆಂದು ಶಾರದೆಯ ಮಾತಿನಿಂದಲೇ ಅವರಿಗೆ ವೇದ್ಯವಾಯಿತು. ಶಾರದೆಯ ಉದಾರತನ ತಮ್ಮ ಹೆಂಡತಿ ಮಗನಿಗೆ ಇಲ್ಲವಾಯಿತೇ ಎಂದು ಮನದಲ್ಲೇ ಮರುಗಿ, ಶಾರದೆಯನ್ನು ಹೊಗಳಿದರು.

ಶಾಸ್ತ್ರಿಗಳು ಶ್ಯಾಮಣ್ಣನವರು ಹಣ ಕೊಡಲು ಸಿದ್ಧರಿರುವ ಸಂಗತಿಯನ್ನು ಹೊತ್ತು ಬೆಂಗಳೂರಿಗೆ ನಡೆದರು. ಅವರ ಬರವಿಗಾಗಿ ರಾಮಚಂದ್ರ ಬಕಪಕ್ಷಿಯಂತೆ ಕಾದಿದ್ದ. ಆದರೆ ರಾಮಚಂದ್ರ ಸಾವಿರ ಕೇಳಿದ್ದಕ್ಕೆ ಶ್ಯಾಮಣ್ಣನವರು ಐನೂರು ಕೊಡಲು ಒಪ್ಪಿದ್ದರು. ತನ್ನ ತುರುತಿಗೆ ಅಷ್ಟು ಹಣ ದೊರೆತದ್ದು ತನ್ನ ಪುಣ್ಯ ಎಂದುಕೊಂಡ. ಆಕ್ಷಣ ಅವನ ಮನಸ್ಸು ಮೋಹಿನಿಯನ್ನು ಮರೆತು ಶಾರದೆಯನ್ನು ನೆನೆಯಿತು. ಶಾಸ್ತ್ರಿಗಳು ಬೆಂಗಳೂರಿಗೆ ಬಂದುಹೋದ ಲಾಗಾಯ್ತು ಮೋಹಿನಿಗೂ ಅವನಿಗೂ ಅಷ್ಟಕ್ಕೆ ಅಷ್ಟೇ........ಏನೋ ವೈಮನಸ್ಯ ತಲೆ ಹಾಕಿತ್ತು. ರಾಮಚಂದ್ರ ಹೊಸ ಹುರುಪಿನಲ್ಲಿದ್ದ. ಹೊಸ ಹೂ ಸಿಕ್ಕಿದಾಗ ಹಳೆಯ ಹೂವನ್ನು ಹೇಗೆ ದುಂಬಿ ದುರ್ಲಕ್ಷಿಸುವುದೋ ಹಾಗೆ ಬರಲಿದ್ದ ಹೊಸ ಸುಖ ಹಳೆಯ ಸುಖವನ್ನು ಮರೆಸಿತ್ತು. ರಾಮಚಂದ್ರ ಶಾರದೆಯ ಅಸ್ಖಲಿತ ಯೌವ್ವನ ಸುಧೆಯಲ್ಲಿ ಮುಳುಗಿ ಬೀಳಲು ಕಾತರನಾಗಿದ್ದ. ಅವನ ಭಾಗಕ್ಕೆ ಆಗ ಮೋಹಿನಿ ರೊಚ್ಚಿನ ಹೊಂಡವಾಗಿದ್ದಳು.

೫

ಅಂತೂ ಇಂತೂ ಶಾರದೆ ನಾಲ್ಕು ವರ್ಷಗಳ ವನವಾಸ ಕಳೆದು ಪತಿಗೃಹವನ್ನು ಸೇರಿದಳು. ಹಳ್ಳಿಯಲ್ಲಿ ಈಗೆಲ್ಲರಿಗೂ ಕಣ್ಣುತುಂಬಾ ನಿದ್ರೆ. ಆದರೂ ಶಾರದೆ ತವರು ಬಿಟ್ಟು ಗಂಡನ ಮನೆಗೆ ಸೇರಿದ ಕೆಲವು ದಿನ ಮನೆ ಭಣಭಣಗುಟ್ಟದೆ ಇರಲಿಲ್ಲ. ಯಾರಿಗೂ ಏನು ಕೆಲಸ ಮಾಡಲೂ ತೋಚದು. ಸಣ್ಣ ಪುಟ್ಟ ಕೆಲಸಗಳನ್ನೆಲ್ಲಾ ನಿಮಿಷಾರ್ಧದಲ್ಲಿ ಮಾಡಿ ಮುಗಿಸುತ್ತಿದ್ದ ನಗುಮುಖದ ಶಾರದೆ ಮನೆಯನ್ನು ಬಿಟ್ಟು ಹೊರಟ ಮೇಲೆ ಮನೆಯಲ್ಲಿ ಹಾಳು ಹಾಳು ಸುರಿಯಿತು. ಭಾಗೀರಥಮ್ಮ ಕಾವೇರಮ್ಮನವರಿಗೆ ಶಾರದೆ ಇದ್ದಾಗ

ಬೆಳಗಾಗೇಳುತ್ತಲೇ ನಿಗಿನಿಗಿ ಹೊಳೆಯುವ ಪಾತ್ರೆಯಲ್ಲಿ ಎಲ್ಲರಿಗೂ ಕಾಫಿ ಸಿದ್ಧವಾಗುತ್ತಿತ್ತು.. ಈಗ ಒಲೆ ಹೊತ್ತಿಸುವವರೇ ದಿಕ್ಕಿಲ್ಲ. ಉಪ್ಪುಗಾರಣೆ ಕಾವೇರಮ್ಮನಿಗೆ ಪುರುಸೊತ್ತು ಸಿಕ್ಕಿದಾಗ ಇಲ್ಲವೇ ಭಾಗೀರಥಮ್ಮನಿಗೆ ಮನಸ್ಸು ಬಂದಾಗ. ಶ್ಯಾಮಣ್ಣನವರು ಸಾಮಾನ್ಯವಾಗಿ ಹಳ್ಳಿಗೆ ಹೋಗುವಾಗ ಸಿಗುತ್ತಿದ್ದ ತಿಂಡಿಗೆ ಈಗ ಸೊನ್ನೆಯೇ ಆಗಿತ್ತು. ನರಸಿಂಹಮೂರ್ತಿ ಶ್ಯಾಮಣ್ಣನವರ ಬಟ್ಟೆ ಬರೆಗಳು ಬಿದ್ದಲ್ಲಿಯೇ ಕೊಳೆಯಲಾರಂಭಿಸಿತ್ತು. ಹಿತ್ತಲಿನಲ್ಲಿ ಬಿರಿದು ನಿಂತ ಮಲ್ಲಿಗೆ ಹೂ ಇದ್ದಲ್ಲಿಯೇ ಬಾಡಿ ಒಣಗಿತ್ತು. ತರಕಾರಿ ತೋಟಕ್ಕೆ ನೀರುಸೇದಿ ಹಾಕುವವರು ದಿಕ್ಕಿಲ್ಲದೆ ಗಿಡಗಳು ಒಣಗಿದವು. ಅಲ್ಲದೆ ದನಕರುಗಳ ಪಾಲಾದವು. ಹೋರಿಗರು 'ರಾಮು' ಶಾರದೆ ಹೋದ ತಿಂಗಳಿಗೇ ಬಡಕಲಾದ. ಮನೆಯಲ್ಲಿ ಎಲ್ಲಿ ನೋಡಿದರೂ ಶುಭ್ರತೆ ಅಚ್ಚುಕಟ್ಟು ಇದ್ದುದು ಈಗ ಧೂಳು ಕೊಳೆಗಳಿಂದ ತುಂಬಿತ್ತು. ಹೀಗಾಗಿ ಎಲ್ಲರಿಗೂ ಎಲ್ಲ ವಿಷಯಕ್ಕೂ ಶಾರದೆಯ ನೆನಪು ಬಾರಿ ಬಾರಿಗೆ ಬರುತ್ತಿತ್ತು.

ಒಂದು ದಿನ ಊಟಮಾಡುತ್ತಿದ್ದ ಶ್ಯಾಮಣ್ಣನವರನ್ನು ಕುರಿತು ಭಾಗೀರಥಮ್ಮ " ಯಾಕೋ ಶಾರದೆಯಿಲ್ಲದೆ ಮನೆಗೆ ಮಂಕು ಮುಚ್ಚಿಕೊಂಡಿದೆ " ಎಂದರು.

" ಹ್ಞೂಂ. ಹೌದು. ಅವಳು ಎಲ್ಲಕ್ಕೂ ತಾನು ಮುಂದು ಅಂತ ಬರುತ್ತಿದ್ದಳು. ಈಗ ಮನೆ ಬಿಕೋ ಎಂತ ಅನಿಸುತ್ತೆ. ಹೋದಷ್ಟು ದಿನವೂ ನಮ್ಮ ಮನೆಯಲ್ಲಿ ದುಡಿಯೋಕೆ ಆವಳು ನಮಗೆ ಹೊಣೆಯೇ. ಸೇರಬೇಕಾದ ಮನೆ ಸೇರಿಕೊಂಡಳು" ಎಂದರು ಶ್ಯಾಮಣ್ಣ ಎತ್ತಿದ ತುತ್ತನ್ನು ಕೆಳಗಿಳಿಸಿ.

" ನಾನು ಅದಕ್ಕಲ್ಲ ಅಂದದ್ದು. ಅವಳು ಎಲ್ಲಾದರೂ ಸುಖವಾಗಿರಲಿ ನಮ್ಮ ಹೊಟ್ಟೆಯಲ್ಲಿ ಹುಟ್ಟಿದ್ದಕ್ಕೆ. ಅವಳು ಇದ್ದಾಗ ಮನೆಗೆಲಸ ಇಷ್ಟಿತ್ತು ಅಂತ ಗೊತ್ತಿರಲಿಲ್ಲ. ಈಗ ಯಾವ ಕೆಲಸ ಮಾಡೋಕೂ ದಿಕ್ಕು ತೋಚದು!"

" ಹಾಗಾದರೆ ನಾಳೆ ನಿನ್ನ ಮಗನ್ನ ಮದುವೆಗೆ ಕುದುರಿಸು. ನಾಳಿದ್ದೇ ದುಡಿಯಲು ಸೊಸೆ ಮನೆಗೆ ಬರುತ್ತಾಳೆ. ನಿನಗೆ ಆಗ ' ರಿಟೈರ್‌ಮೆಂಟ್' " ಎಂದು ನಗೆ ಯಾಡಿದರು ಶ್ಯಾಮಣ್ಣ.

ಎಲ್ಲರ ಆಶಯದಂತೆ ಶಾರದೆ ಈಗ ಸುಖಿ. ಅವಳು ಸೇರಬೇಕಾಗಿದ್ದ ಮನೆ ಸೇರಿದ್ದಳು. ರಾಮಚಂದ್ರ ಕೇವಲ ತಿಂಗಳಹಿಂದೆ ತನಗೂ ಶಾರದೆಗೂ

ನಡುವೆ ದೊಡ್ಡ ಕಂದಕವಿತ್ತೆಂಬುದನ್ನು ಪೂರ್ಣಮರೆತು ಶಾರದೆಯನ್ನು ತುಂಬಾ
ಪ್ರೀತಿಯಿಂದ ಕಾಣತೊಡಗಿದ. ಇಂತಹ ಹುಡುಗಿಯನ್ನು ತಾನು ಆಸಕ್ತಿ
ಯಿಂದ ಕಂಡು, ಒಂದಲ್ಲ-ಎರಡಲ್ಲ, ನಾಲ್ಕು ವರ್ಷಗಳ ಕಾಲ ಕೊರಗಿಸಿದೆ
ನಲ್ಲಾ ಎಂದು ಅವನಿಗೆ ಪಶ್ಚಾತ್ತಾಪ. ತಾನು ಈ ಮೊದಲೇ ಹೀಗೆ ಏಕೆ
ಉದಾರವಾಗಿ ವರ್ತಿಸದೆ ಹೋದೆ ಎಂಬುದೇ ಅವನಿಗೆ ಆಶ್ಚರ್ಯ. ಎಲ್ಲೋ
ತಮ್ಮಿಬ್ಬರ ಗ್ರಹಚಾರ ಸರಿಯಿರಲಿಲ್ಲವೆಂಬುದು ಒಂದು ಕುಂಟು ಸಮಾಧಾನ.
ಇದಕ್ಕೆ ತಕ್ಕಂತೆ ಶಾರದೆ ಬೇರೆ ಹೇಳಿದ್ದಳು. ತನಗೆ ಇಲ್ಲಿಯ ತನಕ ಏಳ
ರಾಟದ ಶನಿಯ ಕಾಟವಿತ್ತು ಅಂತ. ಎಲ್ಲ ಅನಾಹುತಗಳಿಗೆ ಶನಿಮಹಾರಾಯ
ನಲ್ಲದೆ ಬೇರಾರೂ ಕಾರಣಕರ್ತರಲ್ಲವೆಂದು ಅವಳು ಸಾವಿರ ಬಾರಿ ಅಂದಿ
ದ್ದಳು. ಇದರಿಂದ ರಾಮಚಂದ್ರನಿಗೆ ಎಷ್ಟೋ ಸಮಾಧಾನ. ಆ ಮೊದಲ
ರಾತ್ರೆ. ನಾಲ್ಕುವರ್ಷಗಳ ಕಾಲ ವಿರಹ ಯಾತನೆಯನ್ನು ಅನುಭವಿಸಿದ್ದ ಶಾರದೆ
ಗಂಡನನ್ನು ಕೂಡಿದ ಆ ಮಧುರರಾತ್ರೆ ಶಾರದೆ ತನ್ನದೆನ್ನುವ ಎಲ್ಲವನ್ನೂ
ರಾಮಚಂದ್ರಾರ್ಪಣ ಮಾಡಿದ್ದಳು. ಇನ್ನೆಂದೂ ಮತ್ತೊಬ್ಬ ಹೆಣ್ಣಿಗೆ ಬಾಯಿ
ಬಿಡದಂತೆ ತನ್ನದೇಹದಿಂದ ಎಷ್ಟು ಸುಖಕೊಡಬಹುದೋ ಅಷ್ಟು ಸುಖ ರಾಮ
ಚಂದ್ರನಿಗೆ ಕೊಟ್ಟಳು. ಆ ದಿನ ಇಬ್ಬರ ಜೀವನದಲ್ಲೂ ಅತಿ ಮಹತ್ವದ ದಿನ.
ಎರಡು ದೇಹಗಳ ಮಿಲನದಲ್ಲಿ, ಎರಡು ಆತ್ಮಗಳ ಮಿಲನ. ಇಬ್ಬರ ಹೃದಯ
ಗಳೂ ಕುಂದುಕಾಣದ ಆನಂದ ಸಾಮ್ರಾಜ್ಯದಲ್ಲಿ ಸ್ವಚ್ಛಂದವಾಗಿ ವಿಹರಿಸಿ
ದುವು. ರಾಮಚಂದ್ರ ಸ್ತ್ರೀ ಸಾನಿಧ್ಯಸುಖವನ್ನು ಈ ಮೊದಲೇ ಎಷ್ಟೋ
ಬಾರಿ ಅನುಭವಿಸಿದ್ದ. ಆದರೆ ಶಾರದೆಯ ಸಾನಿಧ್ಯಸುಖದ ಸವಿಯೇ ಬೇರೆ.
ಮಾಧುರ್ಯವೇ ಬೇರೆ. ಇದು ವರೆಗೆ ಅವನು ಪಡೆದಿದ್ದ ಸುಖ ಇಂದ್ರಿಯ
ವನ್ನು ತೃಪ್ತಿಗೊಳಿಸಿತ್ತು. ಇಂದು ಅವನ ಹೃದಯ ತಣಿದಿತ್ತು. ಈ ಇಂದ್ರಿಯಾ
ತೀತ ಸುಖ ಪರಮಾತ್ಮನಿಗೂ ಪ್ರಿಯವಾಯಿತು. ಶಾರದೆ ರಾಮಚಂದ್ರನ
ಕಣ್ಣಿನಲ್ಲಿ ಹೆಣ್ಣಾಗಿ ಕಾಣದೆ ಪ್ರೇಮಮೂರ್ತಿಯಾಗಿ ಕಂಡಳು. ಇಂತಹ
ಪ್ರೇಮಮೂರ್ತಿ ತನ್ನವಳಾದ ಹಿಗ್ಗು ಅವನಿಗೆ. ಹಿಗ್ಗಿನ ಜೊತೆಗೇ ಭಯ!
ಅವನ ಭಯಕ್ಕೆ ಶಾರದೆಯ ಪ್ರೇಮಾಮೃತ ಪಾನಕ್ಕೆ ತಾನು ಅರ್ಹನಲ್ಲವೆನ್ನು
ವುದು. ಶಾರದೆಯ ನಿರ್ಮಲ ಪವಿತ್ರ ದೇಹವನ್ನು ಸೋಂಕಲು ಪಾಪಜೀವನ
ನಡೆಸಿದ ರಾಮಚಂದ್ರನಿಗೆ ಅಳುಕು. ಆ ಪ್ರೇಮಪುತ್ಥಳಿಯನ್ನು ಮುಟ್ಟುವು

ದೆಂದರೆ ಅವಳನ್ನು ಅಪವಿತ್ರಗೊಳಿಸಿದಂತೆ ಅವನ ಭಾವನೆ ಹೀಗಾಗಿ ಶಾರದೆಯನ್ನು ಅವನು ಪ್ರೀತಿಸಿದರೂ, ಶಾರದೆಯಿಂದ ದೂರವಿರಲು ಮನ ಬಯಸುತ್ತಿತ್ತು. ಆದರೆ ಶಾರದೆ ರಾಮಚಂದ್ರನ ಹಿಂದಿನ ನಡತೆಯನ್ನು ಕ್ಷಮಿಸಿದುದು ಮಾತ್ರವಲ್ಲ ಸಂಪೂರ್ಣ ಮರೆತು ಬಿಟ್ಟಿದ್ದಳು. ಅವಳು ಅವನ ಅನಂತ ಅಪರಾಧವನ್ನು ಮನ್ನಿಸಿ ಅವನಿಗೆ ಆತ್ಮಾರ್ಪಣಮಾಡಿಕೊಂಡಿದ್ದಳು. ರಾಮಚಂದ್ರ ಪಾಪಭೀರುವಾಗಿ ದೂರಸರಿದಷ್ಟೂ ಅವನ ಹತ್ತಿರ ಸರಿಯುವಳು ಶಾರದೆ. ಹೀಗಾಗಿ ಅಂತರಂಗ ಜೀವನದಲ್ಲಿ ರಾಮಚಂದ್ರನಿಗೆ ಶಾರದೆಯೊಂದಿಗೆ ಸಲಿಗೆಯಿಂದ ಇರಲು ಆಗಲೇ ಇಲ್ಲ. ಆದರೆ ಅದರ ಬಹಿರಂಗ ಜೀವನ ಕಥೆ ಬೇರೆ.

ರಾಮಚಂದ್ರ ಮಲ್ಲೇಶ್ವರದ ಬೇವಿನ ಮರದ ರಸ್ತೆಯಲ್ಲಿ ಒಂದು ಸಣ್ಣ ಮನೆಯನ್ನು ಮಾಡಿದ್ದ. ಸಾಲತೀರಿಸಿ ಉಳಿದ ಹಣದಲ್ಲಿ ಮನೆಗೆ ಬೇಕಾಗುವ ಮೇಜು ಕುರ್ಚಿ, ಪಾತ್ರೆಸಾಮಾನುಗಳನ್ನು ಕೊಂಡುತಂದ. ಹೊಸ ಸಂಸಾರ ಹೂಡಿದ ತರುಣದಲ್ಲಿ ರಾಮಚಂದ್ರ ಹೆಂಡತಿಯ ಜೊತೆಯಲ್ಲಿ ಬೆಂಗಳೂರಿನ ಅಂಗಡಿ ಬೀದಿಗಳನ್ನೂ ಕಬ್ಬನ್‌ಪಾರ್ಕ್, ಲಾಲಾಬಾಗ್, ಹೋಟೆಲು ಸಿನಿಮಾ ಎಂದು ತಿರುಗಿಸಿದ. ಹೆಂಡತಿಯ ಆನಂದದಲ್ಲಿ ತಾನೂ ಆನಂದಿಸಿದ. ಇವರ ಅನ್ಯೋನ್ಯವನ್ನು ಕಂಡು ಅಕ್ಕಪಕ್ಕದ ಮನೆಯವರು ಹೊಟ್ಟೆಕಿಚ್ಚುಪಡುವಂತಾಯಿತು. ತಾನು ಅನೇಕ ವರ್ಷಗಳ ವಿರಹದಲ್ಲಿ ಇದ್ದರೂ ಈ ಸ್ವರ್ಗಸುಖ ತನ್ನದಾಯಿತೆಂದು ಶಾರದೆಗೆ ತುಂಬಾ ತೃಪ್ತಿ. ತನ್ನ ನೆಮ್ಮದಿಯನ್ನು ತಿಳಿಸಿ, ತಾಯಿಗೂ, ಶ್ಯಾಮಲೆಗೂ ಮೇಲಿಂದ ಮೇಲೆ ಉದ್ದುದ್ದ ಪತ್ರಗಳನ್ನುಬರೆದಳು ರಾಮಚಂದ್ರನಿಗೂ ಈಗ ಶುಕ್ರದೆಸೆ ಆರಂಭವಾಗಿತ್ತು. ಇದುವರೆಗೂ ಅವನಿದ್ದ ಕಂಪೆನಿಯಲ್ಲಿ, ನೂರಾರು ಗುಮಾಸ್ತರಲ್ಲಿ ರಾಮಚಂದ್ರನೂ ಒಬ್ಬ ಗುಮಾಸ್ತನಾಗಿದ್ದ. ಶಾರದೆ ಹೊಸಲು ತುಳಿದ ವರ್ಷವೇ ಅವನಿಗೆ ಪ್ರಮೋರ್ಷಸಿಕ್ಕಿತು. ಸಂಬಳ ಸಾರಿಗೆ ಹೆಚ್ಚಾಯಿತು. ಇವೆಲ್ಲಕ್ಕೂ ಶಾರದೆಯೇ ಕಾರಣಳೆಂದು ಮತ್ತಷ್ಟು ಹಚ್ಚಿಕೊಂಡ.

ಹೀಗೆ ಹತ್ತೆಂಟು ತಿಂಗಳು ಕಳೆಯಿತು.

ಒಂದು ದಿನ ತವರಿನಿಂದ ಮಗಳು ಅಳಿಯನಿಗೆ ಊರಿಗೆ ಬರಲು ಆಹ್ವಾನ ಬಂತು. ಶ್ಯಾಮಣ್ಣನವರ ಮಗ ನರಸಿಂಹಮೂರ್ತಿಗೆ ಲಗ್ನ ನಿಶ್ಚಯವಾಗಿತ್ತು. ಅವರ ಬಳಗದ್ದೇ ಹೆಣ್ಣು. ಮದುವೆಗೆ ಶ್ಯಾಮಲೆ, ಶ್ಯಾಮಲೆಯ

ಗಂಡ, ಎಲ್ಲರೂ ಬಂದಿದ್ದರು. ಹಾಗೆಯೇ ಶಾರದೆ, ರಾಮಚಂದ್ರ ತಪ್ಪದೇ ಬರಬೇಕೆಂದು ಶ್ಯಾಮಣ್ಣನವರು ಆಶಿಸಿದ್ದರು.

ಈಗ ಕಂಪನಿಯ ಲೆಖ್ಖಪತ್ರಗಳ ತನಿಖೆಯಕಾಲವಾದುದರಿಂದ ರಾಮಚಂದ್ರನಿಗೆ ಹೆಚ್ಚುದಿನ ರಜಸಿಗಲಿಲ್ಲ. ತಾನು ಲಗ್ನದ ಹೊತ್ತಿಗೆ ಬರುವುದಾಗಿ ತಿಳಿಸಿ, ಶಾರದೆಯನ್ನು ನಾಲ್ಕು ದಿನ ಮುಂಚಿತವಾಗಿಯೇ ಕೊರಟಿಗೆ ಕಳುಹಿಸಿಕೊಟ್ಟ.

ರಾಮಚಂದ್ರ ಹೇಳಿದ್ದಂತೆ ಮದುವೆಯ ವೇಳೆಗೆ ತಪ್ಪದೇ ಬಂದ. ಬರುವಾಗ ಹುಡುಗಿಗೆ ಒಂದು ಮೈಸೂರು ಸಿಲ್ಕ್ ಸೀರೆ. ಹುಡುಗನಿಗೆ ಒಂದು ಒಳ್ಳೆಯ "ಪೌಂಟನ್" ಕೊಂಡುತಂದಿದ್ದ. ರಾಮಚಂದ್ರನ ಔದಾರ್ಯ, ಅವನು ಎಲ್ಲರೊಡನೆ ನಡೆದುಕೊಳ್ಳುವರೀತಿಯನ್ನು ಕಂಡು ಮನೆಯವರೆಲ್ಲರೂ ಸಂತೋಷ ಪಟ್ಟರು. ರಾಮಚಂದ್ರನ ಈಗಿನ ಸೌಜನ್ಯ, ಆದರ, ಅವನ ಹಿಂದಿನ ದೋಷಗಳೆಲ್ಲವನ್ನೂ ಮರೆಸಿತ್ತು.

"ಶಾರದೆಯ ಪುಣ್ಯದೊಡ್ಡದು, ಹುಡುಗ ಬುದ್ಧಿವಂತನಾದ" ಎಂದುಕೊಂಡರು ಹಿರಿಯರು.

ಮದುವೆಯಾದ ಮೂರನೆಯ ದಿನವೇ ರಾಮಚಂದ್ರ ಬೆಂಗಳೂರಿಗೆ ಹಿಂದಿರುಗಿದ. ಹೋಗುವಾಗ ಹೆಂಡತಿಯನ್ನು ಬೇಗನೆ ಹೊರಟುಬರಲು ಹೇಳುವುದನ್ನು ಮರೆಯಲಿಲ್ಲ. ಅಷ್ಟು ಸಾಲದೆಂಬಂತೆ ಊರು ತಲುಪಿದ ದಿನವೇ ಕಾಗದ ಬರೆದ "ನನಗಿಲ್ಲಿ ಊಟತಿಂಡಿಗೆ ತುಂಬಾ ಅನಾನುಕೂಲವಾಗಿದೆ. ತಡಮಾಡದೆ ಹೊರಟು ಬರುವುದು."

ಆ ಕಾಗದ ಬಂದಾಗ ಹೆಂಗಸರೆಲ್ಲಾ ಗುಂಪುಕಟ್ಟಿಕೊಂಡು ಯಾವುದೋ ಕಾಡು ಹರಟೆಯಲ್ಲಿ ಮಗ್ನರಾಗಿದ್ದರು.

"ಇದೇನೇ ಶಾರದ, ಬಂದು ಮೂರು ದಿನವಾಗಲಿಲ್ಲ—ಆಗಲೇ ಹೊರಟು ಬಾ ಅಂತ ಕಾಗದ ಬರೆದಿದ್ದಾನೆ ನಿನ್ನ ಗಂಡ. ಅದೆಂತಹ ಮಂಕುಬೂದಿ ಹಾಕಿದ್ದೀಯೇ ನೀನು. ನಮಗೂ ಕೊಂಚ ಹೇಳಿಕೊಡೆ" ಎಂದಳು ಶ್ಯಾಮಲೆ ಶಾರದೆಯ ಕಾಗದ ಓದಿಮುಗಿಸಿ.

"ಇಲ್ಲಮ್ಮ ಈಗ ಅವರಿಗೆ 'ಆಡಿಟ್' ಗಲಾಟೆ. ಅಡಿಗೆ ಊಟಕ್ಕೆ ಪುರುಸೊತ್ತು ಇಲ್ಲ ಅಂತ ಹಾಗೆ ಬರೆದಿದ್ದಾರೆ."

" ಆಫೀಸಿನಲ್ಲಿ ಆಡಿಟ್ ಆದರೆ ಹೋಟೆಲಿನಲ್ಲಿ ಊಟ ಕತ್ತರಿಸಬಹುದಲ್ಲ! ಹೇಗೂ ಹೋಟೆಲೂಟ ಉಂಡು ಅವರಿಗೆ ರೂಢಿಯಿದೆಯಲ್ಲಾ.........ಆದ್ರೆ ಆ ರಾಯರಿಗೆ ಶಾರದೆ ಮುಂದೆ ಕೂತು, ಅನ್ನ ಕಲಿಸಿ, ತುತ್ತು ಬಾಯಿಗೆ ಇಡದ ಹೊರತು ಊಟವೆಲ್ಲಿ ಸೇರುತ್ತೆ ? " ಎಂದಳು ಶ್ಯಾಮಲೆ ನಗುತ್ತಾ.

ಉಳಿದವರೂ ಖೊಳ್ ಎಂದು ನಕ್ಕರು.

" ಹೌದು. ಹೌದು ನೀನು ನಿನ್ನ ಗಂಡನಿಗೆ ಉಣಿಸುವುದು ಹಾಗೇಂತ ಕಾಣುತ್ತೆ. ಅದಕ್ಕೇ ನನ್ನ ಮೇಲಿಟ್ಟು ಹೇಳ್ತಿದ್ದಿ. ನೋಡಿದೋರು ಏನಾದ್ರೂ ತಿಳಿದುಕೊಳ್ತಾರೆ ಅಂತ. "

ಶಾರದೆ ಅಸ್ತ್ರಕ್ಕೆ ಪ್ರತ್ಯಸ್ತ್ರ ಎಸೆದಳು.

" ಪಾಪ ಇನ್ನೂ ಹೊಸ ಸಂಸಾರ. ಮೊನ್ನೆ ತಾನೇ ಹೆಂಡತಿ ಮನೆಗೆ ಬಂದಿದ್ದಾಳೆ. ಗಂಡ ಅಷ್ಟು ಹಚ್ಚಿಕೊಳ್ಳದೆ ಹೋದ್ರೆ ಹೇಗ್ರಿ ? " ಎಂದಳು ಒಬ್ಬ ಮುಪ್ಪಿನ ಮುತ್ತೈದೆ.

" ಹೌದು, ಹೌದು ಹೊಸದರಲ್ಲಿ ಎಲ್ಲರೂ ಹೀಗೇನೆ.... ಹೆಂಡತಿ ಅಂದ್ರೆ ತಲೆ ಮೇಲೇನೆ ಕೂಡಿಸಿಕೊಳ್ತಾರೆ. ನಡೆದರೆ ಸವೆದು ಹೋಗ್ತಾಳೆ ಅಂತ ಗಾಬರಿ ಬೀಳ್ತಾರೆ. ಆದರೆ ಇದೆಲ್ಲ ನಾಲ್ಕು ದಿನದ ಕಥೆ. ಒಂದೆರಡು ಮಕ್ಕಳು ಮರಿ ಆಗೋತನಕ. ಆಮೇಲೆ ಗೊತ್ತೇ ಇದೆ. ಎಂದಿಗೆ ಪಾರಾದೇವಪ್ಪ. ಈ ಹಾಳು ಸಂಸಾರ ನರಕದಿಂದ ಅಂತ ಕಣ್ ಕಣ್ ಬಿಡೋದು. ಇವತ್ತೇನೊ ಹೆಂಡ್ತಿ ಹಾಕಿದ ಗೆರೆ ಗಂಡ ದಾಟೋಲ್ಲ. ನಾಳೆ ಬೆಳಗಾದ್ರೆ ಹೆಂಡ್ತಿದೊಂದು ದಾರಿ, ಗಂಡಂದೊಂದು ದಾರಿ. ಎತ್ತು ಏರಿಗೆಳೆದರೆ, ಕೋಣ ನೀರಿಗೆ ಎಳೆ ಯಿತೆನ್ನುವ ಸಮಾಚಾರ ! " ಎಂದಳು ಒಬ್ಬ ಪೂರ್ವಕಾಲದ ಪುಟ್ಟಕ್ಕ.

" ಎಲ್ಲರ ಸಂಸಾರಾನೂ ಹೀಗೇನೂ ಇರೋಲ್ಲ ! " ಎಂದಳು ಶಾರದೆ. ಪುಟ್ಟಕ್ಕ ತನ್ನನ್ನು ಗುರಿಯಲ್ಲಿರಿಸಿ ಮಾತನಾಡುವಳೆಂದು ಭಾವಿಸಿ.

" ಅಮ್ಮಯ್ಯ ನೀನಿನ್ನೂ ಎಳೇ ಹುಡುಗಿ. ಅನುಭವವಿಲ್ಲ. ಹೇಳ್ತೇನೆ ಕೇಳು. ನಾನು ಅನ್ನೋದು ಅಕ್ಷರಶಃ ನಿಜ. " ಎಲ್ಲರ ಮನೆ ದೋಸೇನೂ ತೂತೇ.... "

" ಎಂದಿಗೂ ಇಲ್ಲ. "

" ನಾಳೆ ನೀನೇ ನೋಡ್ತೀಯಲ್ಲ ! "

ಯಾಕೋ ತಮಾಷೆಗೆಂದು ಆರಂಭವಾದ ಹರಟೆ, ಗಹನತರವಾಗುತ್ತಾ ವಿರಸವಾಗುದನ್ನು ಕಂಡು, ಶ್ಯಾಮಲೆ ಬೇರೊಂದು ವಿಷಯ ತೆಗೆದಳು. ಶಾರದೆ ಮಾತ್ರ ಯಾವ ಮಾತುಕತೆಗಳಲ್ಲಿ ಭಾಗ ವಹಿಸದೆ ಕುಳಿತಳು. ಅವಳ ತಲೆಯಲ್ಲಿ ಆ ಮುದುಕಿ ಹೇಳಿದ ಮಾತು ಕೊರೆಯುತ್ತಲೇ ಇತ್ತು. "ಎಲ್ಲೋ ಆಕೆಯ ಮನೆಯ ಸಂಸಾರ ಹಾಗಿರಬಹುದು. ಅದಕ್ಕೇ ಆಕೆಯ ಬಾಯಲ್ಲಿ ಆ ಮಾತು" ಎಂದು ತನಗೆ ತಾನೇ ಸಮಾಧಾನಪಡಿಸಿಕೊಂಡಳು.

ಶಾರದೆ ಗಂಡನ ಕಾಗದದಂತೆ ಬೆಂಗಳೂರಿಗೆ ಹೊರಟೇ ಬಿಟ್ಟಳು. ಇನ್ನು ನಾಲ್ಕು ದಿವಸವಿದ್ದು ಹೋಗೆಂದು ಶ್ಯಾಮಣ್ಣನವರು ಎಷ್ಟು ಬಲವಂತ ಮಾಡಿದರೂ "ಮನೆಯ ಕಡೆ ಯಾರೂ ಇಲ್ಲ ಚಿಕ್ಕಪ್ಪ. ಈಬಾರಿ ಬಲವಂತ ಮಾಡಬೇಡಿ. ಮತ್ತೊಮ್ಮೆ ಬಂದು ಬೇಕಾದರೆ ಒಂದು ತಿಂಗಳು ಇರುತ್ತೇನೆ" ಎಂದು ನಯವಾಗಿ ಜಾರಿಕೊಂಡಳು.

ರಾಮಚಂದ್ರನಿಗೆ ತಾನೊಂದು ಮಾತು 'ಬಾ' ಎಂದು ಬರೆದೊಡನೆಯೆ ಮದುವೆ ಮನೆಯ ನೆಂಟರಿಷ್ಟರನ್ನೆಲ್ಲಾ ಬಿಟ್ಟು ಊರಿಗೆ ಹೊರಟು ಬಂದ ಶಾರದೆಯ ಪತಿನಿಷ್ಠೆಯನ್ನು ಕಂಡು ನಿಜವಾಗಿಯೂ ಸಂತೋಷವಾಯಿತು. ಅವನಿಗೆ ರೂಂನ ಬಿಡಾರ, ಹೋಟಿಲು ಮಾಣಿಯ ಕೈಯೂಟ, ಇವುಗಳು ರೂಢಿಯಿದ್ದರೂ ಹೆಂಡತಿ ಮನೆಗೆ ಬಂದ ಮೇಲೆ ಮೊದಲಿನ ಜೀವನ ಅವನಿಗೆ ಸೇರದಾಯ್ತು. ಬೆಳಗ್ಗಾಗೇಳುತ್ತಲೇ ಬಿಸಿ ನೀರು ಕಾಸಿ, ಸ್ನಾನಕ್ಕೆ ಅಣಿ ಮಾಡಿಕೊಟ್ಟು ನಗುನಗುತ್ತಾ ಕಾಫಿ ಲೋಟ ತರುವ ಹೆಂಡತಿ ಎಲ್ಲಿ? ಹೋಟಲು ಮಾಣಿ ಎಲ್ಲಿ? ಆಫೀಸಿನಿಂದ ಮನೆಗೆ ಬಂದ ಮೇಲೆ ಹೆಂಡತಿಯ ಮುಖ ಕಂಡೊಡನೆಯೇ ಕೆಲಸದ ಆಯಾಸ ಪರಿಹಾರವಾಗುವುದು. ಅವಳೊಡನೆ ನಾಲ್ಕು ಸವಿ ಮಾತು ಆಡಿದರೆ ಹೊಟ್ಟೆ ತುಂಬಿ ಹೋಗುವುದು. ಇಂತಹುದರಲ್ಲಿ ತಿಂಡಿಯೂ ಬೇಡ, ತೀರ್ಥವೂ ಬೇಡ. ಆದರೂ ಶಾರದೆ ಗಂಡ ಮನೆಗೆ ಬರುವ ವೇಳೆಗೆ, ಏನಾದರೂ ತಿಂಡಿ ಮಾಡಿ ಕಾಯುವಳು. ಅವಳೊಂದಿಗೆ ತಿಂಡಿಗೆ ಕೈ ಹಾಕಿದರೆ ತಿಂಡಿ ಅದೆಷ್ಟು ಸವಿ. ಈ ಸವಿಗಾಗಿಯೇ ಸದಾ ಶಾರದೆ ಅವನ ಕಣ್ಣುಮುಂದೆ ಇರಬೇಕು. ಅದಕ್ಕಾಗಿಯೇ ಶಾರದೆಯನ್ನು ಬೇಗನೇ ಬರಮಾಡಿಕೊಂಡಿದ್ದು.

ಒಂದು ದಿನ ರಾಮಚಂದ್ರ ಆಫೀಸಿನಿಂದ ಮನೆಗೆ ಬರುವ ವೇಳೆಗೆ

ಶಾರದೆ ತಲೆನೋವೆಂದು ಮಲಗಿದ್ದಳು. ರಾಮಚಂದ್ರನಿಗೆ ಫಲಾಹಾರ ಮಾಡಲು ಒಲೆಯ ಬಳಿಗೆ ಬರುವಾಗ ಯಾಕೋ ಅವಳಿಗೆ ತಲೆ ಸುತ್ತಿ ಬಂತು. ಒಂದೆರಡು ಬಾರಿ ವಾಂತಿಯೂ ಆಯಿತು. ಏನೋ ಊಟದ 'ದೋಷ' ಎಂದುಕೊಂಡು ತಿಂಡಿ ಮಾಡಲು ಕುಳಿತಳು. ತಲೆ ಸುತ್ತುವುದು ಹೆಚ್ಚಾಯಿತು. ಜತೆಗೆ ತಲೆನೋವೂ ಕಾಣಿಸಿಕೊಂಡಿತು. ಪಕ್ಕದ ಮನೆಯ ಸೀತಾಲಕ್ಷ್ಮಿಯಿಂದ ಔಷಧಿ ತಿಳಿದುಬರಲು ಹೋದಾಗ ಅವರು ನಗುತ್ತಾ ಹೇಳಿದರು.

"ನಿಮ್ಮ ತಲೆನೋವು ವಾಂತಿಗೆ ಔಷಧ ಪ್ರಯೋಜನವಿಲ್ಲ."

"ಯಾಕೆ" ಎಂದಳು ಶಾರದೆ.

"ನೀವು ಹೊರಗಾಗಿ ಎಷ್ಟು ತಿಂಗಳಾಯಿತು ಹೇಳಿ."

"ಮೂರು ತಿಂಗಳಾಯಿತು"

"ಇದೆಲ್ಲಾ ಅದರ ಲಕ್ಷಣವೇ. ಕೊಂಚ ಆರೋಗ್ಯವನ್ನು ಚೆನ್ನಾಗಿ ನೋಡಿಕೊಳ್ಳಿ" ಎಂದು ಎಚ್ಚರ ಕೊಟ್ಟರು.

ಈ ಮಾತು ಕೇಳಿ ಶಾರದೆಗೆ ಸಂತೋಷದಿಂದ ಕೂಗಬೇಕೆನ್ನಿಸಿತು. ಅವಳ ಹೃದಯದ ಬಹುಕಾಲದ ಬಯಕೆ ಕಡೆಗೂ ಈಡೇರಿತು, 'ಈ ದಿನದಿಂದ ತಾನೂ ಒಬ್ಬ ತಾಯಿ!' ಎಂದುಕೊಳ್ಳುತ್ತಾ ರೂಂಗೆ ಬಂದು ಯಾರೂ ಕಾಣದಂತೆ ಹೊಟ್ಟೆಯ ಮೇಲೆ ಕೈಯಿಟ್ಟುಕೊಂಡು ಹಿರಿಹಿರಿ ಹಿಗ್ಗಿದಳು.

ತಲೆನೋವು ಒಂದೇಸಮನೆ ಬಾಧಿಸುತ್ತಿತ್ತು. ಅದನ್ನು ಲೆಕ್ಕಿಸದೆ ಗಂಡನಿಗೆ ತಿಂಡಿ ಮಾಡಿಟ್ಟು ಮಂಚದ ಮೇಲೆ ಮಲಗಿಕೊಂಡಳು.

ರಾಮಚಂದ್ರನಿಗೆ ಶಾರದೆ ಹಾಸಿಗೆ ಹಿಡಿದುದನ್ನು ಕಂಡು ಬಹಳ ಗಾಬರಿಯಾಯಿತು. ಅವನು ಬಟ್ಟೆಯನ್ನು ಬಿಚ್ಚದೆ ಮಂಚದ ಮೇಲೆ ಕುಳಿತು 'ಶಾರದ' ಎಂದು ಹೆಂಡತಿಯ ಹಣೆಯ ಮೇಲೆ ಆಡುತ್ತಿದ್ದ ಮುಂಗುರುಳನ್ನು ಹಿಂದಕ್ಕೆ ಮಾಡಲು ಕೈ ಹಾಕಿದಾಗ ಹಣೆಯ ಶಾಖವನ್ನು ಕಂಡು 'ಏನಿದು ಇಷ್ಟು ಬಿಸಿ!' ಎಂದ. ಅನಂತರ ತನ್ನ ಕರವಸ್ತ್ರವನ್ನು ಹೊರತೆಗೆದು ಹಣೆಯ ಬೆವರನ್ನು ಕುಂಕುಮದ ಬಟ್ಟು ಅಳಿಸದಂತೆ ಒರೆಸಿದ. ಶಾರದೆಗೆ ಎಚ್ಚರವಾದರೂ ಗಂಡನ ಆರೈಕೆಯ ಸವಿಯನ್ನು ಅನುಭವಿಸಲು ನಿದ್ರಿಸುತ್ತಿರುವವಳಂತೆ ನಟಿಸಿದಳು. ಶಾರದೆಗೆ ಗಂಡನ ಆತಂಕಗೊಂಡ ಮುಖ ಕಂಡು ಒಳಗೊಳಗೇ ನಗು. ತನ್ನ ಒಳನಗುವನ್ನು ಅದುಮಿ ಹಿಡಿಯಲಾರದೆ ಅದನ್ನು

ತನ್ನ ಕೆಂದುಟಿಯ ಮೇಲೂ, ಗುಲಾಬಿಯಂತಹ ಕೆನ್ನೆಯ ಮೇಲೂ ಅಲೆಅಲೆಯಾಗಿ ಅರಳಿಸಿದಳು. ಅವಳ ಸಂತೋಷ ಅತಿಯಾಗಿ ಅವಳ ಕಿರುತುಟಿಯ ಕೊನೆಯಿಂದ ಜೊಲ್ಲು ಹೊರಕ್ಕೆ ಬಂತು. ರಾಮಚಂದ್ರ ಅದನ್ನು ಕರವಸ್ತ್ರದಿಂದ ಒರೆಸಿದಾಗ ಶಾರದೆಗೆ ನಾಚಿಕೆಯಾಗಿ ಕಣ್ಣುಬಿಟ್ಟು ನಗುತ್ತಾ 'ನೀವಾ' ಎಂದಳು. ರಾಮಚಂದ್ರನು ಅನಾಮತ್ತಾಗಿ ಅವಳನ್ನು ಎತ್ತಿ ಎದೆಗೆ ಅವುಚಿಕೊಂಡು ಮುಖಮುಂಡಲಕ್ಕೆಲ್ಲಾ ಚುಂಬನದ ಮಳೆಗರೆದು "ಶಾರಿ, ತಲೆಯೇಕೆ ಸುಡುತ್ತಿದೆ. ತಲೇನೋವೇ?" ಎಂದ. ಶಾರದ ಇಲ್ಲವೆಂದು ತಲೆಯನ್ನು ಅಲ್ಲಾಡಿಸಿ ಸೂಚಿಸಿದಳು. ಅವಳ ದೃಷ್ಟಿ ಎಲ್ಲಾ ರಾಮಚಂದ್ರನ ಎದೆಯ ಕಡೆಗೇ ಇತ್ತು. ಅದು ಪುಟಪುಟನೆ ಹೊಡೆದುಕೊಳ್ಳುವುದನ್ನು ಕಂಡು ಹರ್ಷಿಸುತ್ತಿದ್ದಳು.

"ಚಿನ್ನ ಸುಳ್ಳು ಹೇಳುತ್ತೀ. ನೋಡು ಮುಖವೆಲ್ಲ ಎಷ್ಟು ಬೆವರಿದೆ" ಎಂದ.

"ನಿಮ್ಮ ಮುಖವೂ ಬೆವರಿದೆ" ಎಂದು ತನ್ನ ಮುಖವನ್ನು ಒರೆಸಲು ಎತ್ತಿದ್ದ ರಾಮಚಂದ್ರನ ಕೈಯ ಕರವಸ್ತ್ರದಿಂದ ಅವನ ಮುಖವನ್ನು ಒರೆಸಿದಳು. ರಾಮಚಂದ್ರನಿಗೆ ಉದ್ವೇಗದಿಂದ ಮುಖ ನಿಜವಾಗಿಯೂ ಬೆವರಿತ್ತು.

ಶಾರದೆ ಗಂಡನಿಗೆ ತನ್ನ ತಲೆ ಸುತ್ತಿಕೊಂಡು ಬಂದ ಕಥೆ ತಾನು ವಾಂತಿ ಮಾಡಿಕೊಂಡ ವಿಷಯ ಹೇಳಿದಳು.

"ಹಾಗಾದರೆ ನಾನು ಔಷಧ ತರಲೇ" ಎಂದ ರಾಮಚಂದ್ರ.

"ಬೇಡ ಇದಕ್ಕೆ ಔಷಧಿ ಪ್ರಯೋಜನವಿಲ್ಲ........ ಇಂದಿದ್ದು ನಾಳೆ ಸರಿ ಹೋಗುವ ಕಾಹಿಲೆ ಇದು."

"ಅಂದರೆ!"

"ನೀವು ಗಂಡಸರು. ನಿಮಗೆ ಇದೆಲ್ಲಾ ಗೊತ್ತಾಗುವುದಿಲ್ಲ" ಎಂದು ಗಂಡನ ಮುಖ ನೋಡಿದಳು. ಗಂಡ ಬೆಪ್ಪಾಗಿದ್ದ.

"ನೀವೇನೂ ಯೋಚಿಸಬೇಡಿ. ಇವೆಲ್ಲಾ ಒಳ್ಳೆಯದಕ್ಕೇ."

ಈಗ ರಾಮಚಂದ್ರನಿಗೆ ವಿಷಯವೇನೆಂದು ಅರಿವಾಯಿತು. ಅವನು ಶಾರದೆಯ ಕೈಯ್ಯನ್ನು ಹಿಸುಕುತ್ತಾ

"ಥೂ. ಹುಚ್ಚು ಹುಡುಗಿ. ಹೀಗೆ ಅಂತ ಹೇಳಬಾರದೇ"

" ಏನಂತ ? "

" ವಂಶೋದ್ಧಾರಕನ ಅವತಾರದ ಮುನ್ಸೂಚನೆ ಅಂತ "

" ಥೂ. ನಿಮಗೆ ನಾಚಿಕೇನೇ ಇಲ್ಲ "

" ನೀನು ಹೇಗಂಂದರೂ ಸರಿಯೇ. ಹೇಳು. ವಂಶೋದ್ಧಾರಕ ಹೌದೋ ಅಲ್ಲವೋ ? "

" ಎಂದಿಗೂ ಅಲ್ಲ. ವಂಶೋದ್ಧಾರಿಕಿ—ನಮ್ಮ ಶಾಸ್ತ್ರಿಗಳು ನನ್ನ ಜಾತಕ ನೋಡಿ ಅವತ್ತೇ ಹೇಳಿದ್ದಾರೆ. "

" ಏನಂತ ? "

" ಈ ಬಾರಿ ಹೆಣ್ಣು ಅಂತ "

" ಗಂಡಾದರೆ ಏನು ಬೆಟ್ ( bet ) ? "

" ನಿಮ್ಮ ದಮ್ಮಯ್ಯ. ಬೆಟ್ಟೂ ಬೇಡ. ಬೆರಳೂ ಬೇಡ. ಇನ್ನೂ ಆರು ತಿಂಗಳ ಮೇಲಿನ ಮಾತು ಅದು..........ಈಗ ನೀವು ಕೋಟು ಬಿಚ್ಚಿ ಬನ್ನಿ. "

" ರಾಣೀಸಾಹೇಬರ ಅಪ್ಪಣೆ. ಬಡವನಿಗೆ ಇವತ್ತು ಕಾಫಿ ನೀರು ಉಂಟೋ ಅಥವಾ ಅದಕ್ಕೂ ಆರುತಿಂಗಳು ಅಂತ ಅಪ್ಪಣೆ ಕೊಡಿಸ್ತೀರೋ...."

" ಥೂ ಹೋಗೀಂದ್ರೆ. ನಿಮಗೆ ಮಾನ ಮರ್ಯಾದೆ ಕೊಂಚನೂ ಇಲ್ಲ. ಕೇಳಿದೋರು ಏನಾದ್ರೂ ಅಂದುಕೊಂಡಾರು. ಸುಮ್ನಿರಿ. ಕಾಫೀನೂ ಕೊಡ್ತೀನಿ. ಜತೆಗೆ ತಿಂಡೀನೂ.... "

ಅಂದು ಹೊಸ ಸುದ್ದಿಯ ಕಾರಣವಾಗಿ ಆ ಸತಿಪತಿಗಳಿಗೆ ತಿಂಡಿಯ ರುಚಿಯೇ ಬೇರೆಯಾಗಿತ್ತು. ಗಂಡ ಹೆಂಡಿರು ಹಕ್ಕಿಗಳಂತೆ ಉಪ್ಪಿಟ್ಟನ್ನು ಒಂದೇ ತಾಟಿನಲ್ಲಿ ತಿಂದರು. ಕಾಫಿಯನ್ನು ಒಂದೇ ಲೋಟದಲ್ಲಿ ಕುಡಿದರು. ಅಂದು ಆನಂದದ ಹೊನಲಿನಲ್ಲಿ ವೈಮರೆತ ಅವರಿಗೆ ಸಂಜೆ ಸರಿದು ದೀಪ ಹಚ್ಚುವ ಹೊತ್ತಾದುದೂ ನೆನಪಿಗೆ ಬರಲಿಲ್ಲ !

ಈ ಸುದ್ದಿ ಕಾವೇರಮ್ಮನ ಕಿವಿಗೆ ಬೀಳಲು ಹೆಚ್ಚು ಕಾಲ ಬೇಕಾಗಲಿಲ್ಲ. ಅವರು ಮಗಳ ಬಾಣಂತನವನ್ನು ಹಳ್ಳಿಯಲ್ಲೇ ಮಾಡಲು ಈಗಿನಿಂದಲೇ ಸಿದ್ಧ ಮಾಡಿಕೊಂಡರು. ಆದರೆ ಹಠಾತ್ತಾಗಿ ಹಳ್ಳಿಯಲ್ಲಿ ಪ್ಲೇಗಿನ ಉಪದ್ರವ ಕಾಣಿಸಿಕೊಂಡಿತು. ಇದರಿಂದ ಅವರ ಎಲ್ಲ ಆಲೋಚನೆ ಬುಡಮೇಲು ಆಗಿ,

ಅವರಿಗೆ ತುಂಬಾ ಆಶಾಭಂಗವಾಯಿತು.

ರಾಮಚಂದ್ರನಿಗೆ ಹಳ್ಳಿಯಲ್ಲಿ ಪ್ಲೇಗ ಕಾಣಿಸಿಕೊಂಡುದು ವರವಾಗಿ ಪರಿಣಮಿಸಿತು. ಹೆಂಡತಿಯನ್ನು ಬಾಣಂತನಕ್ಕೆ ಎಲ್ಲಿ ಹಳ್ಳಿಗೆ ಕಳುಹಿಸಿಕೊಡಬೇಕಾಗುತ್ತೋ ಎಂದು ಅವನು ಹೆದರಿದ್ದ. ಅವನ ಹೆದರಿಕೆಯ ಕಾರಣ ಹಳ್ಳಿಯಲ್ಲಿ ಹೆಚ್ಚು ಕಡಮೆಯಾದರೆ ಒಳ್ಳೆಯ ಸೂಲಗಿತ್ತಿಯಿಲ್ಲ. ಅಲ್ಲದೆ ಹೆಂಡತಿ ತನ್ನಿಂದ ದೂರವಿರುತ್ತಾಳೆ. ಕ್ಷೇಮ ಸಮಾಚಾರ ತಿಳಿಯಲು ತಡವಾಗುವುದು. ಇವೇ ಮೊದಲಾದ ಕಾರಣಗಳು. ಆದರೆ ಪ್ಲೇಗಿನ ಹಳ್ಳಿಯಲ್ಲಿ ಮಗಳ ಬಾಣಂತನ ಮಾಡಲು ಕಾವೇರಮ್ಮ ಒಪ್ಪದೇ ಬೆಂಗಳೂರಿನಲ್ಲಿಯೇ ಮಾಡಬೇಕೆಂದು ನಿಶ್ಚಯಿಸಿದರು. ಈ ವಿಷಯವನ್ನು ಪತ್ರಮುಖೇನ ರಾಮಚಂದ್ರನಿಗೆ ತಿಳಿಸಿದರು. ಒಂದು ದಿನ ಕಾವೇರಮ್ಮ ಬಾಣಂತತನಕ್ಕೆ ಬೇಕಾಗುವ ಒಳ್ಳೆಯ ತುಪ್ಪ, ಹಳೆಯ ಅಕ್ಕಿ, ಬಾಣಂತಿಖಾರಗಳ ಸಮೇತ ಬೆಂಗಳೂರಿಗೆ ಬಂದೇ ಬಿಟ್ಟರು. ತಾಯಿಯೇ ಖುದ್ದು ನಿಂತು ಮಗಳಿಗೆ ಸೀಮಂತ ಮಾಡಿದರು. ಆ ದಿನ ಶಾರದೆಯ ಅಲಂಕಾರವನ್ನು ಕಂಡು ಸಾಕ್ಷಾತ್ ಶಾರದಾಂಬೆಯನ್ನು ಕಂಡಷ್ಟೇ ಹರ್ಷಿಸಿದರು. ಶಾರದೆಯ ಮುಖದ ಸೌಮ್ಯ ಕಳೆಗೆ ಗರ್ಭಿಣಿಯ ಕಾಂತಿಯೂ ಸೇರಿ, ನೋಡಿದವರ ಮನಸ್ಸನ್ನು ಆಲ್ಹಾದಗೊಳಿಸುತ್ತಿತ್ತು. ಅವಳು ತೊಟ್ಟಿದ್ದ ಹಸಿರು ಬಣ್ಣದ ಕುಪ್ಪಸ, ಆಕಾಶ ಬಣ್ಣದ ಸೀರೆ, ಅವಳಿಗೆ ಚೆನ್ನಾಗಿ ಒಪ್ಪುತ್ತಿತ್ತು. ಕಾವೇರಮ್ಮ ಆರತಕ್ಷತೆಗೆ ಬಂದಿದ್ದವರೆಲ್ಲಾ ಹೊರಟು ಹೋದ ಮೇಲೆ ಮಗಳಿಗೆಲ್ಲಿ ದೃಷ್ಟಿಯಾಯಿತೋ ಎಂದು ಹತ್ತು ಬಾರಿ 'ದೃಷ್ಟಿ' ತೆಗೆದರು.

ಇನ್ನೆಲ್ಲಾ ದಿನಗಳು, ಇಲ್ಲವೇ ಗಂಟೆಗಳು. ರಾಮಚಂದ್ರನಿಗೆ ಆಫೀಸಿನ ಕೆಲಸದಲ್ಲಿ ಮನಸ್ಸಿಲ್ಲದಾಯಿತು. ಇದನ್ನು ಕಂಡ ಅವನ ಸಹೋದ್ಯೋಗಿಗಳು "ಪಾಪ ಮನೆಯ ಕಡೆ ಮನಸ್ಸೇನೊ!" ಎಂದು ಹಂಗಿಸುತ್ತಿದ್ದರು. ಅವರ ತಮಾಷೆ ಅವನಿಗೆ ಪ್ರಿಯವಾಗಿಯೇ ಇತ್ತು.

ಕಾವೇರಮ್ಮ, ರಾಮಚಂದ್ರ ಬಹಳ ಕಾಲದಿಂದ ನಿರೀಕ್ಷಿಸುತ್ತಿದ್ದ ಆ ದಿನ ಬಂದೇ ಬಂತು. ಅದಕ್ಕಾಗಿ ಅವರು ಸಿದ್ಧರಾಗಿಯೇ ಇದ್ದರು. ಶಾರದೆ ಹೇಳಿದ್ದಂತೆ ಶಾಸ್ತ್ರಿಗಳ ಭವಿಷ್ಯ ನಿಜವಾಯಿತು. ಕೂಸು ಹೆಣ್ಣೇ ಆಗಿತ್ತು. ಕೂಸನ್ನು ನೋಡಲು ಹೊಲೆಮನೆಗೆ ರಾಮಚಂದ್ರ ಬಂದಾಗ ಶಾರದೆ ಮಗು

ವನ್ನು ತೋರಿಸುತ್ತಾ "ನನ್ನ ಮಾತು ನಿಜವೋ ಸುಳ್ಳೋ" ಎಂದಳು.

"ಹೆಣ್ಣೆಂದು ನನಗೆ ಮೊದಲೇ ಗೊತ್ತಿತ್ತು. ಆದರೂ ಸುಮ್ಮನೆ ಹಾಗಂದಿದ್ದೆ" ಎಂದು ಉಪಾಯವಾಗಿ ಮಾತು ಬದಲಿಸಿದ. ಅವನ ಉತ್ಸಾಹಭಂಗವನ್ನು ಕಂಡು ಶಾರದೆ "ಈ ಬಾರಿ ನಾನು ಗೆದ್ದೆ, ಮುಂದಿನ ಬಾರಿ ನೀವು!" ಎಂದಳು. ರಾಮಚಂದ್ರ ಮಾತನಾಡದೆ ಮುಖವರಳಿಸಿದ.

ತಾಯಿಯ ಆಕ್ಕರೆಯಿಂದ ಮಗು ಬಾಣಂತಿಗೆ ಯಾವುದಕ್ಕೂ ಕೊರತೆಯಿಲ್ಲದೆ ಎರಡು ತಿಂಗಳ ಕಾಲ ಕಳೆಯಿತು. ಕಾವೇರಮ್ಮನಿಗೆ ಇನ್ನೂ ಒಂದೆರಡು ತಿಂಗಳು ಬೆಂಗಳೂರಿನಲ್ಲಿ ಇರಬೇಕೆಂಬ ಆಸೆಯಿತ್ತು. ಆದರೆ ಒಂದು ದಿನ ಶ್ಯಾಮಣ್ಣನವರು ಹಠಾತ್ತಾಗಿ ಕಾಣಿಸಿಕೊಂಡು ಭಾಗೀರಥಮ್ಮನಿಗೆ ಪ್ಲೇಗು ತಗುಲಿದೆ ಎಂದೂ, ಅವರ ಸ್ಥಿತಿ ಚಿಂತಾಜನಕವಾಗಿದೆ ಎಂದೂ ತಿಳಿಸಿದರು. ಈ ಸುದ್ದಿಯನ್ನು ಕೇಳಿದ ಮೇಲೆ ಬೆಂಗಳೂರಿನಲ್ಲಿ ಇರಲು ಕಾವೇರಮ್ಮನಿಗೆ ಮನಸ್ಸಿಲ್ಲದಾಯಿತು. ಮಾರನೆಯ ದಿನವೇ ಶ್ಯಾಮಣ್ಣನವರೊಂದಿಗೆ ಹಳ್ಳಿಗೆ ಹೊರಡಲು ನಿಶ್ಚಯಿಸಿದರು.

ಮಗಳು, ತಾಯಿ ಊರಿಗೆ ಹೋಗುವಾಗ ಕಣ್ಣೀರಿಟ್ಟಳು. ತಾಯಿ ಇನ್ನೂ ಕೆಲವು ದಿನ ಇದ್ದಿದ್ದರೆ ಚೆನ್ನಾಗಿತ್ತೆಂದು ಅವಳ ಆಸೆ. ಆದರೆ ಹಳ್ಳಿಯಲ್ಲಿನ ಪರಿಸ್ಥಿತಿಯಲ್ಲಿ ಅವಳ ಆಸೆ ಈಡೇರುವಂತಿಲ್ಲ. ಮಗಳ ಅಂತರಂಗವನ್ನು ಬಲ್ಲ ತಾಯಿ ಊರಿಗೆ ಹೋಗುತ್ತಾ ನುಡಿದರು.

"ಹೇಗೂ ಎರಡು ತಿಂಗಳ ಬಾಣಂತನವಾಗಿದೆ. ನಾನು ಊರಿಗೆ ಹೋಗುತ್ತೇನೆ. ಊರಿನಲ್ಲಿ ಎಲ್ಲ ನೆಟ್ಟಗಾದರೆ ಖಂಡಿತ ನಿನ್ನನ್ನು ನೋಡಿಕೊಂಡು ಹೋಗಲು ಬರುತ್ತೇನೆ."

"ಊರಿಗೆ ಹೋದಮೇಲೆ ಇನ್ನು ನೀನು ಎಲ್ಲಿ ಬರ್ತೀಯೋಮ್ಮ, ಅಲ್ಲಿನ ನೂರೆಂಟು ಕೆಲಸ ಕಾರ್ಯಗಳನ್ನು ಬಿಟ್ಟುಬಿಟ್ಟು. ಆಗಲಿ. ಇಂತಹ ಹೊತ್ತಿನಲ್ಲಿ ಬಲವಂತಪಡಿಸಿ ನಿಲ್ಲಿಸಿಕೋಬಾರದು........ಮುಂದಿನ ತಿಂಗಳಿಗೆ ಕೃಷ್ಣವೇಣಿಗೆ ಮೂರು ತಿಂಗಳು ತುಂಬುತ್ತೆ. ಆಗ ದೇವಸ್ಥಾನಕ್ಕೆ ಹೋಗುವ ಹೊತ್ತಿಗೆ ನೀನು ಖಂಡಿತ ಬರ್ತೀ ತಾನೇ?"

ತಾಯಿ 'ಆಗಲಿ' ಎಂದರು.

"ನೀನು ಬರದೆ ಇರು. ಆಗ ನಿನಗೆ ಕೊಡೋ ಕೆಲಸ........"

"ಆಗಲಮ್ಮ. ಬದುಕಿದ್ದರೆ ಖಂಡಿತವಾಗಿ ಒಂದು ದಿನ ಹಾಗೆ ಬಂದು ನೋಡೋಕೆ ಏನಡ್ಡಿ ? ನೀನು ಮಗೂನ್ನ ಚೆನ್ನಾಗಿ ನೋಡಿಕೋ. ಆರೋಗ್ಯದ ಕಡೆ ಗಮನವಿರಲಿ," ಎಂದು ಹೇಳಬೇಕಾದ ವಿಷಯಗಳನ್ನು ಹೇಳಿ, ಶ್ಯಾಮಣ್ಣನವರೊಂದಿಗೆ ಹಳ್ಳಿಗೆ ಹೊರಟರು.

ಕಾವೇರಮ್ಮ ಕೊರಟೆಯನ್ನು ಬಿಟ್ಟು ಹೋದಮೇಲೆ ಕೊರಟೆ ಸ್ಮಶಾನ ಸದೃಶವಾಗಿತ್ತು. ಊರಿನಲ್ಲಿ ನಾಲ್ಕು ತಿಂಗಳ ಹಿಂದೆ ಪ್ಲೇಗಿನ ದೇವತೆ ಕಾಣಿಸಿಕೊಂಡು ನೂರೆಂಟು ಸಂಸಾರಗಳನ್ನು ಕಬಳಿಸಿದ್ದಳು. ಮೊದಲು ಇಲಿ ಬಿದ್ದಾಗ ಜನ ಅದನ್ನು ನಿರ್ಲಕ್ಷಿಸಿ, ಇಲಿ ಯಾಕೋ ಸತ್ತಿದೆ ಎಂದು ತೆಪ್ಪಗಿದ್ದರು. ತಮ್ಮ ಮನೆಯಲ್ಲಿ ಇಲಿ ಬಿದ್ದ ಸಂಗತಿಯನ್ನು ಒಬ್ಬರು ಇನ್ನೊಬ್ಬರಿಗೆ ತಿಳಿಸಲಿಲ್ಲ. ತಿಳಿಸಲು ಹೆದರಿಕೆ ಯಾರು ಏನನ್ನುವರೋ ಎಂದು. ಆದರೆ ನಾಲ್ಕು ಕಡೆ ಹೆಗ್ಗಣಗಳು ಸತ್ತು ವಾಸನೆ ಹಿಡಿದಾಗ ಊರಿನಲ್ಲಿ ಗುಟ್ಟು ರಟ್ಟಾಯಿತು. ಆ ಮನೆಯಲ್ಲಿ ಇಲಿ ಬಿದ್ದವಂತೆ! ಈ ಮನೆಯಲ್ಲಿ ಇಲಿ ಬಿದ್ದವಂತೆ ! ಎಂದು ಪುಕಾರು ಹುಟ್ಟಿತು. ಸರಿ. ಮುನ್ನೆಚ್ಚರಿಕೆ ವಹಿಸುವವರು ವಹಿಸಿದರು. ಕಲಿತ ಮಂದಿ, ತಿಳುವಳಿಕಸ್ಥರು, ಅನುಭವಶಾಲಿಗಳು, ಡಾಕ್ಟರನ್ನು ಕರೆಸಿಕೊಂಡು ಇನಾಕ್ಯುಲೇಷನ್ ಮಾಡಿಸಿಕೊಂಡರು. 'ಫಿನಾಯಿಲ್' ತಂದಿಟ್ಟುಕೊಂಡರು. ಈ ಜಾಡ್ಯವನ್ನು ಹೊಸದಾಗಿ ಕಾಣುವ ಯುವಕರೂ, ವಿಚಾರಹೀನರೂ 'ಅದು ತಮ್ಮನ್ನೇನು ಮಾಡುತ್ತೆ' ಎಂದು ಅಸಡ್ಡೆ ವಹಿಸಿದರು. ಅಂಥವರನ್ನು ಪ್ಲೇಗುಮಾರಿ ಮೊದಲು ಮುಕ್ಕಿದಳು. ಇಂದು ಕೆಲಸದ ಆಯಾಸದಿಂದ ಮೈ ಕೈ ನೋವು ಆದಂತೆ ಆ ಬೇನೆ ಕಾಣಿಸಿಕೊಳ್ಳುವುದು. ನಾಳೆ ಜ್ವರ, ಮೈಯಲ್ಲಿ ಯಾವುದೋ ಭಾಗದಲ್ಲಿ ಗಡ್ಡೆ. ಅದರ ದೆಸೆಯಿಂದ ನೋವು, ಊತ, ಅದು ದಿನಕ್ರಮೇಣ ಬೆಳೆದು, ಒಂದು ದಿನ ಅವನನ್ನು ಪ್ರಜ್ಞಾಶೂನ್ಯನನ್ನಾಗಿ ಮಾಡುವುದು. ಅವನ ಕಥೆ ಅಲ್ಲಿಗೆ ಮುಗಿಯಿತು.

ಜನ ಈ ವ್ಯಾಧಿಯನ್ನು ಎದುರಿಸಲಾರದೆ 'ಅಯ್ಯೋ' ಎಂದು ಗೋಳಿಟ್ಟರು. ತುಂಬು ವಕ್ಕಲಾಗಿದ್ದ ಅನೇಕ ಸಂಸಾರಗಳಲ್ಲಿ, ಇಂದು ಮಗ, ನಾಳೆ ತಾಯಿ, ನಾಡಿದ್ದು ಅಜ್ಜ ಹೀಗೆ, ಪಾಳಿಯಂತೆ ಸಾವು ಹಂಚಿಕೊಂಡಿತ್ತು.

ಜನ ದಿಕ್ಕುಗಾಣದೆ ಊರು ಬಿಡಲು ನಿಶ್ಚಯಿಸಿದರು. ಅದರಂತೆ ಊರಿ

ನಾಚೆಯ ಹೊಲಗಳಲ್ಲಿ, ಜೋಪಡಿಗಳನ್ನು ಎಬ್ಬಿಸಿ, ದನಕರುಗಳನ್ನೂ ಮೂರು ನಾಲ್ಕು ತಿಂಗಳ ಗ್ರಾಸವನ್ನೂ ಸಾಗಿಸಿ, ಮನೆಗೆ ಬೀಗ ಬಡಿದರು. ತಾವು ಇರುವ ಮನೆಗಳನ್ನು ಹಲವಾರು ಕಾರಣಗಳಿಂದ ಬಿಡಲಾಗದವರು ಧೈರ್ಯ ವಹಿಸಿ, ಗೋವಿಂದನನ್ನು ನಂಬಿ, ತೆಪ್ಪಗೆ ಇದ್ದೇ ಬಿಟ್ಟರು. ಸಾಯುವುದು ಹಣೆಯಲ್ಲಿ ಬರೆದಿದ್ದರೆ, ಹುಟ್ಟಿದ ಮನೆಯಲ್ಲಿಯೇ ಸಾಯೋಣವೆಂದುಕೊಂಡು ಶ್ಯಾಮಣ್ಣನವರೂ ಮನೆ ಬಿಡಲಾಗದ ಒಕ್ಕಲುಗಳ ಪೈಕಿ ಒಬ್ಬರು. ಅವರ ಮನೆ ಊರಿನಿಂದ ಬೇರೆಯಾಗಿ ಒಂದು ಮೂಲೆಯಲ್ಲಿ ಹೊರಬದಿಗೇ ಇತ್ತು. ಅವರ ಮನೆಯ ಸುತ್ತ ಬೇರೆ ಮನೆಗಳಿಲ್ಲ. ಚರಂಡಿಯಾಗಲೀ, ಗೊಬ್ಬರದ ಗುಂಡಿಗಳಾಗಲೀ ಹತ್ತಿರ ಇರಲಿಲ್ಲ. ಗಾಳಿ ಧಾರಾಳವಾಗಿ ಬೀಸುತ್ತಿತ್ತು. ಮನೆಯಲ್ಲಿಯ ಎತ್ತು ಕರು, ದವಸ ಧಾನ್ಯ, ದೇವರನ್ನು ಬೇರೆ ಕಡೆಗೆ ಸಾಗಿಸುವುದು ಅವರಿಗೆ ಸರಿಬರಲಿಲ್ಲ. ಅವರು ಮುಂಜಾಗ್ರತೆಯ ಕ್ರಮ ತೆಗೆದುಕೊಂಡು ' ರಾಮಕೃಷ್ಣ ' ಅಂತ ಇದ್ದ ಮನೆಯಲ್ಲಿಯೇ ಧೈರ್ಯಮಾಡಿ ಇದ್ದುಬಿಟ್ಟರು. ಅವರ ಧೈರ್ಯಕ್ಕೆಲ್ಲಾ ಕಾರಣ ಭಾಗೀರಥಮ್ಮ ಕಂಡ ಕನಸು.

ಒಂದು ದಿನ ಭಾಗೀರಥಮ್ಮನಿಗೆ ಒಂದು ವಿಚಿತ್ರ ಕನಸಾಯಿತು. ಈ ವೇಳೆಗೆ ಊರಿನಲ್ಲಿ ನೂರರ ತನಕ ಸಾವಿನ ಸಂಖ್ಯೆ ಏರಿತ್ತು. ರಾತ್ರಿ ಹಾಲು ತುಂಬಿದ ಬೆಳದಿಂಗಳು. ಊರಿನಲ್ಲಿ ಒಂದು ಪಿಳ್ಳೆ ಓಡಾಡುತ್ತಿಲ್ಲ. ಸುಮಾರು ಮಧ್ಯರಾತ್ರಿಯ ಸಮಯ. ಇಂತಹ ಹೊತ್ತಿನಲ್ಲಿ ಮಾದಿಗರ ಮನೆಯ ಕಡೆಯಿಂದ ಒಬ್ಬ ಮುತ್ತೈದೆ–ಹಳೆಯ ಕಾಲದ ಮುತ್ತೈದೆ– ಅವರ ಮನೆಯ ಕಡೆ ಹೊರಬಿದ್ದಳು. ಆಕೆಯ ಕೈಯಲ್ಲಿ ಬಿಜ್ಜನ ನಾಲ್ಕು ವರ್ಷದ ಮಗು. ಬ್ರಾಹ್ಮಣಳಾಗಿ ತೋರುವ ಆಕೆ ಮಾದಿಗರ ಹುಡುಗನನ್ನು ಎತ್ತಿಕೊಂಡಿರುವಳಲ್ಲಾ ಎಂದು ಭಾಗೀರಥಮ್ಮನಿಗೆ ಆಶ್ಚರ್ಯ. ಭಾಗೀರಥಮ್ಮ ಆ ಮುತ್ತೈದೆಯನ್ನು ಕೂಗಿ ' ಇದೇನಮ್ಮ ಆ ಮಾದಿಗರೋನ್ನ ಎತ್ತಿಕೊಂಡಿದ್ದೀರಿ ' ಎಂದಳು.

ಆ ಮುತ್ತೈದೆ " ಎತ್ತಿಕೊಂಡರೆ ಏನಮ್ಮ. ನನಗೆಲ್ಲಾ ಒಂದೇ " ಎಂದಳು.

" ನೀವು ಎಲ್ಲಿಗೆ ಹೊರಟಿದ್ದೀರಿ ? "

" ನಿಮ್ಮ ಮನೆಗೇ. ಯಾರೋ ಹೋಗುವಾಗ ಬಂದು ಹೋಗು ಅಂತ ಹೇಳಿದ್ರು. ಅದಕ್ಕೇ ಹೊರಟಿದ್ದೀನಿ " ಎಂದು ಮುಂದೆ ಹೆಜ್ಜೆ ಹಾಕಿದಳು.

ಆಕೆ ಶಾಮಣ್ಣೋರ ಮನೆಯ ಮುಂದಿನ ಮರಿಶಾಮಿ ದೇವಾಲಯದ ಬಳಿ ಬರುವಾಗ್ಗೆ ಗುಡಿಯ ಪಾವಟಿಗೆಗಳನ್ನು ಇಳಿದು ಯಾವನೋ ಜಟಾಧಾರಿ ಯಾದ ಸನ್ಯಾಸಿ ಆಕೆಯನ್ನು ಅಡ್ಡಗಟ್ಟಿದ.

"ಇಲ್ಲಿಗೆ ಯಾಕೆ ಬಂದೆ? ಇಲ್ಲಿ ನಿನಗೆ ಏನು ಕೆಲಸವಿಲ್ಲ ನಡೆ" ಎಂದು ಗರ್ಜಿಸಿದ. ಆ ಮುತ್ತೈದೆ ಆ ಯತಿಯ ಮಾತನ್ನು ಲಕ್ಷಿಸದೆ ಮುಂದು ವರಿದಳು. ಆಗ ಆ ಸನ್ಯಾಸಿ ಕೋಪಗೊಂಡು ತನ್ನ ದಂಡದಿಂದ ಹಿಂದಕ್ಕೆ ತಳ್ಳಿದ. ಆದರೂ ಆಕೆ ಹಠಮಾರಿ ಹೆಂಗಸಿನಂತೆ ಮುಂದೆ ನುಗ್ಗಿದಳು. ಇವರಿ ಬ್ಬರ ಕಾದಾಟದಲ್ಲಿ ಭಾಗೀರಥಮ್ಮನಿಗೆ ಎಚ್ಚರವಾಯಿತು. ಕನಸಿನಲ್ಲಿ ಕಂಡ ಮುತ್ತೈದೆ ಬೇರೆ ಯಾರೂ ಆಗಿರದೆ ಪ್ಲೇಗುದೇವತೆಯೇ ಎಂದು ಊಹಿಸಿ ತತ್ತ ರಿಸಿದರು. ಆಕೆಯನ್ನು ಮನೆಗೆ ಬಿಡದಂತೆ ತಡೆದ ಯತಿ ಸಾಕ್ಷಾತ್ ಮರಿ ಸ್ವಾಮಿಗಳೇ ಎಂಬುದರಲ್ಲಿ ಸಂಶಯವೇ ಉಳಿಯಲಿಲ್ಲ. ಹಾಸಿಗೆಯಿಂದ ಎದ್ದು ಮೈ ತೊಳೆದುಕೊಂಡು ದೇವರ ಮುಂದೆ ತುಪ್ಪದ ದೀಪ ಹಚ್ಚಿಟ್ಟರು. ಬೆಳ ಗಾಗುವ ವೇಳೆಗೆ ಬಿಜ್ಜನ ಮನೆಯಲ್ಲಿ ಆರ್ತನಾದ ಕೇಳಿಸಿತು. ಅವನ ನಾಲ್ಕು ವರ್ಷದ ಮಗು ರಾತ್ರಿ ತೀರಿಕೊಂಡಿದ್ದ !

ಕೆಲವು ದಿನಗಳ ನಂತರ ಊರಿಗೆ ಕೊಂಚ ಜೀವ ಕಳೆ ಬಂತು. ಸಾಯು ವವರ ಸಂಖ್ಯೆ ಕಡಿಮೆಯಾಯಿತು. ಊರು ಬಿಟ್ಟು ಹೋಗಿದ್ದವರು ಒಬ್ಬೊ ಬ್ಬರಾಗಿ ಹಿಂತಿರುಗಿ ಬರಲಾರಂಭಿಸಿದರು. ಊರಿನವರಲ್ಲಾ ಸೇರಿ ಮನೆಗಿ ಷ್ಟೆಂದು ಚಂದಾ ಹಾಕಿ, ಹತ್ತು ಸೇರು ಮೊಸರನ್ನ ಮಾಡಿ, ಪ್ಲೇಗಮ್ಮನಿಗೆ ಮನುಷ್ಯಬಲಿ ನಿಲ್ಲಿಸೆಂದು "ತಣುವು ಮುದ್ದೆ" ಇಟ್ಟರು. ಈ ಸಂದರ್ಭದಲ್ಲಿ ಚೌಡೇಶ್ವರಿ ಮೈಮೇಲೆ ಬರುತ್ತಿದ್ದ ಫಕೀರಪ್ಪನಿಗೆ ಆವೇಶ ಬಂದು, ಹಳ್ಳಿಯ ಜನ ದೇವರಲ್ಲಿ ನಂಬಿಕೆ ಇಟ್ಟಿಲ್ಲವೆಂದೂ, ದೇವದುಗಳಿಗೆ ಸರಿಯಾದ ಪೂಜೆ ಪುನಸ್ಕಾರ ಮಾಡುತ್ತಿಲ್ಲವೆಂದೂ, ಅವರಿಗೆ ಬುದ್ಧಿ ಕಲಿಸಲು ತಾನು ಇಷ್ಟೊಂದು ಜನರನ್ನು ಬಲಿ ತೆಗೆದುಕೊಳ್ಳಬೇಕಾಯಿತೆಂದೂ ದೇವಿ ಅಪ್ಪಣೆ ಕೊಡಿಸಿದಳು. ಜನ ದೇವಿಗೆ ಅಡ್ಡ ಬಿದ್ದು, ಮುಂದೆ ಭಕ್ತಿಯಿಂದ ದೇವರನ್ನು ಸೇವಿಸುವುದಾಗಿ ವಚನ ಕೊಟ್ಟ ಮೇಲೆ, ಫಕೀರಪ್ಪ ಹುಚ್ಚು ಕೂಗು ಕೂಗುತ್ತಾ, ಹೂಂಕಾರ ಮಾಡುತ್ತಾ, ಊರಿನಾಚೆಯ 'ಶಾಂತಿ' ಮರದ ಬಳಿಗೆ ಓಡಿಹೋಗಿ, ಬಿದ್ದು ಬಿಟ್ಟ. ಪ್ಲೇಗಮ್ಮ ಊರುಬಿಟ್ಟು ಹೊರಟುಹೋದುದಕ್ಕೆ ಇದಕ್ಕಿಂತ ಪ್ರತ್ಯಕ್ಷ

ಪ್ರಮಾಣ ಜನಕ್ಕೆ ಬೇಕಿಲ್ಲ. ಊರಿನ ಜನ ದೇವರುಗಳಿಗೆ ಸಲ್ಲಿಸಬೇಕಾದ ಹರಕೆ ಸಲ್ಲಿಸಿದರು. ಅಲ್ಲದೆ ಹಣ ಕೂಡಿಸಿ, ಊರ ದೇವರುಗಳ ಉತ್ಸವ ಮಾಡಿಸಿದರು. ಈಗ ಜನರಿಗೆ ಯಾವ ಭೀತಿಯಿಲ್ಲ. ಎಲ್ಲರಿಗೂ ಉತ್ಸಾಹ ಲವಲವಿಕೆ ಬಂದವು. ರೈತ ಮಕ್ಕಳು ಬೇಕಾದ ಕಡೆ ಗಮನಮಾಡತೊಡಗಿದರು.

ಇಂತಹ ಹೊತ್ತಿನಲ್ಲಿ ಶ್ಯಾಮಣ್ಣನೋರ ಹೆಂಡತಿ ಭಾಗೀರಥಮ್ಮ ಹಾಸಿಗೆ ಹಿಡಿದು ಮಲಗಿದರು. ಇದರಿಂದ ಮನೆಯವರಿಗೆ ಹೆಚ್ಚು ಗಾಬರಿಯಾಗಲಿಲ್ಲ. ಪ್ಲೇಗುಮಾರಿ ಊರು ಬಿಟ್ಟು ಹೋದುದನ್ನು ಅವರೆಲ್ಲರೂ ಕಂಡಿದ್ದರು. ಏನೋ ಕೆಲಸದ ಆಯಾಸದಿಂದ ಸುಸ್ತಾಗಿ ಮಲಗಿದ್ದಾರೆ ಎಂದುಕೊಂಡರು. ಆದರೆ ಅವರ ಊಹೆ ಸುಳ್ಳಾಯಿತು. ಮೊದಲು ಸುಸ್ತಾಗಿದ್ದುದು, ಎರಡೇ ದಿನಕ್ಕೆ ಸಣ್ಣ ಜ್ವರವಾಗಿ ಮಾರ್ಪಟ್ಟಿತು. ಮೈಯಲ್ಲಿ ಅಲ್ಲಲ್ಲಿ ಪ್ಲೇಗಿನ ಗಡ್ಡೆ ಕಾಣಿಸಿಕೊಂಡಿತು. ಆಗಲೇ ಶ್ಯಾಮಣ್ಣನವರು ಕಾವೇರಮ್ಮನನ್ನು ಕರೆದುಕೊಂಡು ಹೋಗಲು ಬೆಂಗಳೂರಿಗೆ ಬಂದುದು. ಅವರೊಬ್ಬರು ಇದ್ದರೆ ನೂರು ಮಂದಿ ಇದ್ದಷ್ಟು ಧೈರ್ಯ ಶ್ಯಾಮಣ್ಣನವರಿಗೆ. ಅಲ್ಲದೆ ಕಾವೇರಮ್ಮನಿಗೆ ಸಣ್ಣಪುಟ್ಟ ಖಾಯಿಲೆಗಳಿಗೆ ವೈದ್ಯಕಿಬೇರೆ ಗೊತ್ತಿತ್ತು. ಮನೆಯಲ್ಲಿ ಅಡಿಗೆಗೆ ರೋಗಿಯನ್ನು ನೋಡಿಕೊಳ್ಳಲು ಸೀಪೇ ಎನ್ನುವ ಹೆಣ್ಣಿಲ್ಲ. ಪ್ಲೇಗಿನ ಊರಿಗೆ ಮಗಳು ಶ್ಯಾಮಲೆಯನ್ನು ಕರೆಸಲು ಮನ ಬರದೆ ಶ್ಯಾಮಣ್ಣನವರು ಕಾವೇರಮ್ಮನನ್ನು ಕರೆತರಲು ಬಂದಿದ್ದರು.

ಕಾವೇರಮ್ಮ ಊರಿಗೆ ಬಂದ ಸಂಜೆ ಭಾಗೀರಥಮ್ಮನಿಗೆ ಮೈಮೇಲೆ ಪ್ರಜ್ಞೆಯೇ ಇರಲಿಲ್ಲ. ಅಷ್ಟು ಜ್ವರ. ತೊಡೆಯಲ್ಲಿ ಅಂಗೈಗಾತ್ರದ ಗಡ್ಡೆಯೊಂದು ಕೆಂಪಗೆ ಕಾಣಿಸುತ್ತಿತ್ತು. ಅದು ಅವರ ಜೀವ ಹಿಂಡುತ್ತಿತ್ತು. ಅಷ್ಟು ಜಳುಕು! ನೋವು! ಮಗ ನರಸಿಂಹಮೂರ್ತಿಗೆ ಏನು ಮಾಡಲೂ ತೋಚದೆ ತಲೆಯ ಮೇಲೆ ಕೈಹೊತ್ತು ಕುಳಿತು ಬಿಟ್ಟಿದ್ದ. ಆ ವೇಳೆಗೆ ಶ್ಯಾಮಣ್ಣನವರೂ ಕಾವೇರಮ್ಮನೂ ಪ್ರವೇಶಿಸಿದರು. ಕಾವೇರಮ್ಮ ತಮ್ಮ ಮೈಲಿಗೆ ಬಟ್ಟೆಯನ್ನು ಬದಲಿಸದೆ ಯಾವುದೋ ಗಿಡಮೂಲಿಕೆಯನ್ನು ತರಿಸಿ, ಅದರ ರಸ ಹಿಂಡಿ, ಪ್ಲೇಗಿನ ಗಡ್ಡೆಗೆ ಪಟ್ಟು ಹಾಕಿದರು. ಬೆಳಗಾಗುವ ತನಕ ಅದಕ್ಕೆ ಶಾಖ ಕೊಡುತ್ತಾ ಕುಳಿತರು. ಬೆಳಿಗ್ಗೆ ಪ್ಲೇಗಿನ ಗಡ್ಡೆ ಹಣ್ಣಾಗಿ ಒಡೆ

ಯಿತು. ತೊಡೆಯಲ್ಲಿ ಒಂದು ಕಡೆ ದ್ವಾರ ಮಾಡಿಕೊಂಡು ಒಳಗಿದ್ದ ಕೀವು ರಕ್ತ ಹೊರಗೆ ಬಂದು ಬಿಟ್ಟಿತು. " ಇನ್ನು ಭಯವಿಲ್ಲ, ಬದುಕಿಕೊಂಡೆ ತಾಯಿ " ಎಂದು ಸಮಾಧಾನಪಟ್ಟರು ಕಾವೇರಮ್ಮ. ಆಗ ತಾನೇ ಭಾಗೀರಥಮ್ಮನಿಗೂ ಎಚ್ಚರವಾಗಿತ್ತು. ಆಕೆಗೆ ಎರಡು ದಿನಗಳಿಂದ ತಾನು ಅನ್ನ ನೀರಿಲ್ಲದೆ, ಪ್ರಜ್ಞಾ ಶೂನ್ಯಳಾಗಿ ಇದ್ದುದು ಒಂದೂ ತಿಳಿಯದು. ಕಾವೇರಮ್ಮನೆಂದಂತೆ ಭಾಗೀ ರಥಮ್ಮ ಬದುಕಿಕೊಂಡಳು. ಸಾವಿನ ದವಡೆಯಲ್ಲಿದ್ದವರು ಯಾರ ಸುಕೃತದ ಪುಣ್ಯದಿಂದಲೋ ಏನೋ ಅಂತೂ ಪಾರಾಗಿದ್ದಳು. ಆಕೆ ಕೆಲವು ವರ್ಷಗಳ ಹಿಂದೆ ಇನಾಕ್ಯುಲೇಷನ್ ಮಾಡಿಸಿಕೊಂಡಿದ್ದುದರಿಂದ ಆಯಸ್ಸು ಗಟ್ಟಿಯಾಗಿ ದ್ದುದರಿಂದ ಉಳಿದುಕೊಂಡಳು. ಆದರೆ ಬಂದ ಮಾರಿ ಬರಿಗೈಯಲ್ಲಿ ಹಿಂದಿರು ಗಲಿಲ್ಲ. ಭಾಗೀರಥಮ್ಮನ ಬಳಿ ತನ್ನ ಆಟ ನಡೆಯದ ದನ್ನು ಕಂಡು ರೋಸಿ, ಕಾವೇರಮ್ಮನ ಮೇಲೆ ಎರಗಿದಳು. ಪ್ಲೇಗಿನ ರೋಗಿಯ ಸೇವೆ ಮಾಡಿದ್ದ ಕಾವೇರಮ್ಮ ಬೇಗನೆ ಅದಕ್ಕೆ ಸುಲಭವಾಗಿ ಬಲಿಯಾದಳು. ಭಾಗೀರಥಮ್ಮ ಎದ್ದು ಓಡಾಡುವಂತಾದ ನಾಲ್ಕನೆಯ ದಿನವೇ ಕಾವೇರಮ್ಮ ಜ್ವರವೆಂದು ಮಲಗಿಬಿಟ್ಟರು. ಮೂರೇ ದಿನಕ್ಕೆ ಅವರ ಮೈಯಲ್ಲಿ ಮೂರು ನಾಲ್ಕು ಕಡೆ ಪ್ಲೇಗಿನ ಗಡ್ಡೆಗಳು ಕಾಣಿಸಿಕೊಂಡವು. ಆಗಲೇ ಕಾವೇರಮ್ಮನಿಗೆ ಸಂಶಯ. ತನ್ನ ಆಯಸ್ಸು ತೀರುತ್ತಾ ಬಂದಿದೆ ಎಂದು. ತಾನು ಪ್ಲೇಗಿನ ದವಡೆಯಿಂದ ಉಳಿಯುವುದಿಲ್ಲವೆಂದು ಆಕೆಗೆ ಖಚಿತವಾಯಿತು. ಮನೆಯವರು ಗಾಬರಿ ಬಿದ್ದಾರೆಂದು ಈ ಬಗ್ಗೆ ಚಕಾರವೆತ್ತಲಿಲ್ಲ. ದೇಹವನ್ನು ನೋವು ಕಿತ್ತು ತಿನ್ನು ತ್ತಿದ್ದರೂ ಅವರು ಮಾತ್ರ ಶಾಂತ ಚಿತ್ತರಾಗಿದ್ದರು. ನಾಲ್ಕನೆಯ ದಿನ—ಇದೊಂದು ದಿನ ಉಳಿಯುವುದು ಹೆಚ್ಚೆಂದು ಅವರಿಗೆ ಅರಿವಾಯಿತು. ಸಣ್ಣಕ್ಕಿದ್ದ ಗಡ್ಡೆಗಳು ತೆಂಗಿನಕಾಯಿ ಗಾತ್ರವಾಗಿದ್ದವು. ಶಾಮಣ್ಣನವರನ್ನು ಬಳಿಗೆ ಕರೆದು ತಮ್ಮ ಕಡೆಯಾಸೆ ತಿಳಿಸಲು ಇಚ್ಛಿಸಿಪಟ್ಟರು. ಅವರ ಒದ್ದಾಟ ವನ್ನು ಕಂಡು ಶ್ಯಾಮಣ್ಣನವರಿಗೆ ಉಸಿರೇ ಆಡಲಿಲ್ಲ. ಓಡಿ ಹೋಗಿ ಕಾಶಿ ಗಂಗೆಯನ್ನು ತಂದು ನಾಲ್ಕು ಉದ್ಧರಣೆ ತೀರ್ಥ ಕುಡಿಸಿದರು. ಆಗ ತೊದ ಲುತ್ತಾ ಮಾತನಾಡುವಂತಾಯಿತು. ಶ್ಯಾಮಣ್ಣನವರು ಶಾರದೆಯನ್ನು ಕರೆ ಸುವ ಆಲೋಚನೆ ಹೇಳಿದಾಗ ಕಾವೇರಮ್ಮನೇ ಬೇಡವೆಂದರು. ಹಸಿಮೈಯ್ಯ ಬಾಣಂತಿಗೆ ಏಕೆ ತೊಂದರೆ ಎಂದೋ ಏನೋ.

ಕಾವೇರಮ್ಮ ಕ್ಷೀಣದನಿಯಲ್ಲಿ "ಇನ್ನು ನಾನು ಬದುಕುವುದಿಲ್ಲ. ಬದುಕುವ ಆಸೆಯೂ ಇಲ್ಲ. ಶಾರದೆ ಇನ್ನು ಅನಾಥ ಹುಡುಗಿ. ಅವಳನ್ನು ಕೈಬಿಡಬೇಡಿ." ಎಂದು ಹೇಳುತ್ತಿದ್ದಂತೆ ಅವರ ಕಣ್ಣಿನ ತುಂಬಾ ಕಣ್ಣೀರು. ಶ್ಯಾಮಣ್ಣನವರಿಗೂ ಅಷ್ಟೆ. ಕಾವೇರಮ್ಮ ಕಣ್ಣೊರೆಸಿಕೊಂಡು ದೈನ್ಯವಾಗಿ ಶ್ಯಾಮಣ್ಣನವರನ್ನು ನೋಡಿ ಸಮಾಧಾನ ಮುಖಮುದ್ರೆಯಲ್ಲಿ ಕಣ್ಣು ಮುಚ್ಚಿದರು.

ರಾತ್ರೆ ಜ್ವರ ಹೆಚ್ಚಾಗಿ ಅವರಿಗೆ ಮೈಮೇಲೆ ಎಚ್ಚರವಿಲ್ಲ. ಆದರೂ ಏನೇನೋ ಕನವರಿಕೆ. "ಶಾರದೆ........ದೇವಸ್ಥಾನ........ಕೃಷ್ಣವೇಣಿ........!" ಅವರು ಆಡುವ ಮಾತು ಯಾರಿಗೂ ತಿಳಿಯದು. ಎಲ್ಲವೂ ಆತ್ಮಗತ. ಒಮ್ಮೆ ಅವರ ಮಾತು ಹಠಾತ್ತಾಗಿ ನಿಂತುಹೋದಾಗ ಶ್ಯಾಮಣ್ಣನವರು ಗಾಬರಿಯಾಗಿ ಬಂದು "ಅತ್ತಿಗೇ" ಎಂದರು. 'ಅತ್ತಿಗೆ' ಎಂದೋ 'ಅಣ್ಣನ' ಬಳಿಗೆ ತೆರಳಿದ್ದರು. "ಒಳ್ಳೆಯ ಜೀವ" ಎನ್ನುವ ಉದ್ಗಾರ ಶ್ಯಾಮಣ್ಣನವರ ಬಾಯಿಯಿಂದ ಹೊರಬಿತ್ತು. ಅದರೊಂದಿಗೆ ನಾಲ್ಕು ತೊಟ್ಟು ಕಣ್ಣಿನ ಹನಿ ಉದುರಿತು.

## ೬

ಕೊನೆಗೂ ಶಾರದ ಪತಿರಾಯನಿಗೆ ಕೊಟ್ಟಿದ್ದ ಮಾತು ಉಳಿಸಿಕೊಂಡಳು. ಕೃಷ್ಣವೇಣಿ ಹುಟ್ಟಿದ ನಾಲ್ಕು ವರ್ಷಕ್ಕೆ ಸರಿಯಾಗಿ, ವಂಶೋದ್ಧಾರಕ ಶ್ರೀಧರನನ್ನು ಹೆತ್ತು ಪತಿರಾಯನಿಗೆ ಅರ್ಪಿಸಿದಳು. ಆದರೆ ಈ ಸಲದ ಹೆರಿಗೆ ಮೊದಲ ಹೆರಿಗೆಯಷ್ಟು ಸುಖಪ್ರಸವವಲ್ಲ. ಕಳೆದ ವರ್ಷವಷ್ಟೇ ಇದೇ ದಿನಗಳಲ್ಲಿ ಅವಳಿಗೆ ಮೈ ಇಳಿದುಹೋಗಿತ್ತು. ಆಗ ತಿಂದ ಅಕಾಲಪ್ರಸವದ ಹೊಡೆತದಿಂದ ಅವಳಿನ್ನೂ ಚೇತರಿಸಿಕೊಳ್ಳುತ್ತಿರುವಾಗಲೇ ಮತ್ತೆ ಗರ್ಭಿಣಿಯಾದಳು. ಈ ಬಾರಿ ಹೆರಿಗೆಯಲ್ಲಿ ಯಾವ ಅಚಾತುರ್ಯ ನಡೆಯದೇ ಇದ್ದರೂ ಶಾರದೆ ಬದುಕುವುದೇ ಇಲ್ಲವೇನೋ ಎಂದು ಶಂಕಿಸಿದ್ದರು. ದೇವರ

ದಯ, ಶಾರದೆ ಮಗು ಉಳಿದುಕೊಂಡರು. ಶಾರದೆ ಮೈಯಲ್ಲಿ ರಕ್ತವಿಲ್ಲದೆ ತುಂಬಾ ನಿತ್ರಾಣಳಾದಳು. ಇದರ ಜೊತೆಗೆ ಮನೋಕ್ಲೇಶ ಬೇರೆ. ಚೊಚ್ಚಲ ಕೂಸು ಹುಟ್ಟಿದಾಗ ಸಾಕ್ಷಾತ್ ಕಾವೇರಮ್ಮ ಬಂದು ಮಗಳ ಬಾಣಂತನಕ್ಕೆ ಹೆಗಲು ಕೊಟ್ಟಿದ್ದರು. ಆಗ ಗಂಡನೂ ಕೂಡ ಅವಳ ವಿಷಯದಲ್ಲಿ ತುಂಬಾ ಆಸ್ಥೆವಹಿಸಿದ್ದ. ಆದರೆ ಎರಡನೆಯ ಹೆರಿಗೆಯಲ್ಲಿ ಗಂಡ ತುಂಬಾ ಅಸಡ್ಡೆ, ನಿರುತ್ಸಾಹ ತೋರಿಸಿದ್ದ. ಕಾರಣವೇನೋ ಅವಳಿಗೆ ತಿಳಿಯದು. ಈ ಕೆಲವು ತಿಂಗಳಿಂದ ರಾಮಚಂದ್ರ ತುಂಬಾ ಬದಲಾಗಿದ್ದ. ಅವನಿಗೆ ಶಾರದೆಯನ್ನು ಕಂಡರೆ ಮೊದಲಿನ ಪ್ರೀತಿಯಿರಲಿಲ್ಲ. ಅವನು ಶಾರದೆಯೊಂದಿಗೆ ಮೊದಲಿನಂತೆ ವಿನೋದವಾಗಿ ಕಾಲಕಳೆಯುತ್ತಿರಲಿಲ್ಲ. ಸಂಜೆಯಾಗುತ್ತಲೂ ಮನೆಗೆ ತಪ್ಪದೆ ಬರುತ್ತಿದ್ದ ಅವನು ಈಗ ಬಂದರೆ ಬಂದ---ಇಲ್ಲದಿದ್ದರೆ ಇಲ್ಲ. ಅನೇಕ ವೇಳೆ ರಾತ್ರಿಯನ್ನು ಸಿನೀಮಾ ನೆಪಹೂಡಿ, ಹೊರಗೆ ಕಳೆದು ಬರುತ್ತಿದ್ದ. ಅವನ ವರ್ತನೆಯಲ್ಲಾದ ಮಾರ್ಪಾಡನ್ನು ಕಂಡ ಶಾರದೆಗೆ ತಿಂದ ಅನ್ನ ಮೈಗೆ ಹತ್ತಲಿಲ್ಲ. ಗಂಡನನ್ನು ಮಾತನಾಡಿಸಲು ಹೋದರೆ ' ಗುರ್ ' ಎಂದು ಅವನು ಅವಳ ಮೈಮೇಲೆ ಬೀಳುತ್ತಿದ್ದ. ಸಣ್ಣಪುಟ್ಟ ಕಾರಣಗಳಿಂದ ಮನಸ್ಸು ಕೆಡಿಸಿಕೊಂಡು ಶಾರದೆಯೊಂದಿಗೆ ದಿನಗಟ್ಟಲೆ ಮಾತೇ ಬಿಟ್ಟುಬಿಡುತ್ತಿದ್ದ. ಶಾರದೆ ಗಂಡನ ಮನಸ್ಸು ತನ್ನ ವಿಷಯದಲ್ಲಿ ಯಾಕೋ ಕೆಟ್ಟಿದೆ ಎಂದು ಕೊಂಡಳು. ಅದಕ್ಕೆ ತಾನೇ ಏನಾದರೂ ಕಾರಣವೋ ಏನೋ ಎಂದು ಕೊಂಡು ತನ್ನ ಎಲ್ಲ ಕೆಲಸಗಳಲ್ಲಿ ಕಣ್ಣಿಟ್ಟು ನೋಡಿಕೊಂಡಳು. ತನ್ನ ಕೆಲಸ ಕಾರ್ಯ ಉಪಚಾರಗಳಲ್ಲಿ ಅವಳಿಗೆ ಯಾವ ಕುಂದೂ ಕಾಣಿಸಲಿಲ್ಲ. ಶಾರದೆ ಸುಮ್ಮನೆ ಯೋಚಿಸಿ, ಯೋಚಿಸಿ ಸಣ್ಣಗಾದಳು.

ಈ ಮಧ್ಯೆ ಹೆರಿಗೆಗೆಂದು ಕೊರಟಿಗೆ ಹೋಗಬೇಕಾಯ್ತು. ಕಳೆದಬಾರಿ ಗಂಡ–ಹೆರಿಗೆ ಬೆಂಗಳೂರಿನಲ್ಲಿಯೇ ನಡೆಯಬೇಕೆಂದು ಆಗ್ರಹ ಮಾಡಿದ್ದ ಗಂಡ– ಈ ಬಾರಿ ಬಲವಂತವಾಗಿ ಹಳ್ಳಿಗೆ ಕಳುಹಿಸಿಕೊಟ್ಟಿದ್ದ. ಶ್ಯಾಮಣ್ಣನವರು ಶಾರದೆಗೆ 'ಬಾ' ಎಂದು ಬರೆದೊಡನೆಯೇ ರಾಮಚಂದ್ರ 'ಹೋಗು' ಎಂದು ಬಿಟ್ಟ. ಆಗಲೇ ಶಾರದೆಗೆ ಅನುಮಾನ ಬಂತು. ತಾನು ಹಳ್ಳಿಗೆ ಹೋಗುವುದಿಲ್ಲವೆಂದು ಹಟ ಮಾಡಲೇ ಎಂದು ಆಲೋಚಿಸಿದಳು. ಇಲ್ಲಿ ತನ್ನ ಅನುಪಾನ ನೋಡಿಕೊಳ್ಳಲು ಯಾರಿದ್ದಾರೆ ? ಗಂಡ ಬೇರೆ ತನ್ನೊಂದಿಗೆ ಅಸಹಕರಿಸು

ತ್ತಿದ್ದಾನೆ. ಅವನಿಗೆ ಮೊದಲಿನ ಹುಮ್ಮಸ್ಸಿಲ್ಲ. ಹೀಗಿರುವಲ್ಲಿ ಹಳ್ಳಿಗೆ ಹೋಗುವುದೇ ಒಳ್ಳೆಯದೆಂದು ಕೊರಟಿಗೆ ಹೋಗಲು ಒಡಂಬಟ್ಟಳು.

ಶ್ಯಾಮಣ್ಣನವರು ಶಾರದೆಯನ್ನು ಊರಿಗೆ ಕರೆದುಕೊಂಡು ಹೋಗಲು ಬಂದರು. ಆ ರಾತ್ರಿ ಗಂಡ ಹೆಂಡಿರಲ್ಲಿ ಸ್ವಾರಸ್ಯ ಸಂಭಾಷಣೆ ನಡೆಯಿತು. ಶಾರದೆ ಗಂಡನನ್ನು ಉದ್ದೇಶಿಸುತ್ತಾ ಹೇಳಿದಳು. " ಯಾಕೋ ಕೆಲವು ದಿನ ಗಳಿಂದ ನೀವು ಒಂದು ತರಹ ಇದ್ದೀರಿ. ಬಹುಶಃ ಹೋದ ವರ್ಷವಾದಂತೆ ಈ ಬಾರಿ ಎಲ್ಲಾದೀತೋ ಎನ್ನುವ ಹೆದರಿಕೆ ಇರಬೇಕು. ನೀವು ಭಯಪಡುವ ಕಾರಣವಿಲ್ಲ. ದೇವರು ಈ ಬಾರಿ ಒಳ್ಳೆಯದನ್ನು ಮಾಡುತ್ತಾನೆ" ಎಂದಳು ರಾಮಚಂದ್ರ ಅನ್ಯಮನಸ್ಕನಾಗಿ ಹೇಳಿದ. " ನನಗೇನೂ ಭಯವಿಲ್ಲ."

" ಹಾಗಾದರೆ ಚಿಂತೆಯ ಕಾರಣ ?"

" ನನಗೆ ಚಿಂತೆಯೂ ಇಲ್ಲ; ಮಣ್ಣೂ ಇಲ್ಲ."

" ನೀವು ಇಲ್ಲ ಎಂದರೆ ನನಗೆ ಗೊತ್ತಾಗದೇ........"

" ನಿನಗೇನು ಗೊತ್ತು ? "

" ಈ ಬಾರಿಯೂ ನೀವೇ ಪಂಥದಲ್ಲಿ ಸೋಲುವಿರೆನ್ನುವ ಭಯ."

" ಎಂದಿಗೂ ಇಲ್ಲ. ಹೆಣ್ಣಾದರೂ ಒಂದೇ ಗಂಡಾದರೂ ಒಂದೇ."

" ಇಲ್ಲ ಈ ಬಾರಿ ನೀವೇ ಗೆಲ್ಲುವಿರಿ! ಹುಟ್ಟುವ ಕೂಸು ಗಂಡು! "

" ನಿನಗೆ ಹೇಗೆ ಗೊತ್ತು ? "

" ಅದೆಲ್ಲಾ ಕೇಳಬೇಡಿ........ಕೂಸಿಗೆ ಏನೆಂದು ಹೆಸರಿಡೋಣ?"

" ನಿನ್ನಿಷ್ಟ ಬಂದ ಹೆಸರಿಡು."

" ಒಹೊ ಹೊ. ನಾನಿಟ್ಟ ಹೆಸರನ್ನು ನೀವು ಒಪ್ಪುವಿರೋ ?"

" ಹೂಂ " ಎಂದ ರಾಮಚಂದ್ರ ಎಲ್ಲೋ ನೋಡುತ್ತ.

" ನಾನು ತಿಮ್ಮಪ್ಪ ಎಂತ ಕರೆದರೆ ?"

" ತಿಮ್ಮಪ್ಪನೇ ಆಗಲಿ "

" ಥೂ. ಶೂದ್ರರಂತೆ, ನಮ್ಮ ಮಗುವಿಗೆ ಆ ಹೆಸರೇನಿ,? "

" ಬೇಡ. ಬೇರೆ ಏನಾದರೂ ಇಡು."

" ನೀವೇ ಹೇಳಿ."

"ನನಗೊಂದೂ ತೋಚಲ್ಲ!" ಗಂಡನ ಮಾತು ಕೇಳಿ ಹೆಂಡತಿಗೆ ಬೇಸರವಾಯಿತು.

"ನನಗೆ ನಿದ್ರೆ ಬರುತ್ತೆ. ಯಾವುದಾದರೂ ಹೆಸರು ಹೇಳಬಾರದೇನ್ರಿ" ಎಂದು ರಾಗವಾಗಿ ಹೇಳಿದಳು ಶಾರದೆ.

ಇಷ್ಟು ಹೊತ್ತಿನ ವರೆಗೂ ರಾಮಚಂದ್ರ ಶಾರದೆಯ ಸರಸ ಕೇಳಲು ಮನಸ್ಸು ಕೊಟ್ಟದ್ದೇ ಹೆಚ್ಚು. ಅವನಿಗೂ ನಿದ್ರೆಗಣ್ಣು. ಹೆಂಡತಿ ವಿನಾ ಕಾರಣವಾಗಿ ತನ್ನನ್ನು ಮಾತಿಗೆಳೆದು ನಿದ್ರಾಭಂಗಗೊಳಿಸುತ್ತಿರುವಳೆಂದು "ನಿದ್ರೆ ಬಂದರೆ ಬಿದ್ಕೊಳ್ಳೋ ಯಾರು ಬೇಡಾಂತ ಅಂದ್ರು. ಸುಮ್ಮನೆ ಆಗ್ಲಿಂದ ಬೇಜಾರುಪಡಿಸ್ತಿದ್ದೀ." ಎಂದು ಗದರಿಕೊಂಡ. ಶಾರದೆಯ ಉಲ್ಲಾಸ ಪ್ರವೃತ್ತಿಗೆ ಈ ಮಾತು ಅಂಬಿನಂತೆ ನಾಟಿತು. ಗಂಡನಿಗೆ ತನ್ನ ಮಾತು ಗಳಿಂದ ಬೇಸರವಾಯಿತೇ ? ಏಕೆ ? ಗಂಡ ತನ್ನೊಡನೆ ನಡೆದುಕೊಳ್ಳುವಾಗ ಹೂವಿಗಿಂತಲೂ ಮೃದುವಾಗಿ ನಯವಾಗಿ, ನಡೆದುಕೊಳ್ಳುತ್ತಿದ್ದ. ಹಿಂದಿನ ದಿನಗಳ ನೆನಪಾಯಿತು. ಶಾರದೆಗೆ ದುಃಖ ಒತ್ತರಿಸಿಕೊಂಡು ಬಂತು, ಗಂಡ ತನ್ನ ಮೇಲೆ ಅನ್ಯಥಾ ಅಸಮಾಧಾನ ಗೊಂಡಿದ್ದಾನೆ, ಎಂದು. ನಾಳೆ ತಾನು ತವರಿಗೆ ಹೋಗಲಿದ್ದರೂ, ಗಂಡನಿಂದ ಒಂದು ಒಳ್ಳೆಯ ಮಾತು ಬೇಡವೇ ? ಎಂದು ಅಳುತ್ತಾ ಮಲಗಿಬಿಟ್ಟಳು. ಅವಳ ಅಶ್ರುಜಲ ತಲೆದಿಂಬನ್ನು ತೋಯಿಸಿ ದುವು. ತನ್ನನ್ನು ಏಕೋ ಗಂಡ ಕಡೆಗಣಿಸುತ್ತಿದ್ದಾನೆ, ಯಾರೋ ತನ್ನಿಂದ ಅವನನ್ನು ದೂರಮಾಡುತ್ತಿದ್ದಾರೆ, ಎಂದು ಅವಳಿಗೆ ಅನಿಸಿತು. ಕೂಡಲೇ ಹಳ್ಳಿಯಲ್ಲಿ ಕಳೆದ ತನ್ನ ಏಕಾಂತವಾಸದ ದಿನಗಳು ನೆನಪಿಗೆ ಬಂದವು........ ಅವಳು ತತ್ತರಿಸಿದಳು........ಗಡಗಡ ನಡುಗಿದಳು........ದೇವರೇ ಆ ದುಃಸ್ಥಿತಿ ಯನ್ನು ಮತ್ತೆ ನನಗೆ ಕೊಡದಿರು ಎಂದು ಪ್ರಾರ್ಥಿಸಿದಳು........ಗಂಡ ಮೊದ ಲಿನಂತೆ ಇಲ್ಲ. ತುಂಬಾ ಬದಲಾಗಿದ್ದಾನೆ........ಅವನ ಬದಲಿಗೆ ಕಾರಣ ರಾರಿರಬಹುದು ?

ಶಾರದೆಯ ಮನಸ್ಸು ಎಲ್ಲೆಲ್ಲೋ ಹರಿಯಿತು.

ಕೆಲವು ತಿಂಗಳ ಹಿಂದೆ ಶ್ಯಾಮಲೆಯ ಗಂಡ ಸೀತಾರಾಮುವಿಗೆ ಕೋಲಾರದಿಂದ ಬೆಂಗಳೂರಿಗೆ ವರ್ಗವಾಗಿತ್ತು. ಅವರು ಶೇಷಾದ್ರಿಪುರದಲ್ಲಿ

ಮನೆ ಮಾಡಿದ್ದರು. ಶ್ಯಾಮಲೆ ಅಕ್ಕನನ್ನು ಮಾತನಾಡಿಸಿಕೊಂಡು ಬರಲು ಆಗಾಗ್ಗೆ ಶಾರದೆಯ ಮನೆಗೆ ಬರುತ್ತಿದ್ದಳು. ಅವಳು ಬಂದಾಗಲೆಲ್ಲಾ ರಾಮ ಚಂದ್ರ ಮಿಠಾಯಿ ಅಂಗಡಿಯ ಮುಂದೆ ಜೊಲ್ಲು ಸುರಿಸುತ್ತಾ ನಿಲ್ಲುವ ಹುಡುಗ ನಂತೆ ಅವಳನ್ನು ನೋಡುತ್ತಾ ನಿಂತುದನ್ನು ಎಷ್ಟೋ ಬಾರಿ ಕಂಡು ಶಾರದೆ ಗಂಡನನ್ನು ಹುಸಿಮುನಿಸಿನಿಂದ ಬೈದಿದ್ದಳು. ಅವಳು ಬಯ್ಯುತ್ತಿದ್ದರೆ ಗಂಡ ನಕ್ಕುಬಿಡುತ್ತಿದ್ದ. ಎಷ್ಟೋ ಬಾರಿ ಶ್ಯಾಮಲೆ ತನ್ನ ಮನೆಗೆ ಬರದಿರುವ ದಿನ, ಅವಳು ಯಾಕೆ ಬರಲಿಲ್ಲ ಎಂದು ಕೆಣಕಿ ಕೇಳಿದ್ದ. ಒಂದು ಬಾರಿ ಎಲ್ಲರೂ ಒಟ್ಟಿಗೆ ಸಿನಿಮಾಕ್ಕೆ ಹೋಗಿದ್ದಾಗ ಚಿತ್ರಪಟ ನೋಡುವ ಬದಲು ಶ್ಯಾಮಲೆ ಯನ್ನೇ ನೋಡುತ್ತಾ ಕುಳಿತುಬಿಟ್ಟಿದ್ದ............ಇವೆಲ್ಲಾ ನೆನಪಿಗೆ ಬಂತು ಶಾರದೆಗೆ............ಇದಕ್ಕೆಲ್ಲಾ ಈಗ ವಿಶೇಷಾರ್ಥ ಕಂಡವು. ಹಾಗಾದರೆ ತನ್ನ ಗಂಡನ ಮನಸ್ಸನ್ನು ಕೆಡಿಸಿಬಿಟ್ಟಿರುವವಳು ಶ್ಯಾಮಲೆ ? ಛೆ! ಎಂತಹ ಅವಿ ಚಾರ ತನ್ನದು! ಅವಳು ತನ್ನ ತಂಗಿ! ಒಪ್ಪವಾಗಿ ಸಂಸಾರ ಮಾಡಿಕೊಂಡು ಇರುವ ಅವಳು ತನ್ನ ಬಾಳನ್ನು ಕೀಳಲು ಬಂದಾಳೇ? ಹಾಗಾದರೆ ಮತ್ತೆ ಯಾರು ? ಬಹುಶಃ ಆ ಮೋಹಿನಿಯೇ ಇರಬೇಕು. ಗಂಡ ತನ್ನನ್ನು ಮೂರು ವರ್ಷಕಾಲ ನಿರ್ಲಕ್ಷಿಸಲು ಆ ರಂಡೆಯೇ ಕಾರಣ. ಆ ಬಗ್ಗೆ ಇದು ತನಕ ಶಾರದೆ ತುಟಿ ಪಿಟಿಕ್ ಅಂದಿರಲಿಲ್ಲ. ಆ ವಿಷಯವನ್ನು ತಿಳಿಯುವುದೂ ಅವಳಿಗೆ ಬೇಕಿರಲಿಲ್ಲ. ಗಂಡ ತಾನಾಗಿ ಆ ಸಂಗತಿ ಹೇಳಿರಲಿಲ್ಲ. ಆ ಕಿರಾತಿ ನಿಯೇ ತನ್ನ ಗಂಡನಿಗೆ ಮತ್ತೆ ಗಂಟುಬಿದ್ದಿರಬಾರದೇಕೆ ? ಶಾರದೆಗೆ ಯಾವ ಸಂಶಯವೂ ಉಳಿಯಲಿಲ್ಲ. ಸ್ತ್ರೀಸಹಜವಾದ ಮತ್ಸರದಿಂದ ಶಾರದೆಯ ಹೃದಯಕ್ಕೆ ಬೆಂಕಿಹತ್ತಿತು. ಆ ಮೋಹಿನಿಯನ್ನು ಮನಸ್ಸಿ ಬಯ್ಯುತ್ತಾ ಗಳ ಗಳನೆ ಅತ್ತಳು. ಮತ್ತೇನು ಮಾಡಿಯಾಳು?

ವಾಸ್ತವಾಂಶವೂ ಹಾಗೆಯೇ ಇತ್ತು. ರಾಮಚಂದ್ರ ಶ್ಯಾಮಲೆಯನ್ನು ಕಂಡಲಾಗಾಯ್ತು ಶಾರದೆಯ ಬಗ್ಗೆ ಅವನಿಗಿದ್ದ ತಾತ್ಸಾರ, ಹೇವರಿಕೆ, ಮತ್ತೆ ಮರುಕೊಳಿಸಿದ್ದವು. ಶ್ಯಾಮಲೆಯ ಕೈಹಿಡಿಯಲು ಹೋಗಿ ಬೆಸ್ತುತಿಂದ ಕಥೆ ಯಲ್ಲಾ ನೆನಪಿಗೆ ಬಂದಿತ್ತು. ಇದಕ್ಕೆ ತಕ್ಕಂತೆ ಶಾರದೆ ಗರ್ಭಿಣಿಯಾಗಿ ರಾಮ ಚಂದ್ರ ಸ್ತ್ರೀಸುಖದಿಂದ ವಂಚಿತನಾಗಿದ್ದ. ಅವನು ಮನೆಯಲ್ಲಿ ಸಿಕ್ಕದ ಸುಖ ವನ್ನು ಹೊರಗಿನಿಂದ ಬಯಸಿದ. ಆಗ ಮೋಹಿನಿಯ ನೆನಪಾಯಿತು. ಮತ್ತೆ

ಅವಳ ಮೋಹ ಪಾಶದಲ್ಲಿ ಸೆರೆಯಾದ. ಇಂತಹವನಿಗೆ ಮನೆ, ಹೆಂಡತಿ ಬೇಡವಾದುದು ಸಹಜವೇ.

ಶಾರದೆ ಬಿಕ್ಕುತ್ತಲೇ ಇದ್ದಳು. ಬಿಕ್ಕುವುದನ್ನು ಕೇಳಿ ರಾಮಚಂದ್ರನಿಗೂ ನಿದ್ರೆ ಬರಲಿಲ್ಲ. ಶಾರದೆ ತನ್ನ ಒಂದು ಒರಟುಮಾತಿನಿಂದ ಇಷ್ಟು ನೋಯುವಳೆಂದು ಅವನು ಎಣಿಸಿರಲಿಲ್ಲ. ಶಾರದೆ ಹೀಗೆ ಅಳುತ್ತಿದ್ದರೆ ತನಗೆ ನಿದ್ರೆ ಹತ್ತುವುದು ಹಾಗಿರಲಿ ಅಕ್ಕಪಕ್ಕದ ಮನೆಯವರಿಗೆ ಎಚ್ಚರವಾಗಬಹುದೆಂದು ಹೆದರಿ ಶಾರದೆಯನ್ನು ಸಮಾಧಾನ ಪಡಿಸಲು ಬಯಸಿದ. ರಾಮಚಂದ್ರ ಕೃತಕ ಪ್ರೀತಿಯನ್ನು ತೋರಿಸುತ್ತಾ, ಶಾರದೆಯ ಬೆನ್ನನ್ನು ಸವರುತ್ತಾ,

"ಚಿನ್ನಾ! ಸಿಟ್ಟು ಬಂತೇ?" ಎಂದ

ಅವನ ಮಾತಿಗೆ ಉತ್ತರವಿಲ್ಲ. ಬಿಕ್ಕುವುದು ಮಾತ್ರ ನಿಲ್ಲಲಿಲ್ಲ. ರಾಮಚಂದ್ರ ಮೆಲ್ಲನೆ ಶಾರದೆಯ ಮುಸುಕನ್ನು ಎಳೆದ. ಶಾರದೆ ಇನ್ನಷ್ಟು ಭದ್ರವಾಗಿ ಮುಸುಕಿಟ್ಟಳು. ಅದನ್ನು ಕಂಡು ರಾಮಚಂದ್ರ ಹೆಂಡತಿಯನ್ನು ಮುಸುಕಿನ ಸಮೇತ ಎತ್ತಿ ತೊಡೆಯ ಮೇಲೆ ಅಂಗತ್ತನಾಗಿ ಮಲಗಿಸಿಕೊಂಡ.

ಹೆಂಡತಿ "ಹೋಗ್ರಿ ನನ್ನನ್ನು ಮುಟ್ಟಬೇಡಿ" ಎಂದು ಮುನಿಸಿನಿಂದ ಹೇಳಿದಳು.

"ಆಗಲಿ ನಿನ್ನನ್ನು ಮುಟ್ಟುವುದಿಲ್ಲ. ಮೊದಲು ನಿನ್ನ ಮುಸುಕು ತೆಗೆ"

ಹೆಂಡತಿ ಮುಸುಕು ತೆಗೆಯಲಿಲ್ಲ.

"ನನ್ನ ಮಾತು ಕೇಳೇ................"

"ಊಹೂಂ. ಕೇಳೊಲ್ಲ!" ಈ ವೇಳೆಗೆ ಅಳು ನಿಂತಿತ್ತು.

"ಕೇಳುವುದಿಲ್ಲವೆ ? ಹೋಗಲಿ ಬಿಡು, ಅಳುವುದನ್ನು ನಿಲ್ಲಿಸಿದೆಯಲ್ಲ ನನಗಷ್ಟೇ ಸಾಕು. ಪಕ್ಕದ ಮನೆಯವರನ್ನೆಲ್ಲಾ ಎಬ್ಬಿಸದೆ ಮಲಗಿದರೆ ನನಗೆ ವರಕೊಟ್ಟ ಹಾಗಾಗುತ್ತೆ."

"ವರವಂತೆ ವರ! ಅನ್ನುವಾಗ ಅಂದುಬಿಟ್ಟು, ಈಗ ತಪ್ಪಾಯಿತು ಅಂತ ಕೇಳಿಕೊಳ್ಳೋಕೆ ಬಂದಿದ್ದಾರೆ! ಭಂಡರು ನೀವು!"

"ನೀನು ಇನ್ನಷ್ಟು ತೆಗಳು. ನನಗೆ ಸಂತೋಷವೇ" ಎನ್ನುತ್ತಾ ಶಾರದೆಯ ಮುಸುಕನ್ನು ಮೆಲ್ಲಗೆ ತೆಗೆದ.

"ಅಲ್ವೆ, ನಾನು ಏನೋ ಒಂದು ಮಾತು ಅಪ್ಪಿತಪ್ಪಿ ಒರಟಾಗಿ ಹೇಳಿದಾಕ್ಷಣಕ್ಕೆ ನೀನು ಇಷ್ಟು ರಂಪ ಮಾಡಬೇಕೇ ?"

"ಇವತ್ತಿಂದಕ್ಕೇನಲ್ಲಿ ನಾನು ಅತ್ತಿರೋದು. ನಿಮಗೆ ಈಚೀಚಿಗೆ ನನ್ನ ಮೇಲೆ ಪ್ರೀತೀನೇ ಇಲ್ಲ. ನಾನು ಮಾಡುವ ಕೆಲಸಗಳೊಂದೂ ನಿಮ್ಮ ಮನಸ್ಸಿಗೆ ಹಿಡಿಸೋದೇ ಇಲ್ಲ. ನಿಮ್ಮ ಒಳ ಆಸೆ ಏನಿದೆಯೋ ಹೇಳಿಬಿಡಿ. ನಾನು ತವರಿಗೆ ಹೋಗ್ತಿದೇನೆ. ಅಲ್ಲಿ ಇದ್ದು ಬಿಡ್ತೇನೆ. ನೀವು ಇಲ್ಲಿ ನಿಮಗೆ ಬೇಕಾದವರ ಜತಗೆ ಹಾಯಾಗಿ ಇರಬಹುದು."

"ಏನೇ ಇದು ನಿನ್ನ ಮಾತು ?"

"ಅಷ್ಟಲ್ಲದೇ ಏನು ? ಅವಳು ಯಾವಳೋ ಮೋಹಿನಿ ಮತ್ತೆ ನಿಮ್ಮ ಮೇಲೆ............" ಮಾತು ಪೂರೈಸುವ ಮುನ್ನವೇ ಇಂತಹ ಮಾತು ಆಡಬಾರದೆಂದು ಗಂಡ ಗದರಿಕೊಂಡ.

"ಅದಕ್ಕೆ ಅನ್ನೋದು ಹೆಂಗಸಿನ ತಲೇಲಿ ಬುದ್ಧಿ ಇಲ್ಲ ಅಂತ. ನಾನು ಆಫೀಸಿನ ಕೆಲಸದ ಅವಾಂತರದಲ್ಲಿ ಮನೆ ಕಡೆ ಕೊಂಚ ಗಮನ ಕೊಡದೆ ಹೋದರೆ ನೀನು ಏನೇನೋ ತಲೇಲಿ ತುಂಬಿಕೊಳ್ಳಬೇಕೇ ? ಮೊದಲೇ ಹೀಗೆಂದು ಹೇಳಿದ್ರೆ ನಾನು ನಿನ್ನ ಮುಂದೆ 'ತಾರಮ್ಮಯ್ಯಾ' ಆಡ್ತಾ ಕುಳಿತ್ಕೊಳ್ತಿದ್ದೆನಲ್ಲಾ."

"ನನ್ನ ಮುಂದೆ ನೀವು ಯಾಕೆ ಆಡ್ತೀರಿ........ಎಲ್ಲಾ ಅವಳ ಮುಂದೆ"

ಗಂಡನಿಗೆ ತನ್ನ ಮಾತಿನಲ್ಲಿ ಹೆಂಡತಿಗೆ ನಂಬಿಕೆ ಬಾರದುದನ್ನು ಕಂಡು "ಸಾಕು........ಬಾಯಿಮುಚ್ಚು. ಕೊಂಚ ಸಲುಗೆ ಕೊಟ್ಟರೆ ತಲೆಯ ಮೇಲೆ ಏರಲಿಕ್ಕೆ ಬರ್ತೀಯಲ್ಲ. ಯಾವಳೇ ಅವಳು ನೀನು ಹೇಳುವ ಮೋಹಿನಿ ?" ತನಗೇನೂ ತಿಳಿಯದಂತೆ ಕೃತಕಕೋಪ ನಟಿಸುತ್ತಾ ಗಂಡ ಕೇಳಿದ.

"ಅವಳು ಯಾರೂ ಅಲ್ಲ. ನನ್ನ ಸವತಿ" ಎಂದಳು ಶಾರದ.

ಈ ಮಾತನ್ನು ಕೇಳಿ ರಾಮಚಂದ್ರ ಕಿಡಿಕಿಡಿಯಾದ. ಅವನಿಗೆ ಸೈರಣೆ ತಪ್ಪಿತು. ಎತ್ತಿ ಕಪಾಳಕ್ಕೆ ಒಂದು ಬಿಗಿಯಲೇ ಎಂದುಕೊಂಡ. ಆದರೆ ಮಧ್ಯರಾತ್ರಿಯ ಸಮಯ. ಶಾರದೆ ಗಲಭೆಮಾಡಿದರೆ ತನ್ನ ಮಾನಹೋಗುವುದೆಂದು ಕೋಪವನ್ನು ನುಂಗಿಕೊಂಡು ಸುಮ್ಮನಾದ. ಹೆಂಡತಿಯ ಬಾಯನ್ನು ಮುಚ್ಚಿಸಲು ಈಗ ಬೇರೆ ಬಣ್ಣ ತಳೆದ.

" ಅಲ್ವೇ–ಹಿಂದೆಂದೋ ಯಾವನೋ ನನಗಾಗದವನು ಹಾಗೆ ಗಾಳಿ ಸುದ್ದಿ ಹರಡಿದ್ರೆ ಅದೆಲ್ಲ ನಿಜ ಅಂತ ನಂಬ್ಕೊಂಡು ಹೀಗೆ ಮಾಡಬೇಕೇನೇ. ನನ್ನಲ್ಲಿ ಅಂತಹ ಚಾಳಿ ಇದ್ದಿದ್ದರೆ ನಿನಗೆ ಈ ನಾಲ್ಕು ವರ್ಷಗಳಿಂದ ಗೊತ್ತಾಗದೇ ಇರುತ್ತಿತ್ತೇ ? ನನ್ನ ಗುಣಾನ ನೀನು ನೋಡ್ತಾ ಇದ್ರೂ ಇದ್ರೂ ಇನ್ನೂ ನನ್ನಮೇಲೆ ಅಪನಂಬಿಕೆಯೇ ? " ಎಂದ.

ಈ ಮಾತು ಕೇಳಿ ಶಾರದೆಯ ಅಂತಃಕರಣ ಕರಗಿತು. ರಾಮಚಂದ್ರ ಇದುವರೆಗೂ ಶಾರದೆಯನ್ನು ಚೆನ್ನಾಗಿಯೇ ನೋಡಿಕೊಂಡು ಬಂದಿದ್ದ. ಆದರೆ ಕೆಲವು ತಿಂಗಳಿಂದ ಕೊಂಚ ಅಸಡ್ಡೆ ತೋರಿಸಿದ್ದ. ಅವನೆಂದಂತೆ ಆಫೀಸಿನ ಕೆಲಸದಿಂದಲೋ ಏನೋ. ತಾನು ಗಂಡನ ಮೇಲೆ ವೃಥಾ ಸಂಶಯ ತಾಳಿದ್ದಕ್ಕೆ ಅವಳಿಗೆ ವಿಷಾದವಾಯಿತು. ತಾನು ಗಂಡನನ್ನು ಜರೆದು ದೂಷಿಸಿದ್ದು ತಪ್ಪೆಂದು ಅನಿಸಿ, ತಪ್ಪಿಗೆ ತಕ್ಕ ಶಿಕ್ಷೆಯನ್ನು ಅಪ್ಪಲು ಗಂಡನ ಕೊರಳಿಗೆ ತನ್ನ ಕೈಗಳ ಮಾಲೆಹಾಕಿ ಅವನ ಒಣಗಿದ ತುಟಿಗೆ ತನ್ನ ತುಟಿಯನ್ನು ಒತ್ತಿ " ನನ್ನನ್ನು ಕ್ಷಮಿಸಿ " ಎಂದು ಪಿಸುಗುಟ್ಟಿದಳು. ರಾಮಚಂದ್ರನಿಗೆ ತನ್ನ ದೇವಿ ತನ್ನ ಮಾತನ್ನು ನಂಬಿ ಒಲಿದುದಕ್ಕಾಗಿ ಸಂತೋಷವಾಯಿತು. ಹೆಂಡತಿ ಇತ್ತ ಒಲವಿನ ಕಾಣಿಕೆಯಿಂದ ಪುಳಕಗೊಂಡು ಅವನು ಹೆಂಡತಿಯನ್ನು ಬಗೆ ಬಗೆಯಾಗಿ ಮುದ್ದು ಗೈಯ್ಯುತ್ತಾ ಅವಳ ನಳಿತೋಳ್ಗಳಲ್ಲಿ ಬಂಧಿತನಾಗಿ ಆ ರಾತ್ರಿಯನ್ನು ಕಳೆದ !

ಬೆಳಗಾಗುತ್ತಲೇ ಶಾರದೆ ಶ್ಯಾಮಣ್ಣನವರೊಂದಿಗೆ ಊರಿಗೆ ಪ್ರಯಾಣ ಸನ್ನದ್ಧಳಾದಳು.

" ನೀವೆಂದು ಬರುವಿರಿ ? "

" ನೀನು ಬಾಯೆಂದು ಬರೆದೊಡನೆಯೇ " ಎಂದ ರಾಮಚಂದ್ರ ಹೆಂಡತಿಯ ಪ್ರಶ್ನೆಗೆ !

ಶಾರದೆ ಪೈಬಿಟ್ಟು ಕಳೆದಳು ಮಗ ಹುಟ್ಟಿದೊಡನೆಯೇ ರಾಮಚಂದ್ರನಿಗೆ ಓಲೆಹೋಯಿತು. ಆ ಕಾಗದದ ಅಡಿಯಲ್ಲಿ ಶಾರದೆ ಬರೆದಳು : "ಶ್ರೀಧರ ನಿಮ್ಮನ್ನು ನೋಡಬೇಕೆಂದಿದ್ದಾನೆ. ಒಮ್ಮೆ ಬಂದು ಹೋಗಬಾರದೇ?" ಇದು ಶ್ರೀಧರನ ಆಸೆಯಲ್ಲ—ಶಾರದೆಯ ಆಸೆ ! ಶಾರದೆ ತವರಿಗೆ ಬಂದು ಎರಡು ತಿಂಗಳಾಗಿದ್ದರೂ ರಾಮಚಂದ್ರ ಒಮ್ಮೆಯಾದರೂ ಆ ಕಡೆಗೆ ಬಂದಿರ

ಲಿಲ್ಲ. ಶಾರದೆ ನಾಲ್ಕೈದು ಪತ್ರ ಬರೆದಿದ್ದರೂ ಅವನು ಏನು ಕಾರಣವೋ ಏನೋ ಒಂದಕ್ಕೂ ಸಕಾಲದಲ್ಲಿ ಉತ್ತರ ಬರೆದಿರಲಿಲ್ಲ! ಶಾರದೆಯ ಕಾಗದ ಗಳೆಲ್ಲಕ್ಕೂ ರಾಮಚಂದ್ರನಿಂದ ಒಂದೇ ಒಂದು ಕಾರ್ಡು ಬಂದಿತ್ತು. ಅದರಲ್ಲಿ ಒಂದೇ ಒಂದು ವಾಕ್ಯ " ನನಗೆ ಬರಲು ರಜವಿಲ್ಲ. ಮೈಕಳೆದುದಕ್ಕೆ ಕಾಗದಬರಿ "

ಈಗ ಶಾರದೆ ಮೈಕಳೆದು ಮಗುವಿಗೆ ಒಂದು ತಿಂಗಳೂ ಆಗಿತ್ತು. ಈಗ ಲಾದರೂ ಒಮ್ಮೆ ಬರಲು ಏನು ಅಡ್ಡಿ. ತನ್ನ ಕಾಗದಕ್ಕೆ ಉತ್ತರ ಇಂದು ಬಂದೀತು, ನಾಳೆ ಬಂದೀತು ಎಂದು ಕಾದು ಕಾದು ಬೇಸತ್ತು ಶಾರದೆಯೇ ಮತ್ತೊಂದು ಕಾಗದ ಬರೆದಳು.

" ನನಗೆ ಈಗ ಬಹಳ ಕೆಲಸ ಬಿದ್ದಿದೆ. ಅದು ಮುಗಿದ ಮೇಲೆ ಸಾಧ್ಯ ವಾದರೆ ಬರುತ್ತೇನೆ." ಎಂದು ಗಂಡ ಉತ್ತರಿಸಿದ.

ಗಂಡನ ಕಾಗದ ಕಂಡು ಶಾರದೆಗೆ ಅಳು ಬರುವಂತಾಯಿತು. ಅವಳಿಗೆ ತಾನು ಹಳ್ಳಿಗೆ ಹೊರಟು ಬಂದ ಹಿಂದಣರಾತ್ರೆ ಗಂಡ ತನ್ನೊಡನೆ ಹೇಳಿದ ಮಾತುಗಳೆಲ್ಲ ನೆನಪಿಗೆ ಬಂದವು. ಹಾಗಾದರೆ ಅವರಿಗೆ ತನ್ನ ಮೇಲೆ ಇಷ್ಟೇಯೇ ಪ್ರೀತಿ? ಅವಳ ಮುಗ್ಧ ಮನಸ್ಸಿಗೆ ಸಂಶಯದ ಮೋಡ ಮುಸು ಕಿತು. ಗಂಡ ರಜವಿಲ್ಲದೆ ಬರಲಾಗಲಿಲ್ಲವೆಂದು ಬರೆದಿದ್ದರೂ, ಇದು ಸುಳ್ಳೆ ಆಗಿರಬಾರದೇಕೆ? ಎಂದು ಅವಳ ಮನಸ್ಸು ಪ್ರಶ್ನಿಸಿತು. ರಜದ ಪ್ರಶ್ನೆ ದೊಡ್ಡದಲ್ಲ. ಬರಲು ಮನಸ್ಸಿದ್ದರೆ ಶನಿವಾರ ಭಾನುವಾರಗಳಲ್ಲಿ ಬಂದು ಕ್ಷಣಕಾಲ ಇದ್ದು ಹೋಗಬಹುದಿತ್ತು. ಆದರೆ ಗಂಡನಿಗೆ ಬರಲು ಮನಸ್ಸಿಲ್ಲ. ತನ್ನನ್ನು ನೋಡಲು ಮನಸ್ಸಿಲ್ಲದಿದ್ದರೂ ಮಗುವನ್ನಾದರೂ ನೋಡಲು ಬರ ಬಾರದೇ? ತಾನು ತಪ್ಪುಮಾಡಿರಬಹುದು; ಪಾಪ ಶ್ರೀಧರ ಏನು ತಪ್ಪು ಮಾಡಿದ್ದಾನೆ?

ಶಾರದೆ ಈ ಒಗಟನ್ನು ಬಿಡಿಸಲಾರದೆ ಅನೇಕ ದಿನ ನಿದ್ರಾಹಾರಗಳನ್ನು ಬಿಟ್ಟು ಯೋಚಿಸುತ್ತಾ ಕುಳಿತಳು. ಕಡೆಗೊಂದು ದಿನ ಗಂಡನ ವಿಷಯ ಗಳನ್ನು ತಿಳಿದುಕೊಳ್ಳಲು ಮನಸ್ಸಾಗಿ ಬೆಂಗಳೂರಿನಲ್ಲೇ ಇದ್ದ ಶ್ಯಾಮಲೆಗೆ ಕಾಗದ ಬರೆದಳು. ಯಾವ ವಿಷಯವನ್ನೂ ಒಡೆದು ಹೇಳದೆ ತನ್ನ ಮನೆಯ ಕಡೆ ಒಮ್ಮೆ ಹೋಗಿಬರಲು ಅವಳಲ್ಲಿ ಬಿನ್ನವಿಸಿದ್ದಳು.

ಈ ಪತ್ರ ಶ್ಯಾಮಲೆಯ ಕೈಸೇರುವ ವೇಳೆಗೆ ರಾಮಚಂದ್ರನ ಬಗ್ಗೆ ಅನೇಕ ವರದಿಗಳು ಸೀತಾರಾಮುವಿನ ಮೂಲಕ ಶ್ಯಾಮಲೆಯ ಕಿವಿ ಸೇರಿದ್ದವು. ಅವಳು ಶಾರದೆಗಾಗಿ ತುಂಬಾ ಕಳವಳಗೊಂಡಿದ್ದಳು. ಶಾರದೆಯನ್ನು ಎಂತಹ ನಾಯಿಯ ಕೊರಳಿಗೆ ಕಟ್ಟಿದರು ಎಂದು ಅವಳಿಗಾಗಿ ವ್ಯಥಿಸಿದ್ದಳು. ರಾಮಚಂದ್ರನ ಮೊದಲಿನ ಚಾಳಿ--ಈಗ ನಾಯಿಯ ಬಾಲವಾಗಿತ್ತು. ಇದನ್ನು ತಿಳಿಸಿದರೆ ಶಾರದೆ ಎಲ್ಲಿ ನೊಂದುಕೊಳ್ಳುವಳೋ ಎಂದು ಯಾವುದನ್ನೂ ತಾನಾಗಿ ತಿಳಿಸಲು ಹೋಗಲಿಲ್ಲ ಶ್ಯಾಮಲೆ. ಶಾರದೆಯಿಂದ ಪತ್ರ ಬಂದ ಮೇಲೆ ಸುಮ್ಮನಿರಲು ಅವಳಿಗೆ ಮನಸ್ಸಾಗಲಿಲ್ಲ. ಗಂಡನಿಗೆ ಶಾರದೆಯ ಆಸೆಯನ್ನು ತಿಳಿಸಿ, ಒಮ್ಮೆ ರಾಮಚಂದ್ರನನ್ನು ಕಂಡುಬರಲು ಕಳುಹಿಸಿ ಕೊಟ್ಟಳು.

ಸೀತಾರಾಮು ರಾಮಚಂದ್ರನ ಮನೆಗೆ ಬರುವ ವೇಳೆಗೆ ಸಂಜೆ ಏಳು ಗಂಟೆಯಾಗಿತ್ತು. ಅವನ ಮನೆಯಲ್ಲಿ ಯಾರೋ ಇದ್ದಂತಿತ್ತು. ಬಹುಶಃ ರಾಮಚಂದ್ರನೇ ಇರಬೇಕೆಂದು " ರಾಮಚಂದ್ರರಾವ್, ರಾಮಚಂದ್ರರಾವ್ !" ಎಂದು ಕೂಗಿದ.

ಸುಮಾರು ಇಪ್ಪತ್ತು ವರ್ಷದ ತರುಣಿಯೊಬ್ಬಳು ಹೊರಗೆ ಬಂದು, " ಅವರು ಮನೆಯಲ್ಲಿಲ್ಲ " ಎಂದಳು.

ಆಕೆ ನೋಡುವುದಕ್ಕೆ ತುಂಬಾ ಚೆಲುವೆ. ಬಳುಕುವ ಲತೆಯಂತಹ ಶರೀರ. ಮುಖದಲ್ಲಿ ತೇಜಸ್ವಿಯಾದ ಕಣ್ಣುಗಳು. ನೀಳವಾದ ಮೂಗು, ತುಂಬಿದ ಗಲ್ಲ, ಕೆನ್ನೆ, ಚೆಂಗುಲಾಬಿಯ ತುಟಿ, ಕಾಡಿಗೆ ಹಚ್ಚಿದ ಕಣ್ರೆವೆಗಳು ಜೀರಂಗಿಯಂತೆ ಕಾಣಿಸುತ್ತಿದ್ದವು. ಮಾಟವಾಗಿ ಕತ್ತರಿಸಿ ಕಪ್ಪು ಹಚ್ಚಿದ್ದ ಹುಬ್ಬುಗಳು, ಅವುಗಳ ಮಧ್ಯೆ ಸಣ್ಣ ಕುಂಕುಮದ ಬೊಟ್ಟು—ಅವಳ ಚಂದ್ರ ವದನಕ್ಕೆ ಇನ್ನಿಷ್ಟು ಕಳೆ ಕೊಟ್ಟಿದ್ದುವು. ಸೀತಾರಾಮು ಕ್ಷಣಕಾಲ ದಂಗಾಗಿ ನೋಡುತ್ತ ನಿಂತ. ಈಕೆ ಯಾರಿರಬಹುದು ? ಇದು ರಾಮಚಂದ್ರನ ಮನೆಯೋ ಅಥವಾ ಬೇರೊಬ್ಬರ ಮನೆಯೋ ? ರಾಮಚಂದ್ರನ ಮನೆಯಾದರೆ ಈ ಹೆಂಗಸು ಯಾರು ? ಎಂದು ಯೋಚಿಸುತ್ತಾ ನಿಂತ ಸೀತಾರಾಮುವನ್ನು ಕಂಡು ಆಕೆ ಮುಗುಳು ನಗುತ್ತಾ, " ಅವರು ಇನ್ನೂ ಮನೆಗೆ ಬಂದಿಲ್ಲ " ಎಂದಳು.

" ಯಾವಾಗ ಬರುತ್ತಾರೆ? "

" ಇನ್ನೇನು ಬರುವ ಹೊತ್ತು " ಎಂದಳು ಆಕೆ.

ಸರಿ. ಬಂದ ಕೆಲಸವಾಯಿತೆಂದು ಹಿಂದಿರುಗುತ್ತಿದ್ದಾಗ ದಾರಿಯಲ್ಲಿಯೇ ರಾಮಚಂದ್ರನ ಸವಾರಿ ಚಿತ್ತೈಸುತ್ತಿರುವುದು ಕಾಣಿಸಿತು.

" ನಮಸ್ಕಾರ. ರಾಮಚಂದ್ರರಾಯರಿಗೆ " ಎಂದು ಸೀತಾರಾಮುವೇ ಹೇಳಿ ಅವನ ಗಮನ ಸೆಳೆಯದಿದ್ದರೆ, ರಾಮಚಂದ್ರ ಅವನನ್ನು ಗಮನಿಸುತ್ತಿದ್ದನೋ ಇಲ್ಲವೋ ಹೇಳುವುದು ಕಷ್ಟ.

" ಓಹೋ! ನೀವು....ಇದೇನು ಅಪರೂಪವಾಗಿ ಇಲ್ಲಿ? ಮನೆಯಲ್ಲಿ ಎಲ್ಲ ಆರೋಗ್ಯ ತಾನೇ? " ಎಂದ ರಾಮಚಂದ್ರ ಸಲಿಗೆಯ ದನಿಯಲ್ಲಿ.

" ಏನೂ ಇಲ್ಲ. ಹೀಗೇ ನಿಮ್ಮ ಮನೆಗೆ ಬಂದಿದ್ದೆ. ನೀವು ಇರಲಿಲ್ಲ "

" ಏನು ವಿಶೇಷ? "

" ಹಳ್ಳಿಯಿಂದ ಕಾಗದ ಬಂದಿತ್ತು—ಮನೆಯ ಕಡೆ ಹೋಗಿ ಬನ್ನಿ ಅಂತ. "

ಈ ಮಾತು ಕೇಳಿ ನೊಣ ಕಡಿದಂತಾಯಿತು ರಾಮಚಂದ್ರನಿಗೆ.

" ಯಾರು? ಶಾರದೆ ಬರೆದಿದ್ದಳೋ? "

" ಹ್ಞೂಂ. ಅವರಿಗೆ ನಿಮ್ಮದೇ ಯೋಚನೆ. ನಿಮ್ಮ ಊಟ ತಿಂಡಿ ಹೇಗೋ ಅಂತ. ಅವರು ನಾಲ್ಕು ಕಾಗದ ಬರೆದಿದ್ದರೂ ನೀವು ಒಂದಕ್ಕೂ ಜವಾಬು ಬರೆಯಲಿಲ್ಲವಂತೆ. ನಿಮ್ಮ ಮೈಯಲ್ಲಿ ನೆಟ್ಟಗಿದೆಯೋ ಇಲ್ಲವೋ ಎಂದು ಗಾಬರಿಗೊಂಡಿದ್ದಾರೆ. "

ಈ ಮಾತುಗಳೆಲ್ಲ ರಾಮಚಂದ್ರನಿಗೆ ಮುಳ್ಳುಮುಳ್ಳಾಯಿತು. ತನ್ನ ಹೆಂಡತಿ ತನ್ನ ಮೇಲೆ ಬೇಹು ಕಾಯಲು ಇವರನ್ನು ಬಿಟ್ಟಿದ್ದಾಳೆಯೇ ಎಂದು ಶಾರದೆಯ ಮೇಲೆ ಮನಸ್ಸಿನಲ್ಲೇ ವಿಷ ಕಾರಿದ.

" ಇನ್ನೇನು ಬರೆದಿದ್ದಾಳೆ? "

" ನೀವು ಒಂದೆರಡು ತಿಂಗಳಿಂದ ಆಕಡೆ ಬಂದೇ ಇಲ್ಲವಂತೆ. ಒಮ್ಮೆ ಒಂದು ದಿನದ ಮಟ್ಟಿಗಾದರೂ ಊರಿಗೆ ಹೋಗಿ ಬರಬೇಕಂತೆ. "

" ಊರಿಗೆ ಹೋಗಿ ಬರಲು ನನಗೂ ಆಸೆಯಿದೆ. ಆದರೆ ನನಗೆ ರಜವೇ ಇಲ್ಲ. ಅಲ್ಲದೆ ಮನೆಗೆ ಬೀಗ ಹಾಕಿಕೊಂಡು ಹೋಗಲು ನನಗೆ ಇಚ್ಛೆ

ಇಲ್ಲ. ಮೊನ್ನೆ ನಮ್ಮ ಪಕ್ಕದ ಮನೆಯಲ್ಲಿ ಕಳ್ಳತನವಾಯಿತು. ”

“ ಯಾಕೆ. ಮನೆಯಲ್ಲಿ ಯಾರೋ ಹೆಂಗಸರಿದ್ದಾರಲ್ಲ. ಅವರ ಮೇಲೆ ಮನೆಯನ್ನು ಬಿಟ್ಟು ಹೋಗಬಹುದಲ್ಲ ? ” ಎಂದ ಏನೂ ತಿಳಿಯದವನಂತೆ ಸೀತಾರಾಮು.

ರಾಮಚಂದ್ರ ಈ ಮಾತು ಕೇಳಿ ನಾಲಿಗೆ ಕಚ್ಚಿಕೊಂಡ. ಮುಖ ಬಿಳುಚಿಕೊಂಡಿತು. ಬಾಯಿ ಒಣಗಿತು. ಹಾಗಾದರೆ ಪ್ರೋಹಿಸಿಯನ್ನು ಇವರು ನೋಡಿ ಬಿಟ್ಟಿದ್ದಾರೆ, ಶಾರದೆಗೂ ಸುದ್ದಿ ಹೋಗುತ್ತದೆ, ಎಂದು ಹೌಹಾರಿದ. ಸೀತಾರಾಮುವಿನ ತಿಳುವಳಿಕೆಗೆ ತಪ್ಪು ಹಾದಿ ಹಿಡಿಸಲು “ ಓ ! ಅವರೇ ? ಅವರು ಯಾರು ಅಂತೀರಿ, ನಮ್ಮ ‘ ಫ್ರೆಂಡ್ಸ್ ವೈಫ್ಸ್ ’ ಪಾಪ ನನ್ನ ಫ್ರೆಂಡ್‌ಗೆ ಮನೆ ಕೊಟ್ಟಿದ್ದೋರು ಇದ್ದಕ್ಕಿದ್ದಂತೆ ಓಡಿಸಿಬಿಟ್ಟರಂತೆ. ತಕ್ಷಣಕ್ಕೆ ಎಲ್ಲೂ ಮನೆ ಸಿಕ್ಕದೆ ಹೋದುದರಿಂದ—ನನ್ನ ಮನೆ ಹೇಗೂ ಖಾಲಿಯಿತ್ತಲ್ಲಾ ಅಂತ ಇಲ್ಲೇ ಬಂದಿರಲು ಹೇಳಿದೆ. ಬಂದಿದ್ದಾರೆ. ಅವರು ಇರುವುದರಿಂದ ನನ್ನ ಊಟ ತಿಂಡಿಗೆ ಎಷ್ಟೋ ಮೇಲು. ನನಗೆ ಸ್ವಂತ ಮನೆಯ ಹಾಗೇ ಇದೆ. ಯಾವುದಕ್ಕೂ ಕೊರತೆಯಿಲ್ಲ. ”

“ ಒಳ್ಳೆಯ ಕೆಲಸ ಮಾಡಿದಿರಿ ಬಿಡಿ. ” ಎಂದು ಒಂದೇ ಒಂದು ಮಾತು ಆಡಿದ ಸೀತಾರಾಮು. ತನಗೆ ರಾಮಚಂದ್ರ ಸುಳ್ಳು ಹೇಳುತ್ತಿರುವನೆಂದು ಆವನಿಗೆ ಗೊತ್ತಿತ್ತು. ಅವನು ತನ್ನಲ್ಲೇ ನಕ್ಕ. ಈ ಭಂಡ ಬಾಳು ಯಾಕೆ ಅಂತ.

ಸೀತಾರಾಮುವನ್ನು ಕಂಡ ಮೇಲೆ ರಾಮಚಂಪ್ರನ ಉತ್ಸಾಹ ಸರಕ್ಕನೆ ಇಳಿದು ಹೋಯಿತು. ತನ್ನ ಮನೆಯಲ್ಲಿ ಬೇರೊಬ್ಬ ಹೆಂಗಸು ಬಂದಿರುವುದನ್ನು ಕೇಳಿ ಶಾರದೆ ರಂಪವೆಬ್ಬಿಸುತ್ತಾಳೆ. ಅವಳನ್ನು ಸಮಾಧಾನ ಪಡಿಸುವುದು ಹೇಗೆ ಎಂದು ಅಲೋಚಿಸುತ್ತಾ ಮನೆಗೆ ಬಂದ.

ಶ್ಯಾಮಲೆ ಗಂಡನಿಂದ ಸುದ್ದಿ ತಿಳಿದು ಅದೇ ದಿನ ಶಾರದೆಗೆ ಕಾಗದ ಹಾಕಿದಳು. “ ನಿನ್ನ ಗಂಡ ತಿದ್ದಲಾಗದಷ್ಟು ಕೆಟ್ಟಿರುವ ” ನೆಂದು ಬರೆದು ಅಕ್ಕನ ಮನಸ್ಸನ್ನು ನೋಯಿಸಲು ಮನಸ್ಸು ಬಾರದೆ, “ ಮನೆಯನ್ನು ಯಾರೋ ಸ್ನೇಹಿತರಿಗೆ ಬಾಡಿಗೆಗೆ ಕೊಟ್ಟಿದ್ದಾರಂತೆ. ಆದಷ್ಟು ಬೇಗ ಇಲ್ಲಿಗೆ ಹೊರಟು ಬರುವುದು ಲೇಸು ” ಎಂದು ತಿಳಿಸಿದಳು.

ಈ ಪತ್ರವನ್ನು ಶ್ಯಾಮಣ್ಣನವರು ಓದಿಕೊಂಡು ಶ್ಯಾಮಲೆಯನ್ನು ತುಂಬಾ ಬೈದರು. "ಇಲ್ಲಿ ಹಾಯಾಗಿ ಇರುವ ಬಾಣಂತಿಯನ್ನು ಬೇಗ ಹೊರಟು ಬಾ ಅಂತ ಬರೆದಿದ್ದಾಳೆ. ಅಲ್ಲಿ ಏನು ಕೊಳ್ಳೆ ಹೋಗುತ್ತೋ ಕಾಣೆ" ಎಂದು ಗದರಿಸಿದರು.

ಶಾರದೆ ಮಾರೋಲೆ ಬರೆದು, "ಮನೆಯಲ್ಲಿ ಬಂದಿರುವ ಸ್ನೇಹಿತರು ಗಂಡಸರೋ ? ಹೆಂಗಸರೋ ?" ಎಂದು ಪ್ರಶ್ನಿಸಿದಳು.

ಅದರ ಬೆನ್ನಿಗೇ ದೊಡ್ಡ ಕಾಗದ ಬಂತು. ಅದರಲ್ಲಿ ಶ್ಯಾಮಲೆ ಯಾವುದನ್ನೂ ಬಚ್ಚಿಡದೇ ಎಲ್ಲವನ್ನೂ ಸವಿಸ್ತಾರವಾಗಿ ತಿಳಿಸಿ ಬರೆದು, "ನೀನು ಸುಖಪಡೋಕ್ಕೆ ಹುಟ್ಟಿಲ್ಲ ಶಾರದ!" ಎಂದು ಮುಗಿಸಿದ್ದಳು.

ಈ ಕಾಗದ ಕಂಡು ಹಳ್ಳಿಯ ವಾತಾವರಣ ತುಂಬಾ ಕದಡಿತು. ಯಾರಿಗೂ ಮನಶ್ಶಾಂತಿಯಿಲ್ಲ. ಭಾಗೀರಥಮ್ಮ ಕಾಗದ ಓದಿಸಿ ಕೇಳಿ, "ಏಳೇಳು ಜನ್ಮಕ್ಕೂ ಪಾಪಿ ಹೆಣ್ಣಿನ ಜನ್ಮ ಬೇಡ ತಾಯಿ" ಎಂದು ದೇವರನ್ನು ಪ್ರಾರ್ಥಿಸಿದರು.

"ನಾವು ಇಷ್ಟು ಮಾಡಿದ್ದು ವ್ಯರ್ಥವಾಯಿತು. ಕರೀ ನಾಯಿಯನ್ನು ಬಿಳೀದು ಮಾಡಲು ಸಾಧ್ಯವೇ ? ಅವನೊಂದು ಮಾನ ಮರ್ಯಾದೆ ಇಲ್ಲದ ನಾಯಿ" ಎಂದು ರೇಗಾಡಿದ ನರಸಿಂಹಮೂರ್ತಿ.

"ಅವರಿಗೆ ಕೊಡುವ ಬದಲು ನನ್ನನ್ನು ಕೆರೆಗೋ ಭಾವಿಗೋ ನೂಕಿದ್ದರೆ ಚೆನ್ನಾಗಿತ್ತು" ಎಂದು ದುಃಖದ ಭರದಲ್ಲಿ ಆಡಿದಳು ಶಾರದೆ.

ಶ್ಯಾಮಣ್ಣನವರು ಮಾತ್ರ ಮೌನದ ಮೂರ್ತಿಯಾಗಿ ಕುಳಿತು ಬಿಟ್ಟರು.

ಒಂದೆರಡು ದಿನದ ನಂತರ ಶಾರದೆ ಭಾವೋದ್ವಿಗ್ನತೆಯ ಪ್ರಭಾವದಿಂದ ಹೊರಗೆ ಬಂದು ತನ್ನಲ್ಲೇ ಹೇಳಿಕೊಂಡಳು— "ಆಗಲಿ. ನಾನು ಹೆಣ್ಣಾಗಿ ಹುಟ್ಟಿದ್ದಕ್ಕೆ ಅವರಿಗೆ ಬುದ್ಧಿ ಕಲಿಸದೇ ಹೋಗ್ತೇನೇನೋ—ನೋಡ್ತೇನೆ."

ಈ ಮಾತಿನ ಪ್ರಥಮ ನಿದರ್ಶನವಾಗಿ ಗಂಡನಿಗೆ ಕಾಗದ ಬರೆದಳು; "ನನಗೆ ಇಲ್ಲಿ ಇದ್ದು ಬೇಸರವಾಗಿದೆ. ಇನ್ನು ಕೆಲವು ದಿನಗಳಲ್ಲಿ ಬೆಂಗಳೂರಿಗೆ ಬಂದು ಬಿಡುತ್ತೇನೆ."

ಗಂಡ ಉತ್ತರ ಬರೆದ—

" ನೀನು ಇನ್ನೂ ಒಂದೆರಡು ತಿಂಗಳು ಅಲ್ಲೇ ಇದ್ದು ಆರೈಕೆ ಮಾಡಿಕೊಂಡು ಬಾ. "

ಅದಕ್ಕೆ ಮಾರೋಲೆ ಬಂತು.

" ತವರುಮನೆಯವರಿಗೆ ಎಷ್ಟು ದಿನವೆಂದು ತೊಂದರೆ ಕೊಡುವುದು? ಇಲ್ಲಿ ಮಾಡಿಕೊಳ್ಳುವ ಆರೈಕೆ ಅಲ್ಲೇ ಮಾಡಿಕೊಂಡರಾಗುತ್ತೆ. ನಾನು ಅಲ್ಲಿಗೆ ಬರುತ್ತೇನೆ. "

" ಬರುವುದಾದರೆ ಮೊದಲು ಕಾಗದ ಬರೆದು ತಿಳಿಸು—ಮನೆಯನ್ನು ಬಿಡುವು ಮಾಡಿಟ್ಟಿರುತ್ತೇನೆ. "

" ಪಾಪ, ನಿಮ್ಮ ಸ್ನೇಹಿತರಿಗೆ ಬೇರೆ ಮನೆ ಸಿಗುವ ತನಕ, ನಮ್ಮ ಮನೆಯಲ್ಲಿಯೇ ಇರಲಿ. ಅವರನ್ನು ನಾನೂ ಒಮ್ಮೆ ನೋಡಬಾರದೇ.... "

ರಾಮಚಂದ್ರನಿಗೆ ಈ ಪತ್ರ ನುಂಗಲಾರದ ತುತ್ತಾಯಿತು. ಪತ್ರ ಬರೆದಂತೆ ಶಾರದೆ ಬಂದು ಬಿಡುವುದೂ ಹೆಚ್ಚಲ್ಲ ಎಂದುಕೊಂಡು ಆ ದಿನವೆಲ್ಲಾ ಅಲೆದಲೆದು ಗುಟ್ಟಹಳ್ಳಿಯಲ್ಲಿ ಮೋಹಿನಿಗೆ ಒಂದು ಬಾಡಿಗೆ ಮನೆ ಹುಡುಕಿ ಕೊಟ್ಟು ತನ್ನ ಮನೆಯನ್ನು ತೆರವು ಮಾಡಿಟ್ಟ. ಮಾರನೆಯ ದಿನವೇ ಶಾರದೆ ನರಸಿಂಹ ಮೂರ್ತಿಯನ್ನು ಹಿಂದಿಟ್ಟುಕೊಂಡು ಬೆಂಗಳೂರಿಗೆ ಬಂದೇ ಬಿಟ್ಟಳು.

## ೭

ಶಾರದೆ ಮನೆಗೆ ಬಂದಾಗ ರಾಮಚಂದ್ರ ಆ ದಿನ ಭಾನುವಾರವಾದ್ದರಿಂದ ಮನೆಯಲ್ಲಿಯೇ ಇದ್ದ. ಶಾರದೆ ತನಗೆ ಕಾಗದ ಬರೆಯದೆ ಹಠಾತ್ತಾಗಿ ಬಂದುದರಿಂದ ಮೊದಲು ರಾಮಚಂದ್ರನಿಗೆ ವಿಸ್ಮಯವಾದರೂ ಅನಂತರ ಕೋಪ ಬಂತು. ಹೆಂಡತಿಯಾದವಳಿಗೆ ಇಷ್ಟು ಸೊಕ್ಕೇ. ಇಷ್ಟು ದುರಹಂಕಾರವೇ ಎಂದು ಕುಳಿತಲ್ಲೇ ಕೆಂಗಣ್ಣು ಬಿಟ್ಟ. ಆದರೆ ಶಾರದೆಯ ಜತೆಯಲ್ಲಿ ನರಸಿಂಹಮೂರ್ತಿಯೂ, ಇದ್ದುದನ್ನು ಕಂಡು ತನ್ನ ಅಸಮಾಧಾನವನ್ನು

ಹೊರಗೆ ತೋರಗೊಡದೆ, ಬಂದವರನ್ನು ಒಣ ಉಪಚಾರದೊಡನೆ ಬರಮಾಡಿ ಕೊಂಡ.

ಶಾರದೆ ಮನೆಗೆ ಬಂದವಳೇ ಮನೆಯ ಜಡತಿಗೆ ಮೊದಲಿಟ್ಟಳು. ತಾನು ಹಾಕಿದ್ದ ಉಪ್ಪಿನಕಾಯಿ ಜಾಡಿ ಖಾಲಿಯಾಗಿತ್ತು. ಹಪ್ಪಳ ಸಂಡಿಗೆಯ ಹೆಸರೇ ಇರಲಿಲ್ಲ. ಮೆಣಸಿನ ಪುಡಿ ಚಟ್ಟಣಿಯ ಪುಡಿಗಳು ಇದ್ದಲ್ಲಿಯೇ ಮಾಯವಾಗಿದ್ದುವು. ಶಾರದ ಈ ಬಗ್ಗೆ ತುಟಿ ಎರಡು ಮಾಡಲಿಲ್ಲ. ಅನಂತರ ಕೋಣೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದಳು. ತನ್ನ ಬಟ್ಟೆ, ಬರೆ, ಬೆಳ್ಳಿಯ ಪಾತ್ರೆಗಳನ್ನು ನೋಡಿಕೊಂಡಳು. ನರಸಿಂಹಮೂರ್ತಿಯ ಮದುವೆ ಯಲ್ಲಿ ಕೊಟ್ಟಿದ್ದ ಜರತಾರಿ ಸೀರೆ, ನಾಲ್ಕೈದು ಕುಪ್ಪಸದ ಖಣಗಳು, ಒಂದು ಬೆಳ್ಳಿಯ ಪನ್ನೀರುದಾನಿ, ಬೆಳ್ಳಿಯ ಕಪ್ಪು ಮತ್ತು ಸಾಸರ್, ಎಲ್ಲ ಕಾಣೆಯಾ ಗಿದ್ದವು. ಬಟ್ಟೆಬರೆಯಿಟ್ಟಿದ್ದ ಟ್ರಂಕಿನ ಕೀಲಿಯನ್ನು ಯಾರೋ ಮುರಿದು ಹಾಕಿದ್ದರು. ಅದರಲ್ಲಿದ್ದ ಸಾಮಾನೆಲ್ಲಾ ಅಸ್ತವ್ಯಸ್ತವಾಗಿತ್ತು. ಇದೆಲ್ಲವೂ ಆ ಮೋಹಿನಿಯ ಕೆಲಸವೇ ಎಂದು ಶಾರದೆಗೆ ಸಿಟ್ಟುಬಂತು. ಅದನ್ನು ತಡೆ ಯಲಾರದೆ, “ ಅದು ಯಾವ ಕಳ್ಳ ರಂಡೆಗೆ ನೀವು ಮನೆಯನ್ನು ಬಾಡಿಗೆಗೆ ಕೊಟ್ಟಿದ್ರಿ ? ಹಪ್ಪಳ ಸಂಡಿಗೆ ಮುಗಿಸಿರೋದಲ್ಲದೆ ನನ್ನ ಸೀರೆ ಕುಪ್ಪಸಗಳನ್ನು ಕದ್ದಿರೋ ಆ ‘ ಭೋಸು.... ’ ಯಾರು ? ” ಎಂದು ಕೆಂಗಣ್ಣು ಬಿಡುತ್ತಾ ಕೇಳಿದಳು.

“ ಇಲ್ಲಿ ಬಂದು ಇದ್ದೋರು ಹೆಂಗಸಲ್ಲ—ಗಂಡಸು ! ”

“ ಸಾಕು ಸುಮ್ಮನಿರೀಂದ್ರೆ. ಸುಳ್ಳು ಹೇಳೋಕೆ ನಾಚಿಕೆ ಆಗೋಲ್ಲವೇ ? ಎಳೇ ಮಕ್ಕಳಿಗೆ ಹೇಳೋ ಹಾಗೆ ಹೇಳೋಕ್ಕೆ ಬರ್‍ತೀರಲ್ಲ ”

“ ಶಾರದ, ನನ್ನ ಮಾತು ಅಂದ್ರೆ ನಿನಗೆ ಯಾಕೆ ಅಷ್ಟು ಅಗೌರವ ? ”

“ ಅಗೌರವ ! ಗೌರವ ನಿಮಗೆ ಇದ್ದರೆ ತಾನೇ ನಿಮ್ಮ ಮಾತಿಗೂ ಗೌರವ—ಆದರೆ ನೀವು ಮಾನಗೆಟ್ಟವರು.... ”

“ ಏನಂದೆ ” ಎಂದು ಗರ್ಜಿಸಿದ ರಾಮಚಂದ್ರ.

“ ಹೊಸದಾಗಿ ಅನ್ನುವುದು ಏನೂ ಇಲ್ಲ. ಮಾನಮರ್ಯಾದೆ ಇದ್ದವ ರಾಗಿದ್ರೆ ಸೂಳೇನ್ನ ತಂದು ಮನೆಯಲ್ಲಿಟ್ಟುಕೊಳ್ತಿರಲಿಲ್ಲ ! ”

" ಏ! ಸಾಕು! ಬಾಯಿ ಮುಚ್ಚು. ಇನ್ನೊಂದು ಮಾತು ಆಡಿದ್ರೆ ಸೀಳಿ ಬಿಡ್ತೀನಿ!"

" ಸೀಳಿ ಬಿಡ್ತೀರಿ? ನಾನು ಕಟ್ಟಿಗೆ ತುಂಡಲ್ಲ ಸೀಳಿ ಬಿಸಾಡೋಕೆ"

" ಬೇಡ—ಬೇಡ. ನನ್ನ ರೇಗಿಸಬೇಡ"

" ಪಾಪ ನನ್ನ ಮಾತು ನಿಮಗೆ ರೇಗಿಸುತ್ತೇನೋ"

" ಇಲ್ಲ. ಇನ್ನೇನು ಮಾಡುತ್ತೆ"

" ಅಯ್ಯೋ—ಪಾಪ!"

" ಎಷ್ಟು ಹೆಚ್ಚಿಕೊಂಡಿದ್ದೀಯೋ ನೀನು ಹಳ್ಳಿಗೆ ಹೋಗಿ!"

" ನೀವು ತಾನೇ ಇನ್ನೇನು? ನನ್ನ ಊರಿಗೆ ಕಳುಹಿಸಿ, ಸೂಳೇನ ತಂದು ಮನೇಲಿ ಇಟ್ಟುಕೊಳ್ಳಬೇಕಾದ್ರೆ—ಎಷ್ಟು ಹೆಚ್ಚಿಕೊಂಡಿರಬೇಕು ನೀವು!"

" ಬಾಯಿ ಮುಚ್ಚೇ ಸಾಕು"

" ಮೊದಲು ನೀವು ಮುಚ್ಚಿದರೆ ಅನಂತರ ನಾನು"

ಈ ಮಾತು ಕೇಳಿ ರಾಮಚಂದ್ರನಿಗೆ ಮಾತೇ ಹೊರಡಲಿಲ್ಲ. ಶಾರದೆ ಕೆಣಕಿದ ಸಿಂಹಿಣಿಯಾಗಿರುವಳೆಂದು ಅಂದು ರಾಮಚಂದ್ರ ತಣ್ಣಗಾದ. ಶಾರದೆ ಎಂದೂ ರಾಮಚಂದ್ರನಿಗೆ ಹೀಗೆ ಎದುರು ವಾದಿಸಿರಲಿಲ್ಲ.

" ನನ್ನ ಸೀರೆ ಕುಪ್ಪಸವೇನಾಯಿತು?" ಎಂದಳು ಶಾರದೆ.

" ಯಾರು ಬಲ್ಲರು?"

" ನೀವು ಬಲ್ಲಿರಿ—ಆ ನಿಮ್ಮ ಸೂಳೆ ಬಲ್ಲಳು."

" ಶಾರದ, ನೀನು ಬಾಯಿ ತುಂಬಾ ಹರಿಯಬಿಡುತ್ತೀದಿ. ಬೇಡ! ಬೇಡ!!" ಎಂದ ರಾಮಚಂದ್ರ ಕೋಪದಿಂದ ನಡುಗುತ್ತಾ.

" ನನ್ನ ಜರತಾರಿ ಸೀರೆ ಏನಾಯ್ತು ಹೇಳಿ."

" ನನಗೇನು ಗೊತ್ತು. ನಾನೇನು ಉಡುತ್ತೀನೆಯೇ?"

" ಉಡುವುದಿಲ್ಲ. ಉಡುವುದೊಂದು ಬಾಕಿ."

ಈ ಮಾತು ಕೇಳಿ ಮರ್ಮಘಾತವಾಯಿತು ರಾಮಚಂದ್ರನಿಗೆ.

" ಏನು ಹಳ್ಳಿಗೆ ಹೋಗಿ ಬಹಳ ತಯಾರಾಗಿದ್ದೀ!"

" ನೀವು ಸಿಕ್ಕಿದೋರನ್ನೆಲ್ಲಾ ತಂದು ಮನೇಲಿ ಇಟ್ಟುಕೊಳ್ಳಿ. ನಾನು ತಯಾರೂ ಆಗ್ತೀನಿ. ತರಾಟಿಗೂ ತಗೋತೀನಿ "

" ಏಯ್ ! ನನ್ನ ಸುದ್ದಿ ನಿನಗೇಕೆ ? ನಾನು ನೂರು ಜನಾನ ಮನೇಲಿ ತಂದಿಟ್ಟುಕೋತೀನೆ. "

" ಹೊಸದಾಗಿ ತಂದಿಟ್ಟುಕೋಬೇಕೇ ? ಇದು ವರೆಗೆ ಇದ್ದೋಳು ಯಾರು ? "

" ಅದೆಲ್ಲಾ ಕೇಳೋಕೆ ನೀನು ಯಾರು ? "

" ನಾನು ನಿಮ್ಮ ಹೆಂಡತಿ. ಧರ್ಮಸಾಕ್ಷಿಯಾಗಿ ಮದುವೆಯಾದ ಹೆಂಡತಿ. ಈಗ ಹೇಳಿ ಇಲ್ಲಿದ್ದೋಳು ಯಾರು ? "

ರಾಮಚಂದ್ರ ಮಾತನಾಡಲಿಲ್ಲ—ಪಿಳಪಿಳನೆ ನೋಡುತ್ತಿದ್ದ.

" ನೀವು ಹೇಳುವುದಿಲ್ಲ. ನಾನು ಹೇಳುತ್ತೇನೆ ಕೇಳಿ. ಇಲ್ಲಿ ಇದ್ದವಳು ಮೋಹಿನಿ—ಆ ನಿಮ್ಮ ಸೂಳೆ—ನಮ್ಮ ಸಂಸಾರ ಕಿತ್ತವಳು ಹಾದರಗಿತ್ತಿ ! "

ರಾಮಚಂದ್ರನಿಗೆ ಈ ಮಾತು ಕೇಳಿ ಕೋಪ ಮಿತಿಮೀರಿತು. ಅವನು ಎದ್ದು ಬಂದು ಶಾರದೆಯ ಕೆನ್ನೆಗೆ ಚಟಾರನೆ ಹೊಡೆದ. ಬೆಳ್ಳಗಿದ್ದ ಬಾಣಂತಿಯ ಕೆನ್ನೆ ಕ್ಷಣಮಾತ್ರದಲ್ಲಿ ಕಾದ ಕಬ್ಬಿಣದಂತೆ ಕೆಂಪಾಯಿತು. ಅಷ್ಟೇ ಶಾಖ, ಅಷ್ಟೇ ಉರಿ. ರಾಮಚಂದ್ರನ ಐದು ಬೆರಳುಗಳ ಮುದ್ರೆ ಕೆನ್ನೆಯ ಮೇಲೆ ಕಾಣಿಸಿಕೊಂಡಿತು. ಪೆಟ್ಟು ಬಿದ್ದರೂ ಶಾರದೆ ಅಚಲಿತಳಾಗದೆ, ಅರಚಿದಳು. " ನೂರು ಬಾರಿ ಹೇಳುವೆ—ನಿಮ್ಮ ಸೂಳೆ !....ಸೂಳೆ !!.... ಸೂಳೆ.... !!! "

ರಾಮಚಂದ್ರ ಮೈಮೇಲೆ ಎಚ್ಚರವಿಲ್ಲದವನಂತೆ ಎತ್ತಿದ ಕೈಯನ್ನು ಇಳಿಸದೆ ಹೊಡೆದ.

ಒಂದು........ಎರಡು........ಮೂರು........ಹತ್ತು

" ಹೊಡೆಯಿರಿ. ನಿಮ್ಮಿಂದಿನ್ನೇನಾದೀತು ? ಹೊಡೆದು ಕೊಂದು ಬಿಡಿ ! ನನ್ನ ಕಣ್ಣು ಮುಚ್ಚಿಸಿ ಆ ಶಾಕಿನಿಯೊಂದಿಗೆ ನೆಮ್ಮದಿಯಾಗಿರಿ ! ಹೊಡೆಯಿರಿ !........ ತೃಪ್ತಿಯಾಗುವ ತನಕ ಹೊಡೆಯಿರಿ " ಎಂದು ಸೂರು ಹಾರುವಂತೆ ಕಿರುಚಿದಳು ಶಾರದೆ.

ಶಾರದೆಯ ಕೂಗನ್ನು ಕೇಳಿ ಹೊರಗೆ ಅಡ್ಡಾಡಿ ಬರಲು ಹೋಗಿದ್ದ ನರಸಿಂಹಮೂರ್ತಿ ಓಡಿ ಬಂದ. ಶಾರದೆಯ ಮೇಲೆ ಕೈಮಾಡುತ್ತಿದ್ದ ರಾಮುಚಂದ್ರನನ್ನು ಕಂಡು ಅವನ ರಕ್ತ ಕುದಿಯಿತು. ಅವನು ರಾಮುಚಂದ್ರ 'ಭಾವ' ನೆನ್ನುವುದನ್ನು ಮರೆತು ಅವನ ಶರಟನ್ನು ಹಿಡಿದುಕೊಂಡು ಕೆನ್ನೆಗೆ ಒಂದು ಬಿಗಿದ.

"ಅಯ್ಯೋ—ಸತ್ತೇ........" ಎನ್ನುತ್ತಾ ಅನೀರಿಕ್ಷಿತವಾಗಿ ಬಿದ್ದ ಹೊಡೆತದಿಂದ ನೆಲಕ್ಕೆ ಕುಸಿದು ಬಿದ್ದ ರಾಮುಚಂದ್ರ.

" ಪಾಪಿ, ಬಾಣಂತಿಯನ್ನು ಕೊಲೆ ಮಾಡುತ್ತಿದ್ದೆಯಲ್ಲೋ ಎನ್ನುತ್ತಾ ನೆಲದಲ್ಲಿ ಬಿದ್ದಿದ್ದ ರಾಮುಚಂದ್ರನನ್ನು ಅಲ್ಲೇ ಹೊಸೆದು ಹಾಕಲು ಬಲಗಾಲನ್ನು ಎತ್ತಿದ. ಅದನ್ನು ಕಂಡು ಶಾರದೆ, ತಾನು ಏಟುಗಳಿಂದ ಸೋತಿದ್ದರೂ, ಓಡಿಬಂದು ಅವನ ಕಾಲು ಹಿಡಿದುಕೊಂಡು "ಬೇಡ—ಅಣ್ಣಾ—ಅವರನ್ನು ಕೊಲ್ಲಬೇಡ" ಎಂದಳು. ಅವಳು ಕಾಲು ಹಿಡಿದುಕೊಂಡ ರಭಸಕ್ಕೆ ಅವಳ ಕೈ ಬಳೆಗಳು ಒಡೆದು ಹೋಗಿ ಮುಂಗೈಗೆ ಬಳೆಗಳ ಚೂರು ತಾಕಿ ರಕ್ತ ಸೋರಿತು. ಶಾರದೆ ಅಣ್ಣನ ಕಾಲು ಹಿಡಿಯದೆ ಇದ್ದರೆ ರಾಮುಚಂದ್ರನ ಕಾಲೋ ಕೈಯ್ಯೋ ಊನವಾಗುತ್ತಿತ್ತು. ಅಪಾಯ ಸ್ಥಳಕ್ಕೆ ಬಿದ್ದಿದ್ದರೆ ಪ್ರಾಣಾಪಾಯವೇ ಒದಗುತ್ತಿತ್ತೋ ಏನೋ. ಅಂತೂ ಶಾರದೆಯ ಕೃಪೆಯಿಂದ ರಾಮುಚಂದ್ರ ಬಚಾವಾದ.

"ಥೂ ಗುಲಾಮ. ನೀನು ವಿದ್ಯೆಕಲಿತು ಹಾಳಾದೆ. ಹೆಣ್ಣು ಹೆಂಗಸಿನ ಮೇಲೆ ಅದೂ ಹಸಿಯ ಬಾಣಂತಿಯ ಮೇಲೇ ನಿನ್ನ ಶೌರ್ಯ ಪ್ರದರ್ಶನ! ಹೇಡಿ! ನಿನ್ನ ಪೌರುಷಕ್ಕೆ ಬೆಂಕಿಹಾಕಿದರು. ನಿನ್ನ ಮುಖದರ್ಶನ ಮಾಡಬಾರದು...." ಎಂದೆನ್ನುತ್ತಾ ಗೂಟಕ್ಕೆ ಹಾಕಿದ್ದ ಕೋಟಿಗೆ ಕೈಹಾಕಿ, " ಶಾರದ, ನನ್ನೊಂದಿಗೆ ಊರಿಗೆ ಹೊರಟು ಬರುತ್ತೀಯೋ—ಇಲ್ಲಾ ಈ ಅವಿವೇಕಿಯ ಕೈಯಲ್ಲಿ ಏಟು ತಿಂದು ಇಲ್ಲೇ ಸಾಯುತ್ತಿಯೋ" ಎಂದ.

" ಇಲ್ಲ ಅಣ್ಣಾ, ನಾನು ಇಲ್ಲೇ ಸಾಯುತ್ತೀನಿ. ಹೇಗೂ ನನ್ನ ಅರ್ಧ ಜೀವ ತೆಗೆದಿದ್ದಾರೆ. ಅದನ್ನು ಪೂರ್ತಿ ಮಾಡಿಬಿಡಲಿ" ಎಂದು ಏದುತ್ತಾ ಹೇಳಿ, ನಿಶ್ಶಕ್ತಿಯಿಂದ ಬಳಲಿ ನೆಲದ ಮೇಲೆ ಅಂಗಾತವಾಗಿ ಎಚ್ಚರತಪ್ಪಿ ಮಲಗಿಬಿಟ್ಟಳು. ನರಸಿಂಹಮೂರ್ತಿ ಓಡಿಹೋಗಿ ಗಾಡಿತಂದು, ಅದರಲ್ಲಿ ತಂಗಿಯನ್ನು

ಮಲಗಿಸಿ, ವಿಕ್ಟೋರಿಯಾ ಆಸ್ಪತ್ರೆಗೆ ಕರೆದುಕೊಂಡು ಹೋದ. ರಾಮಚಂದ್ರ ಗುಮ್ಮಣ್ಣನಂತೆ ಅವರ ಹಿಂದೆ ಹೋದ. ಅವನಿಗೆ ತನ್ನ ಕಾರ್ಯಕ್ಕಾಗಿ ತುಂಬಾ ಪಶ್ಚಾತ್ತಾಪವಾಗಿತ್ತು. ತಾನು ದುಡುಕಿ ಕೈಮಾಡಬಾರದಿತ್ತು ಎಂದು ತನ್ನನ್ನೇ ಹಳಿದುಕೊಂಡ. ಅವನಿಗೆ ತನ್ನ ತಪ್ಪು ಅರಿವಾಗಿದ್ದುದರಿಂದ ನರಸಿಂಹ ಮೂರ್ತಿ ಹೀನಾಯವಾಗಿ ಬಯ್ಯುತ್ತಿದ್ದರೂ ಮಂಕನಂತೆ ಕೇಳುತ್ತಿದ್ದ. ಆಗ ಅವನು ಹೇಡಿಯೇ ಆಗಿದ್ದ. ನರಸಿಂಹಮೂರ್ತಿಯು ಒಂದೇ ಒಂದು ಹೊಡೆತ ತಲೆಗೇರಿದ್ದ ಸಿಟ್ಟನ್ನು ಕೆಳಕ್ಕೆ ಇಳಿಸಿತ್ತು. ಈಗ ಅವನಲ್ಲಿ ಕೋಪದ ಕಿಡಿ ಆರಿ ಪಶ್ಚಾತ್ತಾಪ ಚಿಲುಮೆಯೊಡೆದಿತ್ತು.

ಆಸ್ಪತ್ರೆಯನ್ನು ಸೇರಿದಾಗಲೇ ಶಾರದೆಗೆ ತಿಳಿವು—ತಾನೆಲ್ಲಿರುವೆನೆಂಬ ಅರಿವು. ಆಗ ಅವಳಿಗೆ ಶ್ರೀಧರನ ನೆನಪಾಯಿತು. "ಮಗು—ಮಗು" ಎಂದು ಒಂದೇ ಸಮನೆ ಚೀರಲಿದಳು. ಗಂಡಹೆಂಡಿರ ಜಗಳದಲ್ಲಿ ತೊಟ್ಟಿಲಲ್ಲಿ ಮಲಗಿದ್ದ ಶ್ರೀಧರನ ಕಡೆ ಯಾರ ಗಮನವೂ ಹೋಗಿರಲಿಲ್ಲ. ರಾಮಚಂದ್ರ ಓಡಿಹೋಗಿ ಮಗುವನ್ನು ಕರೆತಂದು ತಾಯಿಯ ಬಳಿಬಿಟ್ಟ. ನಡೆದ ಕಥೆಯನ್ನು ಕೇಳಿ ಡಾಕ್ಟರು ರಾಮಚಂದ್ರನನ್ನು, "ನೀನು ಮನುಷ್ಯನೋ ಮೃಗವೋ" ಎಂದು ಬೈದರು. ರಾಮಚಂದ್ರ ಅಪರಾಧಿಯಂತೆ ತಲೆತಗ್ಗಿಸಿಕೊಂಡಿದ್ದ.

ಅಂತೂ ದೇವರ ದಯದಿಂದ ಶಾರದೆ ಒಂದು ಗಂಡಾಂತರದಿಂದ ಪಾರಾದಳು. ಒಂದೆರಡು ತಿಂಗಳಲ್ಲಿ ಅವಳು ಮೊದಲಿನಂತೆ ಆದಳು. ಆಸ್ಪತ್ರೆಯಿಂದ ಮನೆಗೆ ಬಂದ ಮೇಲೆ ರಾಮಚಂದ್ರ ಹೆಂಡತಿಯನ್ನು ತುಂಬಾ ವಿಶ್ವಾಸದಿಂದ ನಡೆಸಿಕೊಂಡಿದ್ದ. ತನ್ನ ಕೆಲಸಗಳನೆಲ್ಲಾ ತಾನೇ ಮಾಡಿಕೊಂಡು ಶಾರದೆಯ ಕೆಲಸಗಳಲ್ಲೂ ನೆರವಾಗುತ್ತಿದ್ದ. ಆದರೂ ಶಾರದೆಯ ಮುರಿದ ಮನಸ್ಸು ಮುಕ್ಕಾಗಿಯೇ ಉಳಿಯಿತು. ಗಂಡನೆಂಬ ಅಭಿಮಾನ ಅವಳಲ್ಲಿ ಹಿಂಗಿಹೋಯಿತು. ಅವನೊಬ್ಬ ಪಶುವೆಂದೇ ಅವಳು ತೀರ್ಮಾನಿಸಿಬಿಟ್ಟಿದ್ದಳು. ಅವನು ತನ್ನನ್ನು ಇಷ್ಟು ಪ್ರೀತಿಯಿಂದ ಓಲೈಸುವುದು ತನ್ನ ಮೇಲಿನ ಪ್ರೀತಿ, ಅನುರಾಗದಿಂದಲ್ಲ–ತನ್ನಿಂದ ದೊರೆಯಬಹುದಾದ ವಿಷಯ ಸುಖಕ್ಕಾಗಿ ಎಂದು ಅರ್ಥಮಾಡಿಕೊಂಡಳು. ಹಿಂದೆ ಅವರ ದಾಂಪತ್ಯದ ಮೊದಲದಿನಗಳಲ್ಲಿ ಪಾಪಭೀತನಾಗಿದ್ದ ಗಂಡನನ್ನು ಅವಳು ನಿರ್ವ್ಯಾಜ ಪ್ರೇಮದಿಂದ ಪುನೀತ

ನನ್ನಾಗಿ ಮಾಡಿ ತನ್ನ ಸರ್ವಸ್ವವನ್ನೂ ಅವನಿಗೆ ಧಾರೆ ಎರೆದಿದ್ದಳು. ಆದರೆ ಇಂದು ಅವನ ಬಗ್ಗೆ ಮೂಡಿದ ಜಿಗುಪ್ಸೆಯಿಂದ ಅವಳು ದೂರ ಸರಿಯುವಾಗ ಶೀಲರಹಿತನಾದ ಅವನಿಗೆ ಅವಳ ಹಿಂದೆ ಒಂದು ಹೆಜ್ಜೆ ಬರಲು ಆಗದಾಯಿತು. ಅವನು ಈಗ ನೈತಿಕಶಕ್ತಿಯ ಅವಲಂಬನದ ಊರುಗೋಲನ್ನು ಕಳೆದುಕೊಂಡ ಕುಂಟನಾಗಿದ್ದ. ಇದರ ಪರಿಣಾಮ ರಾಮಚಂದ್ರ ಶಾರದೆಯ ಭಾಗಕ್ಕೆ ದುಡಿಯುತ್ತಿರುವ ಧಣಿಯಾದನೇ ಹೊರತು ಅವಳ ಗಂಡನಾಗಲಿಲ್ಲ. ಅವರಿಬ್ಬರ ಮಧ್ಯೆ ದೊಡ್ಡದೊಂದು ಕಂದಕವೇ ಹುಟ್ಟಿಕೊಂಡು ಅವರಿಬ್ಬರ ದೇಹಸಂಬಂಧ ವನ್ನು ಪೂರ್ಣವಾಗಿ ಕಡಿದೊಗೆಯಿತು. ರಾಮಚಂದ್ರ ಮನೆಯಲ್ಲಿ ಸಿಗದ ಸುಖಕ್ಕಾಗಿ ಪರರ ಮನೆ ಅಲೆದ. ಮೋಹಿನಿ ಅವನ ಜೀವನೆಣ್ಣಾಗಿದ್ದವಳು ಈಗ ಅವನ ಅರ್ಧಾಂಗಿಯಾದಳು.

ಆದರೆ ಶಾರದೆ ?

ಶಾರದೆ ಕಾದಳು. ದುಡುಕುವ ಪ್ರವೃತ್ತಿ ಅವಳದಲ್ಲ. ಗಂಡ ಆಡುವ ಆಟವನ್ನೆಲ್ಲಾ ಆಡಿ ಕಡೆಗೆ ದೀನನಾಗಿ, ಭಿಕ್ಷುಕನಂತೆ ತನ್ನ ಪ್ರೇಮಭಿಕ್ಷೆ ಬೇಡುತ್ತಾ ಬರುವ ಆ ದಿನಕ್ಕಾಗಿ ಕಾದು ಕುಳಿತಳು. ಆದರೆ ವಿಧಿಯ ಸಂಚೇ ಬೇರೆಯಾಗಿತ್ತು. ಸಿಡಿದು ಹೋದ ಹೃದಯಗಳು ಮತ್ತೆ ಬೆರೆಯಲೇ ಇಲ್ಲ. ದುರ್ಬಲ ಹೃದಯಿಯೂ, ಚಂಚಲಚಿತ್ತನೂ, ಹೇಡಿಯೂ, ಅವಿವೇಕಿಯೂ ಆದ ರಾಮಚಂದ್ರ ಶಾರದೆಯ ವ್ಯಕ್ತಿತ್ವವನ್ನು ಅರಿಯದೆ ಹೋದ. ತನ್ನ ತಪ್ಪನ್ನು ತಿಳಿದುಕೊಳ್ಳದೆ ಬಿದ್ದಹಳ್ಳಕ್ಕೆ ಮರಳಿ ಬಿದ್ದು ಮಾಡಿದ ತಪ್ಪನ್ನೇ ಮತ್ತೆ ಮಾಡಿದ.

ಅವನ ಗ್ರಹಗತಿಯೂ ಅದಕ್ಕೆ ತಕ್ಕಂತೆ ಇತ್ತು.

ಒಂದು ದಿನ ರಾಮಚಂದ್ರ ಆಫೀಸಿನಿಂದ ಚಿಂತಾಕ್ರಾಂತನಾಗಿ ಮನೆಗೆ ಬಂದ. ಸಾಮಾನ್ಯವಾಗಿ ಸಂಜೆಗೆ ಮನೆಗೆ ಬಾರದೆ ಇರುತ್ತಿದ್ದ ಅವನು ಅಕಸ್ಮಾತ್ ಮನೆಗೆ ಬಂದುದನ್ನು ಕಂಡು ಶಾರದೆಗೆ ಆಶ್ಚರ್ಯವಾಯಿತು. ಶಾರದೆ ಯಾಂತ್ರಿಕವಾಗಿ ಪತಿದೇವನ ಸೇವೆ ಮಾಡಿದಳು. ಕಾಲಿಗೆ ನೀರು ಕೊಟ್ಟು ಕಾಫೀ ತಿಂಡಿಗಳನ್ನು ತಂದಿತ್ತು, ತಾನು ಕೃಷ್ಣವೇಣಿಯ ಜಡೆ ಹೆಣೆಯುತ್ತಾ ಕುಳಿತುಕೊಂಡಳು. ರಾಮಚಂದ್ರ ಹೆಂಡತಿಯನ್ನು ಮೆಲ್ಲನೆ ಒಲಿಸಿಕೊಂಡು ಅವಳಿಂದ ಯಾವುದೋ ಮಹತ್ಕಾರ್ಯವನ್ನು ಮಾಡಿಸುವ ಹಂಚಿಕೆಯಿಂದ

ಬಂದಂತಿತ್ತು. ಅವನು ಆ ವಿಷಯ ಪ್ರಸ್ತಾಪಕ್ಕೆ ಸರಿಯಾದ ವೇಳೆಗಾಗಿ ಕಾದ. ಶ್ರೀಧರ ಮಲಗಿದ್ದವನು ಎದ್ದು ಅಳತೊಡಗಿದ. ರಾಮಚಂದ್ರ ತೊಟ್ಟಿಲಬಳಿ ಬಂದು ತೂಗಿದ, ಶ್ರೀಧರ ಅಳುವನ್ನು ನಿಲ್ಲಿಸಲಿಲ್ಲ. ಕಡೆಗೆ ಅವನನ್ನು ಎತ್ತಿಕೊಂಡು ಲಾಲಿಗೈಯ್ಯುತ್ತಾ ವರಾಂಡಕ್ಕೆ ಬಂದ. ಮಗುವಿನ ಮೇಲೆ ಎಂದೂ ಇಲ್ಲದ ಪ್ರೀತಿ ಉಕ್ಕಿದುದನ್ನು ಕಂಡು ಶಾರದೆಗೆ ಆಶ್ಚರ್ಯ ಸಂತೋಷಗಳಾದವು. ಅದರ ಬೆನ್ನಿಗೇ ಸಂಶಯವೂ ಕಾಲಿರಿಸಿತು. ಶ್ರೀಧರ ಅಳುವನ್ನು ನಿಲ್ಲಿಸಲಿಲ್ಲ ರಾಮಚಂದ್ರನಿಗೆ ಮಗುವನ್ನು ಸುಮ್ಮನಿರಿಸಲು ಸಾಧ್ಯವಾಗದೆ ಹೆಂಡತಿಗೆ ಮಗುವನ್ನು ಕೊಡುತ್ತಾ, “ ಪಾಪ, ಹಸಿವೆಯೋ ಏನೋ ಕೊಂಚ ಹೊಟ್ಟೆಗೆ ಕೊಡಬಾರದೇ ? ” ಎಂದ. ಶಾರದೆ ಮಾತ ನಾಡದೆ ಮಗುವನ್ನು ತೊಡೆಯ ಮೇಲೆ ಮಲಗಿಸಿಕೊಂಡು, ಕಂಚುಕವನ್ನು ಸಡಲಿಸಿ, ಮಗುವಿಗೆ ಅಮೃತಪಾನ ಮಾಡಿಸಿದಳು. ರಾಮಚಂದ್ರ ಮಗು ಹಾಲು ಕುಡಿಯುವುದನ್ನೇ ಆಶಾದೃಷ್ಟಿಯಿಂದ ನೋಡುತ್ತಿದ್ದ, ಮಗುವನ್ನು ಸಂತೈಸಿದಂತೆ ತನ್ನನ್ನೂ ಸಂತೈಸಬಾರದೇ, ಶಾರದೆ, ಎಂದು !

ಶಾರದೆ ಸುಮ್ಮನೆ ಇದ್ದಳು. ಮನೆಯಲ್ಲಿ ಮಗು ಹಾಲುಕುಡಿಯುವ ದಲ್ಲದೇ ಬೇರೊಂದು ಶಬ್ದವಿಲ್ಲ.

ರಾಮಚಂದ್ರ ಇದೀಗ ಸುಸಮಯವೆಂದು ತನ್ನ ಕಥೆ ಹೇಳಿಕೊಂಡ. ಅವನು ಕಂಪನಿಯ ಹಣವನ್ನು ಆಗಿಂದಾಗ್ಗೆ ಕೊಂಚ ಕೊಂಚವಾಗಿ, ತನ್ನ ಸಂಸಾರಕ್ಕೋ ಅಥವಾ ತನ್ನ ಸ್ವಂತ ಖರ್ಚಿಗೋ ಬಳಸಿಕೊಂಡಿದ್ದನಂತೆ. ಅದು ಈಗ ಇನ್ನೂರು ರೂಪಾಯಿನ ಭಾರಿ ಮೊತ್ತವಾಗಿದೆಯಂತೆ. ವರ್ಷದ ಕೊನೆ. ಲೆಖ್ಖಪತ್ರಗಳ ತನಿಖೆಗೆ ಆರಂಭವಾಗಿದೆಯಂತೆ. ಒಂದೆರಡು ದಿನ ಗಳಲ್ಲಿ ಅಷ್ಟೊಂದು ಹಣವನ್ನು ಹೇಗಾದರೂ ಮಾಡಿ ಭರ್ತಿಮಾಡದಿದ್ದರೆ ರಾಮಚಂದ್ರನ ಮಾನ ಹೋಗುವುದು ಹಾಗಿರಲಿ ಕೆಲಸ ಹೋಗುವ ಸಂಭ ವವೂ ಉಂಟು.

“ ಬಳಸಿಕೊಂಡಾಗ ಬಳಸಿಕೊಂಡು ಈಗ ಕೊಡದಿರಲು ಕಂಪೆನಿ ಏನು ನಮ್ಮ ಮಾವನ ಮನೆಯೇ ? ” ಎಂದಳು ಶಾರದೆ ಗಂಡನ ಮಾತು ಮುಗಿದ ಮೇಲೆ.

“ ಹೌದು ಕೊಡಬೇಕು; ಆದರೆ ಕೊಡುವ ಬಗೆ ? ”

" ಸಾಲಮಾಡಿ ! "

" ಸಾಲಕೊಡುವವರು ಯಾರು ? "

" ಯಾಕೆ ? ನಿಮ್ಮ ಮೋಹಿನಿ ಇದ್ದಾಳಲ್ಲ. ಅವಳನ್ನು ಕೇಳಿ. ತನ್ನಲ್ಲಿ ಹಣವಿಲ್ಲದಿದ್ದರೂ, ತನ್ನ ದೇಹವನ್ನು ವಿಕ್ರಯಿಸಿಯಾದರೂ ತಂದು ಪೂರೈಸುತ್ತಾಳೆ! "

ಈ ಮಾತುಕೇಳಿ ಕೋಪ ನೆತ್ತಿಗೇರಿತು. ಯಾವ ಮಾತಿಗೂ ಮೋಹಿನಿ! ಮೋಹಿನಿ!! ಎಂದು ಹಂಗಿಸಿದರೆ ಯಾರಿಗೆ ತಾನೇ ಕೋಪ ಬರುವುದಿಲ್ಲ. ಆದರೆ ಇದು ಕೋಪಿಸಿಕೊಳ್ಳುವ ಹೊತ್ತಲ್ಲ.

" ಶಾರದ ಉರಿಯುವ ಗಾಯಕ್ಕೆ ಇಂತಹ ಹೊತ್ತಿನಲ್ಲಿಯೂ ಉಪ್ಪು ಬಳಿಯಬೇಕೇ ? "

" ನನ್ನ ಮಾತು ನಿಮಗೆ ಉಪ್ಪುಪ್ಪಾಯಿತೇ ? ಹಾಗಾದರೆ ನನ್ನನ್ನೇಕೆ ಮಾತನಾಡಿಸುತ್ತೀರಿ ? "

ಈ ಮಾತು ಕೇಳಿ ರಾಮಚಂದ್ರನಿಗೆ ನಾಲಿಗೆ ಸೇದಿಹೋದಂತಾಯಿತು. ಮಾತೇ ಹೊರಡಲಿಲ್ಲ. ಇಂತಹ ಹೊತ್ತಿನಲ್ಲಿಯೂ ಒಂದು ಮಾತು ಸಹಾನುಭೂತಿ ನುಡಿಬೇಡವೇ ? ಎಂದು ತನ್ನಲ್ಲೇ ಕೇಳಿಕೊಂಡ ಅವನು. ಅವನು ಅಲ್ಲಿ ಹೀಗೆಯೇ ಹತ್ತೆಂಟು ನಿಮಿಷಗಳು ನಿಂತಿದ್ದರೂ, ಶಾರದೆ ಏಕೆ ಎಂದು ಮಾತನಾಡಿಸಲಿಲ್ಲ. ಆಗಲಿ ಮತ್ತೊಮ್ಮೆ ಪ್ರಯತ್ನಿಸುತ್ತೇನೆ. ಎಂದುಕೊಂಡು ಅಲ್ಲಿಂದ ಕಾಲ್ತೆಗೆದ ರಾಮಚಂದ್ರ.

ಶಾರದೆಗೂ ಈ ವೇಳೆಗೆ ವೇದ್ಯವಾಗಿತ್ತು. ತನ್ನ ಗಂಡ ಹಣಕ್ಕಾಗಿ ತನ ಚಿನ್ನದ ಸರ, ಬಳೆಗಳಿಗೆ ಏಟುಹಾಕುತ್ತಿದ್ದಾನೆಂದು. ಆಗಲಿ ಆ ಕಥೆ ಎಲ್ಲಿಗೆ ಬರುವುದೋ ನೋಡೋಣ ಎಂದುಕೊಂಡು ತೆಪ್ಪಗಿದ್ದಳು.

ರಾತ್ರಿ ಊಟಮಾಡಿ ಮಲಗುವಾಗ ಶಾರದೆ ಗಂಡನಿಗೆ ರೂಂನಲ್ಲಿ ಹಾಸಿಗೆ ಹಾಸಿಕೊಟ್ಟು, ತಾನು ಹಾಲಿನಲ್ಲಿ ಮಕ್ಕಳ ಸಮೇತ ಮಲಗಿಕೊಳ್ಳಲು ಹೋದಳು. ಗಂಡ ಎಲ್ಲವನ್ನು ಕಣ್ಣುಬಿಟ್ಟು ನೋಡುತ್ತಿದ್ದ. ಶಾರದ ತನ್ನನ್ನು ಸೋಕಿಸಿಕೊಳ್ಳದೆ ರೂಂನಿಂದ ಹೊರಟು ಹೋದ ಮೇಲೆ ' ಶಾರದ ' ಎಂದು ಮೃದುವಾಗಿ ಕರೆದ.

ಶಾರದೆ ಮಾತಿಲ್ಲದೆ ಕೋಣೆಗೆ ಬಂದಳು.

" ಶಾರದ, ದೇವರಿಗೆ ಭಕ್ತನಮೇಲೆ ದಯೆ ಬರಲಿಲ್ಲವೇ ? "

" ಇಲ್ಲ........ಭಕ್ತ ಪಾಪಿಯಾಗಿದ್ದಾನೆ " ಎಂದಳು ಶಾರದ.

" ಪಾಪಿಗಳನ್ನು ಉದ್ಧಾರ ಮಾಡುವುದೇ ದೇವರ ಕೆಲಸ! " ಎಂದು ಗಂಡ ಶಾರದೆಯ ಕೈಹಿಡಿಯಲು ಹೋದ. ಶಾರದ ಪಕ್ಕಕ್ಕೆ ಸರಿದು ಕೈಕೊಸರಿಕೊಂಡು, " ಈ ದೇವರು ಆ ಕೆಲಸಗಳಿಗೆ ಸಿದ್ಧವಾಗಿಲ್ಲ " ಎಂದಳು.

" ಹಾಗಾದರೆ ನೀನೆಂತಹ ದೇವರು. ನಿನಗಿಂತ ಕಲ್ಲು ದೇವರು ವಾಸಿ!"

" ಅದಕ್ಕೆ ಮೊರೆ ಇಡಿ! "

" ಶಾರದ ನನ್ನ ಘಾನ ಹೋದರೂ ನಿನಗೆ ಕರುಣೆಯಿಲ್ಲವೇ ? "

" ನಿಮಗೆ ಮಾನವಿದ್ದರೆ ತಾನೇ ಹೋದೀತೆನ್ನುವ ಹೆದರಿಕೆ! "

ಗಂಡನ ಬಾಯಿ ಕಟ್ಟಿತು.

" ಆಗಲಿ ಇಲ್ಲವೆಂದೇ ತಿಳಿದುಕೋ. ನಾಳೆ ಗಂಜಿಯ ಗತಿ ಹೇಗೆಂದು ನೋಡಬಾರದೇ ? "

ಮಕ್ಕಳ ಗಂಜಿಯಗತಿ ಎಂದಾಗ ಶಾರದೆ ಚಂಚಲ ಗೊಂಡಳು. ಹೌದು ತನ್ನ ಗಂಡನ ಕೆಲಸದ ಬಾಯಿಗೆ ಮಣ್ಣುಬಿದ್ದರೆ ಗತಿ ?

" ನೀನು ಮನಸ್ಸು ಮಾಡಿದರೆ ಈ ಕುತ್ತದಿಂದ ಪಾರು ಮಾಡಬಲ್ಲೆ! ನಿನ್ನ ಬಳಿ ಸರವಿದೆಯಲ್ಲ! ಅದನ್ನು ಮಾರುವುದು ಬೇಡ– ಯಾರಲ್ಲಾದರೂ ಒತ್ತೆ ಹಾಕಿದರೆ ಸಾಕಾಗುವಷ್ಟು ಹಣ ಸಿಗುತ್ತದೆ. ಅನುಕೂಲಸಮಯ ಬಂದಾಗ ಬಿಡಿಸಿತಂದು ನಿನ್ನ ಕೊರಳಿಗೆ ಮತ್ತೆ ಹಾಕುತ್ತೇನೆ. ನನ್ನ ಮಾತಿನಲ್ಲಿ ನಂಬಿಕೆ ಇಡು........"

ಶಾರದೆ ತಾಯಿ ತನ್ನ ಗುರುತಿಗೆ ಮಾಡಿಸಿಕೊಟ್ಟ ಸರ–ಕೊಡಲು ಸಾಧ್ಯವಿಲ್ಲವೆಂದುಬಿಟ್ಟಳು ನಿಷ್ಕರುಣಿಯಾಗಿ.

" ಕೈಬಳೆಯಾದರೂ ಕೊಡು! "

" ಅದೂ ಸಾಧ್ಯವಿಲ್ಲ! "

ಇಲ್ಲಿಗೆ ರಾಮಚಂದ್ರನ ಆಶಾದೀವಿಗೆಯ ಕುಡಿ ನಂದಿಹೋಯಿತು. ಅವನ ಕಣ್ಣಿಗೆ ಕತ್ತಲೆ ಕವಿಯಿತು. ತಲೆಯ ಮೇಲೆ ಕೈಹೊತ್ತು ಕುಳಿತುಬಿಟ್ಟ. ಶಾರದೆ ಅಲ್ಲಿ ನಿಲ್ಲದೆ ತನ್ನ ಹಾಸಿಗೆಯ ಬಳಿಗೆ ಹೊರಟು ಹೋದಳು.

ಹಾಸಿಗೆಯಲ್ಲಿ ಮಲಗುತ್ತಾ ಶಾರದೆ ಆಲೋಚಿಸಿದಳು. ತಾನು ಗಂಡನ ಕಷ್ಟದೆಶೆಯಲ್ಲಿ ನೆರವಾಗಬೇಕೇ ಬೇಡವೇ. ತಾನೊಂದು ವೇಳೆ ಗಂಡನ ಮಾತುಗಳನ್ನು ನಂಬಿ ಸರವನ್ನು ಕೊಟ್ಟರೆ ಅದು ಮಾರ್ವಾಡಿಕಟ್ಟೆ ಸೇರುವ ಬದಲು ಮೋಹಿನಿಯ ಕೊರಳು ಸೇರಿದರೆ ಗತಿ ?

ಗಂಡನನ್ನು ಇನ್ನಷ್ಟು ಕೆಣಕಿ, ಒರೆಹಚ್ಚಿ ನೋಡಿ ಅನಂತರ ಕೊಡಬೇಕು........ಇಂತಹ ವೇಳೆಯಲ್ಲಿ ತಾನು ಮೊಂಡಹಟ ಮಾಡಿದರೆ ರಾಮಚಂದ್ರ ಕೆಲಸ ಕಳೆದುಕೊಂಡು ಇದರಿಂದ ತನಗೂ ತ್ರಾಸವಾಗಬಹುದಲ್ಲ! ಎಂದುಕೊಂಡು ಮಲಗಿದಳು. ಆದರೂ ಹೊರಗೆ “ ವಜ್ರಾದಪಿ ಕಠೋರಾಣಿ!”

ರಾಮಚಂದ್ರನಿಗೆ ಹೆಂಡತಿಗೆ ತನ್ನ ಮಾತಿನಲ್ಲಿ ನಂಬಿಕೆ ಹುಟ್ಟಲಿಲ್ಲವೆಂದು ತಿಳಿಯಿತು. ನಂಬಿಕೆ ಹುಟ್ಟಿಸಲು ಅವನು ತನ್ನ ಜಾಣ್ಮೆಯನ್ನೆಲ್ಲಾ ವೆಚ್ಚಮಾಡಿ ಸೋತಿದ್ದ. ಇನ್ನು ಉಳಿದಿರುವುದು ಒಂದೇ ದಾರಿ. ಅದು ‘ದಬಾದುಬಿ’ ಮಾಡಿ ಶಾರದೆಯಿಂದ ಸರ ಕಿತ್ತುಕೊಳ್ಳುವುದು. ಇದರ ಸುಳಿವು ಗೊತ್ತಾಗಿ ಶಾರದೆ ಎದುರು ನಿಂತರೆ ?........ಎಂದುಕೊಂಡು ಆ ದಾರಿ ಬಿಟ್ಟ. ಅದಕ್ಕೂ ಉತ್ತಮದಾರಿ ಇನ್ನೇನು ಹೊಳೆಯಿತೋ ಅಂತೂ ಮುಸುಕಿಟ್ಟು ಮಲಗಿದ.

ರಾತ್ರಿ ಸುಮಾರು ಎರಡು ಗಂಟೆಯ ಸಮಯ. ಶಾರದೆ ದೇಹದ ಮೇಲೆ ಎಚ್ಚರವಿಲ್ಲದೆ ಮಗುವಿಗೆ ಸ್ತನ್ಯಪಾನ ಮಾಡಿಸುತ್ತಾ ಮಗ್ಗುಲು ತಿರುಗಿ ಮಲಗಿದ್ದಳು. ಮಗು ಹಾಲುಕುಡಿದು ದಣಿದು ನಿದ್ರೆ ಹೋಗುತ್ತಿದೆ. ಆದರೂ ಆದು ತಾಯಿಯ ಸ್ತನದಿಂದ ತನ್ನ ಬಾಯನ್ನು ಕಿತ್ತಿರಲಿಲ್ಲ! ಶಾರದೆಗೆ ತನ್ನ ಕುಪ್ಪಸದಕಡೆ–ಬಟ್ಟೆಯಕಡೆ ಗಮನವೇ ಇಲ್ಲ. ಅವಳು ಶಾಂತವಾಗಿ ನಿದ್ರಿಸುತ್ತಿದ್ದಳು. ಬಳಿಯಲ್ಲೇ ಇದ್ದ ಕಂದೀಲು ದೀಪ ಸಣ್ಣಗೆ ಪ್ರಶಾಂತವಾಗಿ ಉರಿಯುತ್ತಿತ್ತು. ಅದರ ಬೆಳಕಿನಲ್ಲಿ, ಮಲಗಿದ್ದವರು ಮೊಬ್ಬ ಮೊಬ್ಬಾಗಿ ಕಾಣುತ್ತಿದ್ದರು. ರಾಮಚಂದ್ರ ಕೋಣೆಯ ಬಾಗಿಲನ್ನು ಸದ್ದುಮಾಡದೆ ತೆಗೆದುಕೊಂಡು ಶಾರದೆ ಮಲಗಿದ್ದ ಕಡೆಗೆ ಗುಳ್ಳೆನರಿಯಂತೆ ಬಂದ. ಕ್ಷಣ ಕಾಲ ಅವಳ ಮುಖವನ್ನು ದಿಟ್ಟಿಸಿನೋಡಿ ಗಾಢನಿದ್ರೆಯಲ್ಲಿರುವಳೆಂದು ಖಚಿತ ಪಡಿಸಿಕೊಂಡು ಅವಳ ಕತ್ತಿನಲ್ಲಿದ್ದ ಚಿನ್ನದ ಸರಕ್ಕೆ ಕೈಹಾಕಿದ. ಶಾರದೆ ಸರವನ್ನು ಏಕೋ ಏನೋ ಕುಪ್ಪಸದ ಅಡಿಯಲ್ಲಿ ಮುಚ್ಚಿಟ್ಟಿದ್ದಳು. ರಾಮ

ಚಂದ್ರು ಪಳಗಿದ ಕಳ್ಳನಂತೆ ಮೆಲ್ಲನೆ ಸರವನ್ನು ಹೊರಗೆ ಎಳೆದು ಉಪಾಯವಾಗಿ ಅದರ ಕೊಂಡಿಯನ್ನು ಕಳಚಿ ಕೈಗೆ ತೆಗೆದುಕೊಂಡ. ಅವನಿಗೆ ಎದೆ ಒಂದೇ ಸಮನೆ ಹೊಡೆದುಕೊಳ್ಳುತ್ತಿತ್ತು; ಶಾರದೆ ಎಚ್ಚತ್ತು ಬಿಟ್ಟರೆ ಎನ್ನುವ ಹೆದರಿಕೆ! ಅವನ ಪುಣ್ಯ. ಶಾರದೆ ಒಂದು ಹೊರಳು ಹೊರಳಿದಳೇ ಹೊರತು ಎಚ್ಚರ ಗೊಳ್ಳಲಿಲ್ಲ. ಈ ವೇಳೆಗೆ ಗಂಡನ ಕೆಲಸ ಪೂರೈಸಿತ್ತು. ಬದುಕಿದೆಯಾ ಬಡ ಜೀವವೇ ಎಂದುಕೊಳ್ಳುತ್ತಾ ರೂಂಗೆ ಬಂದು ಸರವನ್ನು ಭದ್ರಪಡಿಸಿ ಮಲಗಿದ. ನಿದ್ರೆ ಮಾತ್ರ ಹತ್ತಲಿಲ್ಲ.

ಶಾರದ ಬೆಳಗಾಗುತ್ತಲೂ ಎದ್ದು ಎಂದಿನಂತೆ ಕಸಮುಸುರೆ ಮಾಡಿದಳು. ಮನೆಯನ್ನು ಸಾರಿಸಿ ರಂಗೋಲಿ ಕೆಮ್ಮಣ್ಣು ಮಾಡಿದಳು. ಆಗ ಇದ್ದಕ್ಕಿದ್ದ ಹಾಗೆ ಕತ್ತಿನಲ್ಲಿದ್ದ ಸರದ ಕಡೆಗೆ ದೃಷ್ಟಿ ಹೋಯಿತು. ಸರ ಕತ್ತಿನಲ್ಲಿ ಕಾಣ ಲಿಲ್ಲ. ಆವಳಿಗೆ ಹೆದರಿಕೆಯಾಯಿತು. ಹಾಸಿಗೆಯಲ್ಲಿ ಬಿದ್ದಿರಬಹುದೆಂದು ಅಲ್ಲಿ ಹುಡುಕಿದಳು. ತಾನು ಕೆಲಸ ಮಾಡಿದ ಕಡೆಯಲ್ಲೆಲ್ಲಾ ತಡಕಿದಳು. ಎಲ್ಲೂ ಸರ ಪತ್ತೆಯಾಗಲಿಲ್ಲ. ರಾತ್ರಿ ಮಲಗಿಕೊಳ್ಳುವಾಗ ಕತ್ತಿನಲ್ಲಿ ಇದ್ದ ಸರ ಬೆಳಗಾಗುವ ವೇಳೆಗೆ ಮಾಯವಾಗಿದ್ದರೆ ಕಳೆದು ಹೋಗಿದೆ ಎನ್ನಬೇಕೋ, ಕಳುವಾಗಿದೆ ಎನ್ನಬೇಕೋ? ಅವಳ ತಲೆಯಲ್ಲಿ ಸಂಶಯದ ತೆರೆ ಎದ್ದಿತು. ರಾತ್ರಿ ಗಂಡ ಸರ ಕೊಡಲು ತನ್ನನ್ನು ಗೋಗರೆದ. ಅವನಿಗೆ ಅದರ ಅವಶ್ಯ ಕತೆ ಬಹಳವಿತ್ತು. ಅವನೇ ರಾತ್ರಿ ತಾನು ಮಲಗಿರುವ ವೇಳೆಯಲ್ಲಿ ಬಂದು ಯಾಕೆ ಕದ್ದಿರಬಾರದು? ಕತ್ತಿನಲ್ಲಿರುವ ಸರ ಕದಿಯಬೇಕಾದರೆ ಮುತ್ತಾರಿಗೆ ಗುಂಡಿಗೆ ಇದೆ. ಎಂದುಕೊಳ್ಳುತ್ತಾ ಕಾಫಿಗೂ ಒಲೆ ಹೊತ್ತಿಸದೆ, ಗಂಡ ಏಳುವು ದನ್ನೇ ಕಾಯುತ್ತಾ ಕುಳಿತುಬಿಟ್ಟಳು.

ಗಂಡ ಹಾಸಿಗೆಯಿಂದ ಎದ್ದ. ಬೇಕೆಂದೇ ತಡ ಮಾಡಿಕೊಂಡು ಎದ್ದ. ಮುಖವನ್ನು ತೊಳೆದುಕೊಂಡು ತನ್ನ ವಿಷಯದಲ್ಲಿ ಹೆಂಡತಿಗೆ ಅನುಮಾನ ಬಾರದಿರಲೆಂದು ಅಡಿಗೆಯ ಮನೆಗೆ ಬರುತ್ತಾ, "ಶಾರದ, ಕಾಫಿ ಆಯಿತಾ?" ಎಂದು ಕೇಳಿದ.

ಶಾರದ ಸುಮ್ಮನೆ ಇದ್ದಳು.

"ಯಾಕೆ. ಇನ್ನೂ ಕಾಫಿ ಮಾಡಿಲ್ಲವೇ?" ಎಂದ.

"ಕಾಫಿ ಕೊಡುತ್ತೇನೆ—ಮೊದಲು ನೀವು ರಾತ್ರಿ ಕದ್ದ ಸರ ಕೊಡಿ

ಇಲ್ಲಿ! ” ನಿರುದ್ವಿಗ್ನಳಾಗಿ ಹೇಳಿದಳು ಶಾರದೆ.

“ ಏನು ಕಳ್ಳರು ಬಂದಿದ್ದರೇ ? “

“ ಹೌದು. ನೀವೇ ಕಳ್ಳರು ! ”

ಈ ಮಾತು ಕೇಳಿ ರಾಮಚಂದ್ರ ಬೆಂಕಿಬೆಂಕಿಯಾಗಿ ಶಾರದೆಯ ಕೆನ್ನೆಗೆ ಪಳೀರನೆ ಒಂದು ಬಿಗಿದ.

“ ಕಳ್ಳನಂತೆ ಕಳ್ಳ—ಯಾರು ಕಳ್ಳ ? ”

“ ನೀವೇ ! ”

ರಾಮಚಂದ್ರ ಇನ್ನೊಂದು ಬಿಗಿದ.

“ ದೇವರಾಣೆಗೂ ಹೇಳುತ್ತೇನೆ—ನೀವೇ ಕಳ್ಳರು ! ”

ಗಂಡ ಮತ್ತೊಂದೇಟು ಹೊಡೆಯಲು ಕೈ ಎತ್ತಿದ. ಶಾರದೆಗೆ ರೋಸಿ ಹೋಗಿ, “ ಸರ ಕದ್ದಿರುವುದಲ್ಲದೆ ನನ್ನನ್ನು ಹೊಡೆಯಲು ಬರುತ್ತೀರಾ ? ” ಎಂದು ರಾಮಚಂದ್ರನ ಕೈಯನ್ನು ಜೋರಾಗಿ ಅತ್ತ ನೂಕಿದಳು, ಇದರಿಂದ ಅವಳಿಗೇ ಪೆಟ್ಟಾಯಿತು.

ರಾಮಚಂದ್ರ ಜೇಗ್ಗೆ ಎದ್ದು ಹೆಂಡತಿಯ ಕೈಯಲ್ಲಿ ಏಕೆ ತೇಜೋವಧೆ ಮಾಡಿಸಿಕೊಳ್ಳಬೇಕೆಂದು ಮನೆಯಿಂದ ಕಾಲ್ತೆಗೆಯಲು ನಿಶ್ಚಯಿಸಿದ. ಶಾರದೆ ಬೊಬ್ಬೆ ಇಟ್ಟು ಅಕ್ಕಪಕ್ಕದ ಮನೆಯವರು ನೆರೆಯುವಂತೆ ಮಾಡಿ, ಅವರ ಸಮ್ಮುಖದಲ್ಲಿ ತನ್ನ ಮಾನ ತೆಗೆಯಲೂ ಹೇಸುವವಳಲ್ಲವೆಂದು ಹೆದರಿದ. ಹೇಗೂ ಆತನ ಉದ್ದೇಶ ಸಫಲಗೊಂಡಿತ್ತು. ವೃಥಾ ಹೆಂಡತಿಯೊಡನೆ ಏಕೆ ಸೆಣಸಾಟವೆಂದುಕೊಂಡು ಮನೆಯಿಂದ ಹೊರಟೇ ಬಿಟ್ಟ ರಾಮಚಂದ್ರ.

ಮೂರು ದಿನಗಳ ಕಾಲ ಶಾರದೆಗೆ ಗಂಡನೇನಾದನೆಂದು ತಿಳಿಯಲಿಲ್ಲ. ತಿಳಿಯುವುದೂ ಅವಳಿಗೆ ಬೇಕಿರಲಿಲ್ಲ. ಆ ನಾಯಿ ಸೂಳೆಯ ಮನೆಯಲ್ಲಿ ಬಿದ್ದುಕೊಂಡಿದೆ ಎಂದುಕೊಂಡಳು. ನಾಲ್ಕನೆಯ ದಿನ ರಾಮಚಂದ್ರ ಮನೆಗೆ ಮುಖ ತೋರಿಸಿದ. ಹಿಂದಿನ ಎಲ್ಲ ಘಟನೆಗಳನ್ನು ಮರೆತವನಂತೆ ಮಕ್ಕಳನ್ನು ಆಡಿಸಲು ಬಂದ. ಶಾರದೆಗೆ ಅವನನ್ನು ಕಂಡು ಥೂ ಎಂದು ಉಗುಳುವಷ್ಟು ಅಸಹ್ಯವಾಗಿತ್ತು. ಅವಳು ಅವನೊಂದಿಗೆ ಚಕಾರವೆತ್ತದೆ ತನ್ನ ಕೆಲಸ ಕಾರ್ಯಗಳಲ್ಲಿ ಮಗ್ನಳಾದಳು.

ತನ್ನ ಬಲಾತ್ಕಾರಕ್ಕೆ ಹೆಂಡತಿ ಬಗ್ಗುವವಳೆಂದು ರಾಮಚಂದ್ರನಿಗೆ ತಿಳಿದು

ದರಿಂದ ಸರ ಹೋದ ತಿಂಗಳಿಗೆ ಶಾರದೆಯ ಕೈಬಳೆಗೂ ಸಂಚಕಾರ ತಂದ. ಈಗ ಮೋಹಿನಿಯಿಂದ ಪ್ರೇರಿತನಾಗಿ ಸುಳ್ಳಿನ ಕಥೆ ಹೇಳಿಕೊಂಡು ಕೈಬಳೆ ಬೇಡಿದ. ಹೆಂಡತಿ ಮಾತೇ ಆಡಲಿಲ್ಲ. ಗಂಡಸಿಗೆ ಮಾತು ಮುಖ್ಯವಲ್ಲ–ಕೃತಿ ಮುಖ್ಯ.

ಸರಿ, ಹೊಡೆದು, ಬಡಿದು, ಬೆರಳುಗಳನ್ನು ಮುರಿದು ಬಳೆಗಳನ್ನು ಕಿತ್ತುಕೊಂಡೇ ಹೋದ. ಸರ ಹೋಯಿತು. ಬಳೆ ಹೋಯಿತು. ಇನ್ನೇಕೆ ಬಂದು ಪೀಡಿಸುತ್ತಾನೆ ಎಂದುಕೊಂಡು ಶಾರದ ಸಮಾಧಾನ ತಾಳಿದಳು. ಈ ಬಾರಿ ರಾಮಚಂದ್ರ ಒಂದು ವಾರ ಮನೆಗೆ ಬರಲಿಲ್ಲ. ಮನೆಯ ಸುದ್ದಿ, ಹೆಂಡತಿ ಮಕ್ಕಳ ಊಟ ತಿಂಡಿ, ಹೇಗೆಂದೂ ವಿಚಾರಿಸಿಕೊಳ್ಳಲಿಲ್ಲ.

ಅದು ತಿಂಗಳ ಕೊನೆಯ ವಾರ. ಶಾರದೆಯ ಕೈಯಲ್ಲಿ ಮೂರು ಕಾಸೂ ಇಲ್ಲ. ಮನೆಯಲ್ಲಿದ್ದ ಸಾಮಾನುಗಳು ಒಂದೆರಡು ದಿನಗಳಲ್ಲೇ ಮುಗಿದು ಹೋದುವು. ಮಕ್ಕಳು ಹೊಟ್ಟೆಗಿಲ್ಲದೆ ಉಪವಾಸವಿರುವ ಹೊತ್ತು ಬಂತು. ತಾನು ಬೇಕಾದರೆ ಉಪವಾಸ ಮಾಡಬಲ್ಲಳು. ಆದರೆ ಮಕ್ಕಳು ಉಪವಾಸ ಮಾಡುವುದನ್ನು ನೋಡಿಕೊಂಡಿರಲು ಅವಳಿಂದ ಆಗಲಿಲ್ಲ. ನೆರೆಮನೆಯ ಪಾತಮ್ಮನ ಮನೆಯಿಂದ ಒಂದೆರಡು ರೂಪಾಯಿ ಸಾಲ ತಂದು ಮಕ್ಕಳ ಹೊಟ್ಟೆಗೆ ಒಂದಿಷ್ಟು ಗಂಜಿ ಕಾಣಿಸಿದಳು. ಆಗ ರಾಮಚಂದ್ರನ ಸವಾರಿ ಚಿತ್ತೈಸಿತು. ಅವನನ್ನು ಕಂಡು ಶಾರದೆಗೆ ಒಂದು ಕಡೆ ಕೋಪ, ಒಂದು ಕಡೆ ದುಃಖ.

"ನಾವು ಸತ್ತೇವೋ—ಬದುಕಿದ್ದೇವೆಯೋ ಎಂದು ನೋಡಲು ಬಂದಿರಾ ?............ಇಲ್ಲ............ನಾವಿನ್ನೂ ಸತ್ತಿಲ್ಲ" ಎಂದು ಕೂತಲ್ಲಿಂದಲೇ ಗರ್ಜಿಸಿದಳು ಶಾರದೆ.

ಗಂಡ ಅತ್ತಿಂದಿತ್ತ ಓಡಾಡುತ್ತಿದ್ದ.

"ನೀವು ನಮ್ಮನ್ನು ಊಟವಿಲ್ಲದೆ ಸಾಯಿಸಬೇಕೆಂದಿದ್ದೀರಾ ?"

ಗಂಡ ಉತ್ತರ ಕೊಡಲಿಲ್ಲ.

"ಹಾಗೇನಾದರೂ ಮನಸ್ಸಿನಲ್ಲಿದ್ದರೆ ಹೇಳಿ ಬಿಡಿ. ಈ ಮಕ್ಕಳನ್ನು ಮೊದಲು ಭಾವಿಗೆ ತಳ್ಳಿ ನಾನೂ ಬಿದ್ದು ಸಾಯುತ್ತೇನೆ !" ಶಾರದೆಯ ಕಣ್ಣಿನಲ್ಲಿ ಪಳಪಳನೆ ನೀರು ಬಂತು. ಅವಳಿಗೆ ಹಠಾತ್ತಾಗಿ ಶ್ಯಾಮಲೆಯ ಸಂಸಾ

ರವ ಚಿತ್ರ ನೆನಪಿಗೆ ಬಂತು. ಹಾಗೆಯೇ ಶ್ಯಾಮಲೆ ಬರೆದ "ಶಾರದಾ! ನೀನು ಸುಖಪಡಲು ಹುಟ್ಟಿಲ್ಲ ತಾಯಿ!" ಎನ್ನುವ ಮಾತು ನೆನಪಾಯಿತು. ಹಿಂದಿನದೆಲ್ಲಾ ನೆನೆಸಿಕೊಂಡು ಗೋಳೋ ಎಂದು ಅತ್ತು ಬಿಟ್ಟಳು.

ಇದೇ ವೇಳೆಗೆ ಅಂಚೆಯವನು ಬಂದು ಒಂದು ಪತ್ರ ತಂದು ಕೊಟ್ಟ. ಅದು ಕೊರಟಿಯಿಂದ ಬಂದ ಕಾಗದ. ಶ್ಯಾಮಣ್ಣನವರಿಗೆ ಸಖತ್ ಕಾಯಿಲೆ ಎಂದೂ ಉಳಿಯುವುದೇ ಅನುಮಾನವೆಂದೂ, ಅವರನ್ನು ನೋಡಲು ಆಸೆ ಯಿದ್ದರೆ ಹಾಗೇ ಬಂದು ಹೋಗಬೇಕೆಂದೂ ನರಸಿಂಹಮೂರ್ತಿ ಬರೆದಿದ್ದ. ಶಾರದೆಯ ಅಳುವಿನ ಪ್ರವಾಹ ಮಹಾಪೂರವಾಗಲು ಈ ಕಾಗದದ ಸುದ್ದಿ ಜೇರೆ ನೆರವಾಯಿತು.

"ಅಯ್ಯೋ ಚಿಕ್ಕಪ್ಪಾ!........" ಎಂದು ಚಿಕ್ಕಪ್ಪನ ಒಳ್ಳೆಯತನವನ್ನು ನೆನಪಿಗೆ ತಂದುಕೊಂಡು ರೋದಿಸಿದಳು.

"ನಾನು ಊರಿಗೆ ಹೋಗಬೇಕು. ನನ್ನನ್ನು ಬಸ್ಸಿನಲ್ಲಿ ಕೂಡಿಸು ತ್ತೀರಾ?" ಎಂದಳು ಶಾರದೆ ದೈನ್ಯಳಾಗಿ ಗಂಡನಿಗೆ.

"ನೀನೇನೂ ಊರಿಗೆ ಹೋಗಬೇಕಾಗಿಲ್ಲ."

"ನಾನು ಹೋಗಲೇ ಜೇಕು—ನೀವು ಜೇಡವೆಂದರೂ ನಾನು ಹೋಗಲೇ ಬೇಕು. ನೀವು ಕಳುಹಿಸದಿದ್ದರೂ ನಾನೇ ಹೋಗುತ್ತೇನೆ. ಹೋಗೇ ಹೋಗ್ತೇನೆ!"

"ನಿನಗೆ ಅಷ್ಟು ಧೈರ್ಯ ಬಂತೇ" ಎಂದ ರಾಮಚಂದ್ರ ಕೆಂಗಣ್ಣು ಬಿಡುತ್ತಾ

"ನಾನು ಊರಿಗೆ ಹೋಗುವುದು ಮದುವೆಗಲ್ಲ ಮುಂಜಿಗಲ್ಲ. ಸಾಕಿ ಸಲುಹಿದ ತಂದೆಯನ್ನು ಸಾಯುವ ಮುನ್ನ ಒಮ್ಮೆಯಾದರೂ ನೋಡಿ ಬರಲು ಹೋಗುತ್ತಿದ್ದೇನೆ" ಎಂದು ಬಿರುನುಡಿದಳು ಶಾರದೆ.

ಶಾರದೆ ಈ ಮಾತು ಹೇಳುತ್ತಿದ್ದಂತೆ ಮನೆಯ ಮುಂದೆ ಒಂದು ಜಟಕಾ ಬಂದು ನಿಂತಿತು. ಅದರಿಂದ ಶ್ಯಾಮಲೆ ಸೀತಾರಾಮು ಕೆಳಗಿಳಿದು ಮನೆಯೊ ಳಕ್ಕೆ ಬಂದರು.

ಅವರಿಗೂ ನರಸಿಂಹಮೂರ್ತಿಯ ಪತ್ರ ಅದೇ ಟಪಾಲಿಗೆ ಸೇರಿತ್ತು. ಅವರು ಕಾಗದ ಕಂಡ ಕೂಡಲೇ ನಿಂತ ಹೆಜ್ಜೆಯಲ್ಲಿ ಊರಿಗೆ ಹೊರಟಿದ್ದರು.

ಶ್ಯಾಮಲೆ ಶಾರದೆಗೆ ಬಹುಶಃ ಊರಿನ ಸುದ್ದಿ ತಿಳಿದಿರಲಾರದೆಂದು– " ಶಾರದ ಚಿಕ್ಕಪ್ಪ ಊರಿನಲ್ಲಿ– " ಎನ್ನುತ್ತಿರುವಂತೆಯೇ ಮುಂದೆ ಮಾತೇ ಹೊರಡಲಿಲ್ಲ. ಶಾರದ ತನಗೂ ಆ ವಿಷಯ ತಿಳಿದಿದೆ ಎಂದು ಹೇಳುತ್ತಾ ತನ್ನ ಸಾಮಾನು ಗಳನ್ನು ಗಂಟುಕಟ್ಟಿ ' ನಾನೂ ನಿಮ್ಮೊಂದಿಗೆ ಬರುತ್ತೇನೆ ' ಎಂದಳು.

ರಾಮಚಂದ್ರ ಮುಖ ಗಂಟಿಕ್ಕಿ ಶಾರದೆಯನ್ನು ದುರದುರನೆ ನೋಡಿದ. ಶಾರದೆ ಅದನ್ನು ಗಣನೆಗೆ ತಾರದೆ ಎಲ್ಲರೊಡನೆ ಗಾಡಿ ಹತ್ತೇ ಬಿಟ್ಟಳು. ಹೊರಡುವಾಗ ಗಂಡನಿಗೆ,— " ಒಂದೆರಡು ದಿನಗಳಲ್ಲಿ ಬಂದು ಬಿಡುತ್ತೇನೆ. ಮನೆಯ ಕಡೆ ಭದ್ರ " ಎಂದು ಹೇಳುವುದನ್ನು ಮರೆಯಲಿಲ್ಲ.

೮

ಶಾರದೆ ಒಂದೆರಡು ದಿನಕ್ಕೆಂದು ಹಳ್ಳಿಗೆ ಹೋಗಿದ್ದವಳು ಒಂದೆರಡು ತಿಂಗಳು ನಿಲ್ಲಬೇಕಾಯಿತು. ಗಂಡ ಶಾರದೆ ಊರಿಗೆ ಹೋದ ಬೆನ್ನಿಗೇ ತನ್ನ ಮಾತನ್ನು ಉಲ್ಲಂಘಿಸಿ ಹೋದುದರಿಂದ ಇನ್ನು ತನ್ನ ಮನೆಗೆ ಬರಬೇಕಾದ ಕಾರಣವಿಲ್ಲವೆಂದು ಬರೆದು ಹಾಕಿದ. ಶಾರದೆಗೇ ಆ ಕಾಗದ ಮೊದಲು ಸಿಕ್ಕಿತು. ಮನೆಯತುಂಬಾ ನೋವಿನ ವಾತಾವರಣವಿರುವಾಗ ಇದೊಂದು ಧೂಮಕೇತು ಎಂದುಕೊಂಡು ಕಾಗದವನ್ನು ಹರಿದು ಒಲೆಗೆ ಹಾಕಿದಳು. ಆ ಕಾಗದ ಕಂಡು ಅಷ್ಟು ತಿರಸ್ಕಾರ ಅವಳಿಗೆ. ಶ್ಯಾಮಣ್ಣನವರ ಸ್ಥಿತಿ ತುಂಬಾ ಚಿಂತಾಜನಕವಾಗಿತ್ತು. ಅವರು ಇದುವರೆಗೆ ಒಂದು ದಿನವಾದರೂ ಖಾಯಿಲೆ ಎಂದು ಮಲಗಿದವರಲ್ಲ. ಸದಾಚಾರ ಸಂಪನ್ನರೂ, ನಿಯಮನಿಷ್ಠರೂ ಆಗಿದ್ದ ಅವರಿಗೆ ಖಾಯಿಲೆ ಅಂದರೇನೆಂದು ತಿಳಿದೇ ಇರಲಿಲ್ಲ. ಅವರದು ವಜ್ರ ಶರೀರ. ಅಂತಹವರು ಹಠಾತ್ತಾಗಿ ಹಾಸಿಗೆ ಹಿಡಿದು ಬಿಟ್ಟುದದರಿಂದ ಎಲ್ಲ ರಿಗೂ ಗಾಬರಿಯಾಯಿತು. ಕೇವಲ ಜ್ವರವೆಂದು ಹಾಸಿಗೆಯಲ್ಲಿ ಮಲಗಿದವರು ಹತ್ತೆಂಟು ದಿನಗಳಿಂದಲೂ ಮೇಲೆದ್ದಿರಲಿಲ್ಲ.

ಕೆಲವು ದಿನಗಳ ಹಿಂದೆ ಹಿಂಡಗನಾಳಿನಲ್ಲಿ ನಡೆದ ಹುಜೂರು ಜಮಾ

ಬಂದಿ ಅವರ ಅನಾರೋಗ್ಯಕ್ಕೆ ಕಾರಣವಾಗಿತ್ತು. ಹೊತ್ತು ಹೊತ್ತಿಗೆ ಅನ್ನ ನೀರಿಲ್ಲದೆ ಹಳ್ಳಿಯಿಂದ ಹಿಂಡಗನಾಳಿಗೆ ಅಲೆದಲೆದು ಕಾಲು ಬಿದ್ದುಹೋಗಿತ್ತು. ಆರೋಗ್ಯ ಹೆಚ್ಚು ಕಡಮೆಯಾಯಿತು. ಜಮಾಬಂದಿಯ ಕೊನೆಯ ದಿನ ಊರಿಗೆ ಹಿಂತಿರುಗಿ ಬರುತ್ತಿರುವಾಗ ತುಂಬಾ ಬಾಯಾರಿಕೆಯಾದುದರಿಂದ ಸಿದ್ದನಹಳ್ಳಿಯ ಬಳಿ ಯಾವುದೊ ಭಾವಿಯಿಂದ ನಾಲ್ಕು ಬೊಗಸೆ ನೀರು ಕುಡಿದದ್ದೇ ಸಾಕಾಯಿತು. ಎಂದೂ ಖಾಹಿಲೆ ಬೀಳದ ಶ್ಯಾಮಣ್ಣನವರು ಖಾಹಿಲೆ ಬೀಳಲು ಶ್ಯಾಮಣ್ಣನವರು ಮಲಗಿರುವ ಸುದ್ದಿ ಕೇಳಿ ಮಹೋಬಲಶಾಸ್ತ್ರಿಗಳು ಓಡಿ ಬಂದರು. ಶ್ಯಾಮಣ್ಣನವರ ಜಾತಕವನ್ನು 'ಪೆಟಾರಿ' ಯಿಂದ ತೆಗೆಸಿ ನೋಡಿ ಐವತ್ತನೆಯ ವರ್ಷಕ್ಕೆ ಒಂದು ಗಂಡವಿರುವುದನ್ನು ತಿಳಿದುಕೊಂಡರು. ಶ್ಯಾಮಣ್ಣನವರಿಗೆ ಈಗ ಐವತ್ತನೆಯ ವರ್ಷ ನಡೆಯುತ್ತಿತ್ತು. ಈ ಗಂಡ ಒಂದು ತಪ್ಪಿ ಬಿಟ್ಟರೆ ಇನ್ನು ನಲವತ್ತು ವರ್ಷಗಳ ಕಾಲ ಅವರಿಗೆ ಯಾವ ಶಂಕೆಯಿಲ್ಲವಂತೆ! ಶಾಸ್ತ್ರಿಗಳು ಈ ಅಲ್ಪ ಮೃತ್ಯುವಿನಿಂದ ಶ್ಯಾಮಣ್ಣನವರನ್ನು ಉಳಿಸಿಕೊಳ್ಳಲು ನವಗ್ರಹ ಜಪ, ಮೃತ್ಯುಂಜಯ ಜಪ, ಶಾಂತಿ, ಹರಕೆ, ಎಲ್ಲಾ ಮಾಡಿಸಿದರು. ಮಂತ್ರ ತಂತ್ರಗಳೂ, ಔಷಧೋಪಚಾರಗಳೂ ಬಿಡುವಿಲ್ಲದೆ ನಡೆದವು. ಆದರೂ ಜ್ವರ ತಗ್ಗಲಿಲ್ಲ. ಮನೆಯ ಜನಕ್ಕೆ ಗಾಬರಿಯಾಗಿ, ಕೋಲಾರದಿಂದ ಡಾಕ್ಟರನ್ನು ಕರೆಸಿದರು. ಡಾಕ್ಟರು 'ನ್ಯುಮೋನಿಯಾ' ಅಂತ ಹೇಳಿ ಒಂದೆರಡು ಇಂಜಕ್ಷನ್ ಚುಚ್ಚಿ ಮತ್ತೆ ಬಂದು ನೋಡುವುದಾಗಿ ಹೇಳಿ ಹೋದರು.

ಶ್ಯಾಮಣ್ಣನವರಿಗೆ ತಾವು ಉಳಿಯುವುದಿಲ್ಲವೆಂದು ಹೇಗೋ ತಲೆಗೆ ಬಂದು ತಮ್ಮ ಹೆಣ್ಣುಮಕ್ಕಳನ್ನು ನೋಡಲು ಬಯಸಿದರು. ಆಗಲೇ ನರಸಿಂಹಮೂರ್ತಿ, ಶಾರದೆ, ಶ್ಯಾಮಲೆಯರಿಗೆ ಕಾಗದ ಬರೆದಿದ್ದು.

ತಮ್ಮ ಆಸೆಯಂತೆ ಹೆಣ್ಣುಮಕ್ಕಳು ಬಂದುದನ್ನು ನೋಡಿ ಶ್ಯಾಮಣ್ಣನವರಿಗೆ ಗೆಲುಮುಖವಾಯಿತು. ಶ್ಯಾಮಲೆ ಶಾರದೆಯರನ್ನು ಹತ್ತಿರ ಕೂಡಿಸಿಕೊಂಡು ಅವರ ಕಷ್ಟ ಸುಖಗಳನ್ನೆಲ್ಲ ವಿಚಾರಿಸಿದರು. ಶಾರದೆ ಒಬ್ಬಳೇ ಬಂದುದನ್ನು ನೋಡಿ "ರಾಮಚಂದ್ರ ಏಕೆ ಬರಲಿಲ್ಲ?" ಎಂದರು. ಶಾರದೆ ಯಾವುದೋ ಸಬೂಬು ಹೇಳಿದಳು. ಶ್ಯಾಮಲೆಯಿಂದ ಶ್ಯಾಮಣ್ಣನವರಿಗೆ ಶಾರದೆಯ ದಾರುಣ ಜೀವನ ಕೊಂಚ, ಕೊಂಚ ತಿಳಿಯುತ್ತಿತ್ತು. ಅವನ್ನೆಲ್ಲಾ

ಮಾತನಾಡಿ ತಿಳಿಯಲು ಶ್ಯಾಮಣ್ಣನವರಿಗೆ ಆಸೆ. ಆದರೆ ಅವರ ನಿಶ್ಶಕ್ತಿಯಿಂದ ಅವೆಲ್ಲಾ ಸಾಧ್ಯವಾಗಲಿಲ್ಲ. ಶಾರದೆಯು ತನ್ನ ವಿಷಯಕವಾದ ಯಾವ ಸುದ್ದಿಯನ್ನೂ ತೆಗೆಯದೆ ನಗುಮುಖದಲ್ಲಿಯೇ ಇದ್ದಳು. ಆ ನಗುವಿನ ಹಿಂದೆ ದುಃಖದ ಕಡಲೇ ಇದೆ ಎಂಬುದು ಇತರರಿಗೆ ತಿಳಿಯದೆ ಹೋಗಲಿಲ್ಲ.

ಡಾಕ್ಟರು ಬಂದು ಹೋದ ಮೇಲೆ ಖಾಯಿಲೆ ಕೊಂಚ ವಾಸಿಯಾದಂತೆ ತೋರಿತು. ಜ್ವರ ದಿನ ಕಳೆದಂತೆ ಇಳಿದು ಹೋಗಿ ಒಂದು ದಿನ ಸಂಪೂರ್ಣವಾಗಿ ನಿಂತಿತು. ಜನ ಇನ್ನು ಭಯವಿಲ್ಲವೆಂದುಕೊಂಡರು. ಸೀತಾರಾಮು ಶ್ಯಾಮಲೆ ಬೆಂಗಳೂರಿಗೆ ಹೊರಟರು. ಶಾರದೆಯನ್ನು ಶ್ಯಾಮಣ್ಣನವರೇ ಬಲವಂತ ಮಾಡಿ ಇನ್ನು ನಾಲ್ಕು ದಿನ ಊರಿನಲ್ಲಿ ಇರಿಸಿಕೊಂಡರು.

ಮಳೆಗಾಲ ಆರಂಭವಾಯಿತು. ಮುಂಗಾರು ಮಳೆ ಭೋರ್ ಎಂದು ಹುಯ್ಯತೊಡಗಿತು. ಹಿಡಿದ ಮಳೆ ಹತ್ತೆಂಟು ದಿನ ಬಿಡಲೇ ಇಲ್ಲ. ಕೊರಟೆಯ ಎರಡು ಕೆರೆಗಳು ತುಂಬಿ ಕೋಡಿ ಹೋದವು. ಹಳ್ಳ ಕೊಳ್ಳಗಳೂ, ಗದ್ದೆ ಬಯಲುಗಳೂ ಸಂಮೃದ್ಧಿಯಾಗಿ ನೀರನ್ನು ಉಂಡವು. ಎಲ್ಲಿ ನೋಡಿದರೂ ನೀರೇ ನೀರು. ಸೊಂಪಾಗಿ ಬೆಳೆದ ಹಸಿರು ಗಿಡ ಮರಗಳು, ಕಣ್ಮನಗಳಿಗೆ ಹಿತ ಕೊಡುತ್ತಿದ್ದವು. ಈ ಬಾರಿಯಾದ ಮಳೆಯಿಂದ ಹಳ್ಳಿಯಲ್ಲಿ ಸೋರದ ಮನೆಯೇ ಇಲ್ಲ. ಶ್ಯಾಮಣ್ಣನವರ ಮನೆ ಊರಿಗೆಲ್ಲ ಭಾರಿ ಮನೆ. ಹಂಚಿನ ಮನೆ. ಅದು ಕೂಡಾ ಸೋರಿತ್ತು. ಮನೆಗೆ ಹೊದಿಸಿದ್ದ ಹಂಚುಗಳು ಗಾಳಿಗೆ ಹಾರಿಹೋಗಿ, ಹಾಲಿನ ತುಂಬಾ ಮೊಳಕಾಲುದ್ದ ನೀರು ನಿಂತು ಬಿಟ್ಟಿತ್ತು ಒಂದು ದಿನ. ಅವರ ಮನೆ ಕೆರೆಗೆ ಸಮೀಪವಾಗಿದ್ದ ಕಾರಣ ಮನೆಯಲ್ಲಿ ಜೌಗು ಕಾಣಿಸಿಕೊಂಡಿತ್ತು. ಶ್ಯಾಮಣ್ಣನವರಿಗೆ ವಾಸಿಯಾಗಿದ್ದ ಜ್ವರ ಮತ್ತೆ ಕಾಣಿಸಿಕೊಂಡಿತು. ನಾಲ್ಕು ದಿನ ಮೈ ಬೆಚ್ಚಗಾಗಿ, ಐದನೆಯ ದಿನ ಇಹಲೋಕ ಯಾತ್ರೆಯನ್ನು ಮುಗಿಸಿಬಿಟ್ಟರು.

ಶ್ಯಾಮಣ್ಣನವರ ಮರಣದಿಂದ ಕೊರಟೆ ಮಾತ್ರವಲ್ಲ, ಇಡೀ ಹೊಸಕೋಟೆ ತಾಲ್ಲೂಕೇ ಮರುಗಿತು. “ ಧರ್ಮರಾಯನಂತಹ ಮನುಷ್ಯ. ಒಬ್ಬರಿಗೆ ಒಂದು ಕೇಡು ಬಗೆದಿಲ್ಲ. ಅವರ ಆತ್ಮ ತಣ್ಣಗಿರಲಿ ” ಎಂದು ಅವರ ಸಾವಿನ ಸುದ್ದಿ ಕೇಳಿದ ಜನ ಕೈ ಮುಗಿದರು. ಶ್ಯಾಮಣ್ಣನವರ ಮರಣದಿಂದ

ತಿಂಗಳ ಕಾಲ ಮನೆಯವರಿಗೆ ಹಿಡಿದ ಮಂಕು ಬಿಡಲಿಲ್ಲ. ಎಲ್ಲರಿಗೂ ಶ್ಯಾಮಣ್ಣನವರು ಇನ್ನೂ ಬದುಕಿರುವರೆಂದೇ ಭ್ರಮೆ. ಎಲ್ಲೋ ಯಾತ್ರೆಗೆ ಹೋಗಿದ್ದಾರೆ–ಬರುತ್ತಾರೆ ಎನ್ನುವ ನಂಬಿಕೆ! ಈ ಭಾವನೆ ಜನರಲ್ಲಿ ಎಷ್ಟರ ಮಟ್ಟಿಗೆ ಬೇರೂರಿತ್ತೆಂದರೆ—ರಾತ್ರಿಯ ಕಾಲದಲ್ಲಿ—ಮರಿಸ್ವಾಮಿಗಳ ಗುಡಿಯ ರಜ್ಜೆಯ ಮೇಲೆ ಶ್ಯಾಮಣ್ಣನವರ ದರ್ಶನ ಒಮ್ಮೊಮ್ಮೆ ಆಗುತ್ತದೆಂಬ ಸುದ್ದಿ ಎಲ್ಲರ ಮನೆಯ ಮಾತಾಗಿತ್ತು. ಒಬ್ಬೊಬ್ಬರು ತಾವು ಕಂಡಿದ್ದೇವೆಂದು ಹೇಳಲೂ ಹಿಂಜರಿಯಲಿಲ್ಲ.

ನರಸಿಂಹಮೂರ್ತಿಯೂ ಶ್ಯಾಮಣ್ಣನವರ ಮರಣದಿಂದ ಭೂಮಿಗೇ ಇಳಿದು ಹೋಗಿದ್ದ. ಶ್ಯಾಮಣ್ಣನವರು ಲೀಲಾಜಾಲವಾಗಿ ಹೊತ್ತಿದ್ದ ಹೊರೆ ಯೆಲ್ಲವೂ ಈಗ ಅವನ ಹೆಗಲ ಮೇಲೆ. ಶ್ಯಾಮಣ್ಣನವರು ನೋಡುತ್ತಿದ್ದ ಹತ್ತು ಗ್ರಾಮಗಳ ಶ್ಯಾನುಭೋಗಿಕೆ ಅವನು ನೋಡಬೇಕಾಯಿತು. ಇದರ ಜತೆಗೆ ಮನೆಯ ಸಂಸಾರ, ಜಮೀನು ಸಾಗುವಳಿ ಅವನ ಕೊರಳಿಗೇ ಬಿತ್ತು. ಶ್ಯಾಮಣ್ಣನವರು ಇದ್ದಾಗ ಜಮೀನು ಜಹಗೆಗಳನ್ನು ನೋಡಿಕೊಂಡು, ಮನೆಯ ಆದಾಯ ವೆಚ್ಚ ಗುಣಿಸಿಕೊಂಡು, ನರಸಿಂಹಮೂರ್ತಿ ಆರಾಮವಾಗಿದ್ದ. ಈಗ ಎಲ್ಲಕ್ಕೂ ಅವನೇ ಹೊಣೆ. ಈ ಹೊಣೆಗಾರಿಕೆಯಿಂದ ಅವನಿಗೆ ತಲೆ 'ಚಿಟ್' ಎನಿಸಿಬಿಟ್ಟಿತ್ತು.

ಭಾಗೀರಥಮ್ಮನಂತೂ ತಾನಾಯಿತು–ಅಡಿಗೆಯ ಮನೆ, ದೇವರ ಮನೆ ಯಾಯಿತು–ಅಂತ ಇದ್ದುಬಿಟ್ಟರು. ಅವರ ಎಲ್ಲ ಪ್ರಪಂಚ ಅಷ್ಟರಲ್ಲಿಯೇ ಮುಗಿದು ಹೋಗಿತ್ತು.

ನರಸಿಂಹಮೂರ್ತಿಯ ಹೆಂಡತಿ ನಾಗಮ್ಮ ಮನೆಗೆ ಬಂದಿದ್ದುದರಿಂದ ಮನೆಯ ವಹಿವಾಟವೆಲ್ಲಾ ಅವಳದೇ ಆಯಿತು. ಅವಳಿಗೆ ಅಧಿಕಾರ ಕೊಟ್ಟಿದ್ದು ಚೇಳಿಗೆ ಪಾರುಪತ್ಯ ಕೊಟ್ಟಂತೆ ಆಗಿತ್ತು. ಅವಳೋ ವಿದ್ಯಾವಿನಯವರಿಯದ ಶುದ್ಧ ಶುಂಠಿಕಾಯಿ. ನೋಡಲು ದೊಡ್ಡದೊಡ್ಡಾಗಿ ಕಂಡರೂ, ಅವಳು ತುಂಬಾ ನಚ್ಚು ಮನಸ್ಸಿನವಳು. ಯಾವುದನ್ನೂ ಬಿಚ್ಚಿ ಹೇಳದೆ ಮುಸುಕಿ ನಲ್ಲೇ ಕೆಲಸ ಮಾಡುವ ಮುತ್ಸದ್ದಿ. ಒಂದು ಮಾತಿನಲ್ಲಿ ಹೇಳುವುದಾದರೆ ಆಕೆ ಶ್ಯಾಮಣ್ಣನವರಂತಹ ಮನೆಗೆ ಸೇರಲು ಲಾಯಖ್ಖಾದ ಹೆಣ್ಣೇ ಅಲ್ಲ. ಮನೆಗೆ ಬಂದ ಹೊಸದರಲ್ಲಿ ಶ್ಯಾಮಣ್ಣನವರ ಮನೆಯಲ್ಲಿ ನಡೆಯುವ ಖರ್ಚು

ವೆಚ್ಚವನ್ನು ಕಂಡು ಇದೇನು ಧರ್ಮಛತ್ರವೇ ಅಂತ ಅಚ್ಚರಿಗೊಂಡಿದ್ದಳು. ಅವರ ಧಾರಾಳ ಇವಳ ಸಣ್ಣತನಕ್ಕೆ ಚಿಪ್ಪು ಹಿಡಿಸಿತ್ತು. ಹೀಗೆಯೇ ನಡೆದರೆ ಒಂದು ದಿನ ತಮ್ಮ ಕೈಗೆ ಚಿಪ್ಪು ಬರುವುದು ಖಂಡಿತವೆಂದು ಅವಳು ಅಂದುಕೊಂಡಳು. ಕೇವಲ ಹೊಟ್ಟೆ ಬಟ್ಟೆಗೆ ಇಲ್ಲದ ಕಷ್ಟ ವ್ಯಸನ ಹಚ್ಚಿಕೊಂಡು ತರಲೆ ವ್ಯಾಜ್ಯಗಳಲ್ಲಿ ಕೈಹಾಕಿ, ಅನ್ನ ಹುಟ್ಟಿಸಿಕೊಳ್ಳುತ್ತಿದ್ದ ಕೃಪಣರ ಮನೆಯ ಹುಡುಗಿಗೆ ಹಾಗೆ ಅನ್ನಿಸುವುದರಲ್ಲಿ ಅಚ್ಚರಿಯಿಲ್ಲ. ಶ್ಯಾಮಣ್ಣನವರು ಈ ಮನೆಯ ಗುಣಕ್ಕಿಂತಲೂ ಬಡತನವನ್ನು ನೋಡಿ ತಮ್ಮ ಹುಡುಗನಿಗೆ ನಾಗಮ್ಮನನ್ನು ತಂದುಕೊಂಡು ದೂರದ ನೆಂಟತನವನ್ನು ಸಮೀಪದ ಬಂಧುತ್ವವಾಗಿ ಮಾಡಿಕೊಂಡಿದ್ದರು.

ಶ್ಯಾಮಣ್ಣನವರು ಮನೆಯ ಯಜಮಾನರಾಗಿದ್ದಷ್ಟು ದಿನ ನಾಗಮ್ಮನ ಬಾಲ ಬಿಚ್ಚಲು ಅವಕಾಶವಿರಲಿಲ್ಲ. ಒಂದೆರಡು ಬಾರಿ ತನಗೆ ಸಂಬಂಧಿಸದ ವಿಷಯಕ್ಕೆ ಕೈಹಾಕಿ ಶ್ಯಾಮಣ್ಣನವರಿಂದ ಬೈಸಿಕೊಂಡಿದ್ದಳು. ಒಂದು ದಿನ ಅತ್ತೆ ಸೊಸೆಯರಿಗೆ ಯಾವುದೋ ಮನಸ್ತಾಪವಾಗಿ ಅತ್ತೆಯ ಮೇಲೆ ಗಂಡನಲ್ಲಿ ಚಾಡಿ ಹೇಳಿದಳು. ಇಂತಹ ಚಾಡಿ ಕೇಳಿ ರೂಢಿಯಿಲ್ಲದ ನರಸಿಂಹಮೂರ್ತಿ ಹೆಂಡತಿಗೆ ಚೆನ್ನಾಗಿ ಶಾಸ್ತಿ ಮಾಡಿ, ಬುದ್ಧಿ ಕಲಿಸಿದ್ದ. ಆ ದಿನಲಾಗಾಯ್ತು ತನ್ನ ಕೆಲಸವೆಷ್ಟೋ ಅಷ್ಟರಲ್ಲಿ ಇರುವುದನ್ನು ಕಲಿತಳು. ‘ ಆಗಲಿ ತನ್ನ ಕಾಲ ಬರುತ್ತೆ ’ ಎಂದು ಸಮಾಧಾನ ತಾಳಿಕೊಂಡಳು. ಅವಳೆಂದುಕೊಂಡಿದ್ದಂತೆ ಅವಳ ಕಾಲ ಬಂದೇ ಬಂತು. ಈಗ ಅವಳು ಮನೆಯ ಸಾಂರಾಜ್ಞಿ. ಮನೆಯಲ್ಲಿ ಎಲ್ಲರ ಮೇಲೆ ತನ್ನ ಅಧಿಕಾರ ಚಲಾಯಿಸತೊಡಗಿದಳು.

ಅವಳ ಕ್ರೂರ ನಡೆವಳಿಕೆಗೆ ಮೊದಲು ಬಲಿಯಾದ ವ್ಯಕ್ತಿ ಎಂದರೆ--ಶಾರದೆ.

ಶಾರದೆ ಗಂಡನ ಮನೆಯಲ್ಲಿ ಅನ್ನಕ್ಕೆ ಗತಿಯಿಲ್ಲದೆ ತಮ್ಮ ಮನೆಯಲ್ಲಿ ಬಿದ್ದಿರುವಳೆಂದೇ ಅವಳ ಭಾವನೆ! “ ಹೊಟ್ಟೆಗಿಲ್ಲದವರೆಲ್ಲಾ ಬಂದು ಇರಲು ಇದೊಂದು ಪೂರ್ಣಯ್ಯನ ಛತ್ರ ಕಟ್ಟಿ ಹೋಯಿತೇ ” ಎಂದು ಶಾರದೆಯನ್ನು ಕಂಡಾಗಲೆಲ್ಲ ಗಟ್ಟಿಯಾಗಿ ಗೊಣಗಿಕೊಳ್ಳುವಳು. ಶಾರದೆ ಒಂದು ದಿನ ಕೇಳಿದಳು, ಎರಡು ದಿನ ಕೇಳಿದಳು. ದಿನ ನಿತ್ಯ ಅವಳನ್ನು ಅಕಾರಣವಾಗಿ ಹುರಿದು ಮುಕ್ಕುವುದೇ ನಾಗಮ್ಮನ ಕಸುಬಾಯಿತು. ಇನ್ನು ಇಲ್ಲಿರುವುದು

ಚನ್ನಾಗಿಲ್ಲವೆಂದುಕೊಂಡು ಒಂದು ದಿನ ಭಾಗೀರಥಮ್ಮನಲ್ಲಿ ತಾನು ಬೆಂಗಳೂರಿಗೆ ಹೊರಡುವ ವಿಷಯ ತಿಳಿಸಿದಳು. ಭಾಗೀರಥಮ್ಮನಿಗೆ ನಾಗಮ್ಮನ ಕಿರುಕುಳದಿಂದ ಶಾರದೆ ಬೆಂಗಳೂರಿಗೆ ಹೋಗುತ್ತಿದ್ದಾಳೆಂದು ತಿಳಿದಿದ್ದರೂ ಈಗ ಭಾಗೀರಥಮ್ಮ ಹಲ್ಲು ಕಳಚಿಕೊಂಡ ಹಾವಿನಂತೆ ಆಗಿದ್ದರು. ಅವರು ಶಾರದೆಯನ್ನು ತಬ್ಬಿಕೊಂಡು ತಬ್ಬಿಕೊಂಡು ಗಂಡನನ್ನು ಸ್ಮರಿಸಿಕೊಂಡು ಅತ್ತರು. ಶ್ಯಾಮಣ್ಣನವರು ಇದ್ದಾಗ ಒಂದು ದಿನವಾದರೂ, ಮನೆ ಬೇರೆಯವರದೆನ್ನುವ ಭಾವ ಶಾರದೆಯ ಮನಸ್ಸಿಗೆ ಬಂದಿರಲಿಲ್ಲ. ಶ್ಯಾಮಣ್ಣನವರು ಪ್ರತಿವರ್ಷವೂ ಶಾರದೆಯನ್ನು ಕರೆಸಿಕೊಂಡು ಕುಂಕುಮ ಹಚ್ಚಿ ಹೊಸ ಸೀರೆ ಉಡಿಸಿ, ಕಳುಹಿಸಿ ಕೊಡದೇ ಇರುತ್ತಿರಲಿಲ್ಲ. ಅವರಿಗೆ ಶ್ಯಾಮಲೆಗಿಂತಲೂ ಹೆಚ್ಚಿನ ಪ್ರೀತಿ ಶಾರದೆಯ ಮೇಲೆ. ಪಾಪ, ದಿಕ್ಕಿಲ್ಲದ ಹುಡುಗಿ ಎಂದೋ ಏನೋ. ಈಗ ನರಸಿಂಹಮೂರ್ತಿಯ ದೌಲತ್ತಿನಲ್ಲಿ ಅದೆಲ್ಲಾ ವಜ ಆಗುವ ಸೂಚನೆ ಈಗಲೇ ಕಾಣುತ್ತಿತ್ತು.

"ನಾನು ಹೋಗಿ ಬರುತ್ತೇನೆ ಚಿಕ್ಕಮ್ಮ" ಎಂದಾಗ ಭಾಗೀರಥಮ್ಮ "ಹೋಗಿ ಬಾ ಶಾರದ, ಅವರು ಇಲ್ಲ ಅಂತ ಇಲ್ಲಿಗೆ ಬರೋಕೆ ಸಂಕೋಚ ಪಟ್ಟುಕೊಳ್ಳಬೇಡ! ನನ್ನ ಶ್ಯಾಮಲೆಯಂತೆಯೇ ನೀನೂ ಮನೆಗೆ ಹೆಣ್ಣು ಮಗಳು. ವರ್ಷಕ್ಕೊಮ್ಮೆ ಬಂದು ಹೋಗಿ ಮಾಡುತ್ತಿರಮ್ಮ!" ಎಂದರು. ಅಲ್ಲದೆ ಶಾರದೆಗೆ ಉಡಿ ತುಂಬಿ–ಐದು ರೂಪಾಯಿನ ನೋಟು ಹಾಗೂ ಒಂದು ಕುಪ್ಪಸದ ಕಣ ಕೊಟ್ಟರು. "ಅವರು ಇದ್ದಿದ್ದರೆ ನಿನ್ನನ್ನು ಹಳೆಯ ಸೀರೆಯಲ್ಲಿ ಖಂಡಿತ ಕಳುಹಿಸುತ್ತಿರಲಿಲ್ಲ." ಎಂದು ಬಿಕ್ಕಿ ಬಿಕ್ಕಿ ಅತ್ತರು. ಅವರೊಂದಿಗೆ ಶಾರದೆಯೂ ಅತ್ತು ಕಣ್ಣು ಕೆಂಪಗೆ ಮಾಡಿಕೊಂಡಳು. ಅವಳ ಅಳುವಿನ ಕಾರಣ ಶ್ಯಾಮಣ್ಣನವರಿಲ್ಲದ ಮೇಲೆ ತನ್ನ ಭಾಗಕ್ಕೆ ಇನ್ನು ತವರಿಲ್ಲ ಎಂಬುದು ಒಂದಾದರೆ—ಒಂದು ನರಕದಿಂದ ಮತ್ತೊಂದು ನರಕಕ್ಕೆ ಹೋಗಬೇಕಲ್ಲಾ ಎನ್ನುವ ಚಿಂತೆ ನೂರು.

ಈ ಬಾರಿ ಗಂಡನ ಮನೆಗೆ ಶಾರದೆ ಒಂಟಿಯಾಗಿಯೇ ಬಂದಳು. ನರಸಿಂಹಮೂರ್ತಿ ಬಸ್ಸಿನಲ್ಲಿ ಕೂಡಿಸಿ ಬಂದಿದ್ದ. ಶಾರದೆ ಬಸ್ಸಿಳಿದು ನೇರ ಮನೆಗೆ ಬಂದಳು. ಬಂದು ನೋಡುತ್ತಾಳೆ. ಮನೆಗೆ ಬೀಗ ಬಡಿದಿದೆ. ತಾನು ಹೊರಟು ಬರುವುದಾಗಿ ಬರೆದಿದ್ದ ಕಾಗದ ಗಂಡನಿಗೆ ಸೇರಿತೋ ಇಲ್ಲವೋ

ಎಂದು ಅನುಮಾನವಾಯಿತು. ಗಂಡ ಪಕ್ಕದ ಮನೆಯವರಿಗೇನಾದರು ಬೀಗದ ಕೈ ಕೊಟ್ಟಿರುವನೇನೋ ಎಂದು ಅಕ್ಕಪಕ್ಕದವರನ್ನು ವಿಚಾರಿಸಿದಳು. ಬೀಗದ ಕೈ ಯಾರ ಬಳಿಯೂ ಇರಲಿಲ್ಲ. ಶಾರದ ತನ್ನ ಗಂಡನ ಬಗ್ಗೆ ವಿಚಾರಿಸಲಾಗಿ, ರಾಮಚಂದ್ರ ಶಾರದ ಊರಿಗೆ ಹೋದ ಮೇಲೆ ಒಂದು ಬಾರಿಯೋ ಎರಡು ಬಾರಿಯೋ ಮನೆಗೆ ಬಂದಿದ್ದನಂತೆ! ಇದಕ್ಕೂ ಹೆಚ್ಚಿನ ವಿಷಯ ತಿಳಿಯಲಿಲ್ಲ.

ರಾಮಚಂದ್ರ ಸಂಜೆಯ ವೇಳೆಗೆ ಬಂದಾನೆಂದು ನೆರೆಮನೆ ಪಾತಮ್ಮನ ಮನೆಯಲ್ಲಿ ಇದ್ದುಕೊಂಡು ಕಾದಳು. ಊಟ ತಿಂಡಿಗಳು ಅವರ ಮನೆಯಲ್ಲಿಯೇ ಆಯಿತು. ಬೇಡವೆಂದರೂ ಪಾತಮ್ಮನ ದಾಕ್ಷಿಣ್ಯಕ್ಕೆ ಒಂದೆರಡು ತುತ್ತು ಬಾಯಲ್ಲಿ ಇಡಬೇಕಾಯಿತು.

ಸಂಜೆ ಸರಿಯಿತು. ರಾತ್ರಿಯೂ ಆಯಿತು. ಗಂಡನ ಸುಳಿವೇ ಇಲ್ಲ. ತಾನು ಬರುವ ಸುದ್ದಿಯನ್ನು ಮರೆತು ಬಿಟ್ಟಿರಬೇಕೋ ಏನೋ. ರಾಮಚಂದ್ರನಿಗಾಗಿ ಸುಮಾರು ರಾತ್ರಿ ಹತ್ತರ ತನಕ ಕಾದು ಬೇರೆ ದಾರಿ ಕಾಣದೆ ಮನೆಯ ಕೀಲಿ ಮುರಿಸಿ ಗೃಹಪ್ರವೇಶ ಮಾಡಿದಳು ಶಾರದೆ.

ನೋಡುತ್ತಾಳೆ! ಮನೆಯಲ್ಲಿ ಏನಿದೆ? ಮನೆ ಬೆಕೋ ಎಂದು ಬಾಯಿ ತೆರೆದುಕೊಂಡಿದೆ. ಕಾಲಿಟ್ಟ ಕಡೆ ಒಂದು ಗೇಣು ಕಸ. ಎತ್ತ ತಿರುಗಿದರತ್ತ ಜೇಡನ ಬಲೆ. ಪಾತ್ರೆ ಪದಾರ್ಥಗಳೊಂದೂ ಇಲ್ಲ. ಒಂದೆರಡು ಓಟೆಯಾದ ನೆಗ್ಗಿದ ಪಾತ್ರೆಗಳು ಬಚ್ಚಲಿನಲ್ಲಿ ಅನಾಥ ಶಿಶುಗಳಂತೆ ಅಳುತ್ತಾ ಬಿದ್ದಿದ್ದವು. ಬಟ್ಟೆಬರೆಗಳ ಸ್ಥಿತಿ—ಅವುಗಳಿಗಿಂತಲೂ ದುಃಸ್ಥಿತಿ! ಗಟ್ಟಿಯಾಗಿದ್ದ ಒಂದು ಬಟ್ಟೆಯಿಲ್ಲ. ಮೂಲೆಯಲ್ಲಿ ಬಿಸಾಡಿದ್ದ ಹಳೆಯ ಸೀರೆಯನ್ನು ಹೆಗ್ಗಣ ನಾಲ್ಕಾರು ಕಡೆ ಕಚ್ಚಿಹಾಕಿತ್ತು. ಮನೆಯಲ್ಲಿದ್ದ ಮಂಚ ವಗೈರೆ ಎಲ್ಲವೂ ಮಟ್ಟಮಾಯವಾಗಿತ್ತು.

ಶಾರದೆಯಲ್ಲದೆ ಬೇರೆ ಯಾರಾದರೂ ಈ ಸ್ಥಿತಿಯಲ್ಲಿದ್ದ ಮನೆಯನ್ನು ಕಂಡಿದ್ದರೆ ಬೆಚ್ಚಿ ಬೀಳುತ್ತಿದ್ದರು. ಕಳ್ಳತನ ನಡೆದಿದೆ ಎಂದು ಹುಯಿಲು ಇಡುತ್ತಿದ್ದರು. ಆದರೆ ಶಾರದೆ ಒಂದು ಮಾತನಾಡಲಿಲ್ಲ. ಅವಳ ಮುಖ ಗಂಭೀರವಾಗಿದ್ದರೂ ಕಣ್ಣಿನಲ್ಲಿ ಧಾರಾಕಾರವಾದ ಅಶ್ರುಜಲ!

" ನನ್ನ ಸ್ಥಿತಿ ಇಲ್ಲಿಗೆ ಬಂತೇ!" ಎನ್ನುವ ಉದ್ಗಾರ ಒಮ್ಮೆ ಹೊರಬಿತ್ತು.

ಅಷ್ಟೇ ಅವಳಾಡಿದ ಮಾತು.

ಶಾರದೆ ವಿಷಣ್ಣವದನಳಾಗಿ ಮನೆಯನ್ನು ಸ್ವಚ್ಛಗೊಳಿಸಿ ಮಕ್ಕಳಿಗೆ ಹಾಸಿಕೊಟ್ಟು ತಾನೂ ಮಲಗಿದಳು.

ಶಾರದೆ ಬೆಂಗಳೂರಿಗೆ ಬಂದು ನಾಲ್ಕೈದು ದಿನಗಳಾದರೂ ರಾಮಚಂದ್ರ ಆ ಕಡೆ ತಲೆಯಿಡಲಿಲ್ಲ. ಶಾರದೆಗೆ ಅವನು ಊರಿನಲ್ಲಿ ಇದ್ದಾನೋ ಇಲ್ಲವೋ ಅನುಮಾನವಾಗಿ ಶ್ಯಾಮಲೆಯ ಮನೆಯ ಆಳನ್ನು ರಾಮಚಂದ್ರನ ಆಫೀಸಿಗೆ ಅಟ್ಟಿದಳು. ರಾಮಚಂದ್ರ ಆಗಲಿ ಬರುತ್ತೇನೆ ಎಂಬುದಾಗಿ. ಆಳಿನ ಮೂಲಕ ಹೇಳಿ ಕಳುಹಿಸಿದನೇ ಹೊರತು ಅವನು ಮಾತ್ರ ವಾರವಾದರೂ ಅತ್ತ ಸುಳಿಯಲಿಲ್ಲ. " ಬರಲು ಮನಸ್ಸಿಲ್ಲದ ಗಂಡನನ್ನೇಕೆ ಬಲವಂತವಾಗಿ ಕರೆಸಿಕೊಳ್ಳಬೇಕು " ಎಂದು ಶಾರದೆ ಗಂಡನ ಚಿಂತೆಯನ್ನು ಬಿಟ್ಟಳು. ಅವಳ ಕೈಯಲ್ಲಿದ್ದ ಐದಾರು ರೂಪಾಯಿಗಳಲ್ಲಿ ಸಂಸಾರಕ್ಕೆ ಅವಶ್ಯವೆನಿಸುವ ಪಾತ್ರೆಪದಾರ್ಥಗಳನ್ನು ಕೊಂಡು ಒಂದು ವಾರ ಕಾಲ ಹಾಕಿದಳು. ಅವಳಲ್ಲಿದ್ದ ಹಣ ಮುಗಿದು ಬರಲು ಸಂಸಾರ ಚಕ್ರವನ್ನು ಹೇಗೆ ಮುನ್ನಡೆಸಬೇಕೆಂಬುದು ಅವಳಿಗೆ ಬಗೆಹರಿಯದ ಸಮಸ್ಯೆಯಾಯಿತು. ತುಂಬಿಕೊಂಡು ಲವಲವಿಕೆಯಿಂದ ಇದ್ದ ಮಕ್ಕಳು ಅನ್ನ ನೀರು ಕಾಣದೆ ಒಂದು ವಾರಕ್ಕೇ ಕಂಗೆಟ್ಟರು. ಕೃಷ್ಣವೇಣಿ ಶ್ರೀಧರರು ಒಂದು ವಾರವಾದರೂ ಬಿಸಿನೀರಿನ ಮುಖ ಕಾಣದೆ ಒಣಗಿದರು. ಶಾರದೆಗೆ ಜೀವನವೇ ಅಸಹ್ಯವಾಯಿತು. ಅದರೂ ತನ್ನ ಸ್ಥಿತಿ ಹೀಗಿದೆ ಎಂದು ಅಕ್ಕಪಕ್ಕದ ಮನೆಯವರಿಗೆ ತಿಳಿಸಲಿಲ್ಲ.—ಬೇಡ. ಶ್ಯಾಮಲೆಗಾದರೂ ತಿಳಿಸಬೇಡವೇ—ಅವಳಿಗೂ ತಿಳಿಸಲಿಲ್ಲ. ಸರೀಕರ ಮುಂದೆ ಭಿಕ್ಷಾಪಾತ್ರೆ ಹಿಡಿಯುವುದಕ್ಕೆ ಅವಳ ಅಭಿಮಾನ ಒಪ್ಪದಾಯಿತು. ತಾವು ಉಪವಾಸದಿಂದ ಸತ್ತರೂ ಚಿಂತೆಯಿಲ್ಲ. ಇನ್ನೊಬ್ಬರ ಹಂಗು ಬೇಡ, ಎಂದು ಶಾರದೆ ಗಟ್ಟಿ ಮನಸ್ಸು ಮಾಡಿದಳು. ಆದರೆ ಇದು ಒಂದು ದಿನದ ಕಥೆಯಾದರೆ ಸರಿ. ಸಾಯುವ ತನಕ ಇದೇ ಹಣೆಯಬರಹವಾದರೆ ?........

ಆದಿನ ಶಾರದೆ ಹರಿದ ಗುಡ್ಡೆಯೊಂದಕ್ಕೆ ತೇಪೆಹಾಕುತ್ತಾ ಕುಳಿತಿದ್ದಳು. ಆ ಬೀದಿಗೆ ಅರಿಶಿನ ಕುಂಕುಮಕ್ಕೆಂದು ಬಂದಿದ್ದ ಶ್ಯಾಮಲೆ ಶಾರದೆ ಅನೇಕ ದಿನಗಳಿಂದ ತಮ್ಮ ಮನೆಗೆ ಬಾರದೇ ಇದ್ದುದರಿಂದ ನೋಡಿಕೊಂಡು ಬರಲು

ಅವಳೇ ಬಂದಳು. ಶ್ಯಾಮಲೆ ವರಾಂಡದಲ್ಲಿ ಹೊಲಿಯುತ್ತಾ ಕುಳಿತಿದ್ದ ಶಾರದೆಯನ್ನು ಕಂಡಳು. ಅವಳ ಗುರುತೇ ಸಿಗಲಿಲ್ಲ. ಶಾರದೆ ಉಪವಾಸ ವ್ರತದಿಂದ ಅಷ್ಟು ಬಾಡಿ ಹೋಗಿದ್ದಳು. ಅವಳು ಉಟ್ಟಿದ್ದ ಸೀರೆಯಿಂದ ಅವ ಳನ್ನು ಬ್ರಾಹ್ಮಣಳೆಂದು ಹೇಳಲು ಸಾಧ್ಯವೇ ಇಲ್ಲ.

"ಇದೇನೇ ಶಾರದ! ನೀನು!! ಹೀಗೆ!!!"

ಎಂದು ವಿಸ್ಮಯಗೊಂಡು ಶ್ಯಾಮಲೆ ಹೇಳಿದಾಗಲೇ ಶಾರದೆಗೆ ಆ ಕಡೆ ಗಮನ. ತನ್ನ ತಂಗಿ ತನ್ನ ಬಡತನವನ್ನು ನೋಡಿ ಬಿಟ್ಟಳಲ್ಲಾ ಎಂದು ನಾಚಿಕೆಯಾ ಯಿತು. ಎದ್ದು ಹೋಗಿ ತಂಗಿಗೆ ಚಾಪೆ ಹಾಕಿದಳು. ಅವಳ ಕುಶಲಪ್ರಶ್ನೆ ಮಾಡಿದಳು.

ಆ ವೇಳೆಗೆ ಹೊರಗೆ ಆಡಲು ಹೋಗಿದ್ದ ಕೃಷ್ಣವೇಣಿ ಅಲ್ಲಿಗೆ ಬಂದಳು. ಅವಳನ್ನು ಕಂಡು ಶ್ಯಾಮಲೆಯ ತಾಯಿ ಕರುಳಿಗೆ ಕೊಳ್ಳಿ ಇಟ್ಟಂತಾಯಿತು. ಮಲಿನವಾದ ಲಂಗ ಹಾಕಿಕೊಂಡು ಸೀಕಲು ಸೀಕಲಾಗಿದ್ದ ಕೃಷ್ಣವೇಣಿಯನ್ನು ಶ್ಯಾಮಲೆ ಮೊದಲು ಯಾರದೋ ಶೂದ್ರರ ಹುಡುಗಿ ಎಂದಿದ್ದಳು. ಆದರೆ ಅವಳು ಶಾರದೆಯ ಮಗಳು ಕೃಷ್ಣವೇಣಿ ಎಂದು ತಿಳಿದಾಗ 'ಅಯ್ಯೋ' ಎಂದಳು ಶ್ಯಾಮಲೆ.

"ಶಾರದ, ನೀನು ಹೀಗಿದ್ದೂ ನನಗೇಕೆ ಸುದ್ದಿ ಕೊಡದೆ ಹೋದೆ. ನಮ್ಮ ಮನೆಗೆ ಏಕೆ ಬರಲಿಲ್ಲ?" ಎಂದು ಶಾರದೆಯನ್ನು ಅಪ್ಪಿ ಅತ್ತು ಬಿಟ್ಟಳು. ಅವಳು—ರಾಮಚಂದ್ರ ಮನೆಗೆ ಬಂದಿದ್ದಾನೆ. ಅದಕ್ಕೋಸ್ಕರವೇ ತಮ್ಮ ಮನೆಗೆ ಶಾರದೆ ಬರಲಿಲ್ಲ ಎಂದು ಊಹಿಸಿದ್ದಳು.

"ನಾನು ಯಾವ ಮುಖವಿಟ್ಟುಕೊಂಡು ನಿಮ್ಮ ಮನೆಗೆ ಬರಲಿ ತಂಗಿ" ಎಂದಳು ಕಣ್ಣೀರು ಮಿಡಿಯುತ್ತಾ ಶಾರದೆ.

"ನನ್ನನ್ನು ನೀನು ನಾಗತ್ತಿಗೆ ಎಂದು ತಿಳಿದೆಯೋ ಶಾರದ! ನಾನೇನು ನೆರೆಮನೆಯವಳೇ? ನೀನು ಇಷ್ಟು ಕಷ್ಟದಲ್ಲಿ ಇದ್ದುಕೊಂಡೂ, ನನಗೇಕೆ ಒಂದು ಮಾತೂ ಹೇಳದೆ ಹೋದೆ........ ಈ ಮಕ್ಕಳನ್ನು ಅನ್ನ ನೀರಿಲ್ಲದೆ ಕೊಲ್ಲಲು ನಿನಗೆ ಮನಸ್ಸು ಹೇಗಾಯಿತು........?" ಎಂದು ಬೈದು ಬಿಟ್ಟಳು ಶ್ಯಾಮಲ.

ಶಾರದೆಗೆ ತನ್ನ ತಪ್ಪು ಅರಿವಾಯಿತು. ನಾಗತ್ತಿಗೆ ಹಾಗಿದ್ದ ಮಾತ್ರಕ್ಕೆ

ಬೆನ್ನಿನಲ್ಲಿ ಬಿದ್ದ ತಂಗಿಗೂ ಹೆಚ್ಚಾಗಿದ್ದ ಶ್ಯಾಮಲೆಯ ಸಹಾಯವನ್ನು ತಾನು ಕಡೆಗಣಿಸಿ ಮಕ್ಕಳನ್ನು ಸೊರಗಿಸಿದುದು ತಪ್ಪಾಯಿತೆನಿಸಿತು. ಗಂಡನಿದ್ದೂ ಇತರರಿಂದ ಅಕಾರಣವಾಗಿ ಸಹಾನುಭೂತಿ ಬೇಡುವ ಎಂತಹ ಹೀನಬಾಳು ತನ್ನದಾಯಿತು ಎಂದು— ತನ್ನ ಅನಾಥ ಸ್ಥಿತಿಯನ್ನು ನೆನೆದು ಅವಳಿಗೆ ಸಂಕಟವಾಯಿತು.

" ಗಂಡನಿಗೆ ಬೇಡವಾದ ಮೇಲೆ ಕ್ಷಣ ಕಾಲ ಬದುಕಿರಬಾರದು ತಂಗಿ " ಎಂದಳು ಅಳುತ್ತಾ.

ಅಪರೂಪಕ್ಕೆ ಮನೆಗೆ ಬಂದ ತಂಗಿಗೆ ಕಣ್ಣೀರಿನ ಅಭಿಷೇಕವೇ ಎಂದು ಸಮಾಧಾನ ತಂದುಕೊಂಡು ಕಾಫಿ ಮಾಡಲು ಎದ್ದಳು. ಶಾರದೆ ತನಗಾಗಿ ಕಾಫಿ ಮಾಡಿದರೆ ಶ್ರೀಧರನ ಒಪ್ಪತ್ತಿನ ಊಟಕ್ಕೆ ಕಲ್ಲು ಬೀಳುವುದೆಂದು ಹೆದರಿ ಶ್ಯಾಮಲೆ ಕಾಫಿ ಬೇಡವೆಂದು ಪ್ರತಿಭಟಿಸಿದಳು. ಶಾರದೆ ಎಷ್ಟೋ ಬಲವಂತ ಮಾಡಿದಳು. ' ಉಹೂಂ ' ಎಂದ ಬಾಯಲ್ಲಿ ' ಹೂಂ ' ಎನಿಸಲು ಅವಳಿಂದ ಸಾಧ್ಯವಾಗಲೇ ಇಲ್ಲ!

ಶ್ಯಾಮಲೆ ಮನೆಗೆ ಹೋಗುವಾಗ ಶಾರದೆಯನ್ನು ತನ್ನ ಮನೆಗೆ ಊಟಕ್ಕೆ ಕರೆದಳು. ನೆಪಮಾತ್ರಕ್ಕೆ ಮಗ ಪುಟ್ಟುವಿನ ಹುಟ್ಟಿದ ಹಬ್ಬ. ಆದರೆ ಶ್ಯಾಮಲೆಯ ಉದ್ದಿಶ್ಯ ಕಂಗೆಟ್ಟ ಶಾರದೆಯನ್ನು ಒಂದೆರಡು ದಿನಗಳ ಮಟ್ಟಿಗಾದರೂ ತನ್ನ ಮನೆಯಲ್ಲಿಟ್ಟುಕೊಂಡು ಉಪಚರಿಸುವುದೇ ಆಗಿತ್ತು.

ಶಾರದೆ ಎಲ್ಲಿ ತಪ್ಪಿಸಿಕೊಳ್ಳುವಳೋ ಎಂದು ಶ್ಯಾಮಲೆ ಬೆಳಗಾಗುತ್ತಲೂ ಆಳುಮಗನನ್ನು ಅಟ್ಟಿದಳು. ಶಾರದೆಯನ್ನು ಮನೆಗೆ ಕರೆತರಬೇಕಾದರೆ ಅವನಿಗೆ ಸಾಕುಸಾಕಾಯಿತು. ಶಾರದೆ ಮನೆಗೆ ಬಂದೊಡನೆ ಅವಳಿಗೂ ಅವಳ ಮಕ್ಕಳಿಗೂ, ಅಭ್ಯಂಜನ ಸ್ನಾನವಾಯಿತು. ಅನಂತರ ಹೊಟ್ಟೆತುಂಬ ತಿಂಡಿ. ಅದರ ಹಿಂದೆಯೇ ರುಚಿ ರುಚಿಯಾದ ಭಕ್ಷ್ಯ ಭೋಜ್ಯ. ಅನ್ನದ ಮುಖ ಕಂಡು ಎಷ್ಟೋ ದಿನಗಳಾಗಿದ್ದ ಕೃಷ್ಣವೇಣಿ ಬಕಾಸುರನಂತೆ ಕೊಟ್ಟಿದ್ದನ್ನೆಲ್ಲಾ ಕಬಳಿಸಿ, ಎಲ್ಲರ ಪರಿಹಾಸ್ಯಕ್ಕೆ ಗುರಿಯಾದಳು.

" ಶಾರದ, ಮನೆಯಲ್ಲಿ ಏನಿದೆ ಅಂತ ಹೋಗ್ತಿ. ಇಲ್ಲಿ ಬಂದು ನಾಲ್ಕು ದಿನ ನೆಮ್ಮದಿಯಾಗಿ ಇರಬಾರದೇ ? " ಎಂದು ತನ್ನ ಚಮತ್ಕಾರವನ್ನೆಲ್ಲಾ ಖರ್ಚು ಮಾಡಿ, ಶಾರದೆಯನ್ನು ಮನೆಯಲ್ಲಿಯೇ ಉಳಿಸಿಕೊಂಡಳು ಶ್ಯಾಮಲೆ.

ಶಾರದ ಶ್ಯಾಮಲೆಯ ದಾಕ್ಷಿಣ್ಯಕ್ಕಾಗಿ, ಅವಳ ಮನೆಯಲ್ಲಿ ನಾಲ್ಕೈದು ದಿನವಿದ್ದಳು. ಒಂದು ದಿನ ಭಾನುವಾರ ಶ್ಯಾಮಲೆಗೆ ಶಾರದೆಯೊಡನೆ ಸಿನಿಮಾ ನೋಡಬೇಕೆನ್ನಿಸಿತು. ಸೂಚನೆಯನ್ನು ಗಂಡನ ಮುಂದೆ ಇಟ್ಟೊಡನೆಯೇ ಅವನ ಅಂಗೀಕಾರವೂ ಸಿಕ್ಕಿತು. ಇನ್ನೇನು? ಮ್ಯಾಟನಿಗೆ ಮನೆಯವರೆಲ್ಲಾ ಹೊರಟೇ ಬಿಟ್ಟರು. ಸಿನಿಮಾ ನೋಡಿಕೊಂಡು ಬರುತ್ತಿದ್ದಾಗ ಶೇಷಾದ್ರಿ ಪುರದ 'ಸರ್ಕಲ್' ಬಳಿ ಯಾರೋ ಒಬ್ಬ ವ್ಯಕ್ತಿ ಸೈಕಲ್ ಮೇಲೆ ಹೋಗುತ್ತಾ ತಮ್ಮ ಕಡೆ ಹತ್ತೆಂಟು ಬಾರಿ ನೋಡಿಕೊಂಡು ಹೋದುದನ್ನು ಸೀತಾರಾಮು ಕಂಡ.

"ಶ್ಯಾಮಲ, ಅಲ್ಲಿ ಸೈಕಲ್ ಮೇಲೆ ಹೋಗುತ್ತಿರೋನು ನಮ್ಮ ಶಾರದೆಯ ಗಂಡ ರಾಮಚಂದ್ರನಿದ್ದ ಹಾಗೆ ಇದೆಯಲ್ಲ...." ಎಂದ ಹೆಂಡತಿಗೆ.

ಏನೋ ಮಾತಿನಲ್ಲಿ ಮಗ್ನರಾಗಿದ್ದ ಶಾರದ ಶ್ಯಾಮಲೆಯರು ಈ ಮಾತು ಕೇಳಿ ಆ ವ್ಯಕ್ತಿಯ ಕಡೆ ದೃಷ್ಟಿ ಹೊರಳಿಸಿದರು. ಆ ವೇಳೆಗೆ ಆ ವ್ಯಕ್ತಿ ಸುಮಾರು ನೂರು ಮಾರು ದೂರದಲ್ಲಿ ಹೋಗಿಬಿಟ್ಟಿದ್ದ. ಅವನನ್ನು ಇಂಥವನೇ ಎಂದು ಗುರುತು ಹಚ್ಚಲು ಅವರಿಬ್ಬರಿಗೂ ಸಾಧ್ಯವಾಗದಿದ್ದರೂ, ಶಾರದೆ ಅಂದಳು, "ಸಂದಿಗೊಂದಿಗಳನ್ನೆಲ್ಲಾ ಅಲೆಯೋ ಅವರು—ಇಲ್ಲಿ ಬರೋದು ಹೆಚ್ಚೆ?"

ಈ ಮಾತು ಕೇಳಿ ಕ್ಷಣಕಾಲ ಸುಮ್ಮನಿದ್ದು ಶ್ಯಾಮಲೆ ಹೇಳಿದಳು—"ಶಾರದ, ನೀನೇನು ತಿಳಿಯದಿದ್ರೆ ಒಂದು ಮಾತು! ಇನ್ನೊಮ್ಮೆ ಯಾಕೆ ಪ್ರಯತ್ನಿಸಬಾರದೂ ಅಂತೀನಿ!"

"ಯಾತಕ್ಕೆ?"

"ನಿಮ್ಮ ಸಂಸಾರನ್ನ........"

"ಆ ಕಥೆ ಎಂದೋ ಮುಗಿಯಿತು ಶ್ಯಾಮಲೆ! ಆ ಸುಖಾನ್ನ ನಾನು ಕೇಳಿಕೊಂಡು ಬಂದಿಲ್ಲಮ್ಮಾ!"

"ಹಾಗಾದ್ರೆ ನೀನು ಯಾವಾಗ್ಲೂ ಹೀಗೇ ಇರಬೇಕೂಂತ ಇದ್ದೀಯಾ?"

"ಹೀಗೇಂತಂದ್ರೆ?"

"ಅಲ್ಲಿ ಮಕ್ಕಳುಮರಿ ಕಟ್ಟಿಕೊಂಡು ಒಬ್ಬೊಂಟಿಗಿತ್ತಿಯಾಗಿ ನೀನು

ಎಷ್ಟು ದಿನಾಂತ ಹೀಗಿರೋಕ್ಕಾಗುತ್ತೆ ? ಅವುಗಳ ಹೊಟ್ಟೆ ಬಟ್ಟೆಗೆ ಹೇಗೆ ಅಂತ ಯೋಚಿಸಬೇಡವೇ ? "

" ಹೌದು. ಇದು ಯೋಚಿಸುವ ವಿಷಯ. ಶಾರದೆ ಈ ಮೊದಲೇ ಯೋಚಿಸಿದ್ದಳು. ಯಾವುದಾದರೂ ಗೌರವಕ್ಕೆ ಕುಂದಿಲ್ಲದ ಕಡೆ ಚಾಕರಿಗೆ ಸೇರಿಕೊಂಡು ದುಡಿಯಬೇಕೆಂದು.

ಶಾರದೆ ಶ್ಯಾಮಲೆಯ ಮುಂದೆ ತನ್ನ ಆಲೋಚನೆಗಳನ್ನು ಮಂಡಿಸಿದಾಗ ಶ್ಯಾಮಲೆಗೆ ತುಂಬಾ ಅವಮಾನವಾದಂತಾಗಿ ದುಃಖವಾಯಿತು. " ಹೆಣ್ಣಾಗಿ ಹುಟ್ಟಿದ ಮೇಲೆ ಅವಳು ಎಷ್ಟೇ ಬುದ್ಧಿವಂತಳಿರಲಿ, ಎಷ್ಟೇ ವಿದ್ಯಾವತಿಯಿರಲಿ ಗೃಹಿಣೀಪಟ್ಟವೇ ಅವಳಿಗೆ ಭೂಷಣ ! ಶಾರದ! ದುಡಿದು ತರುವುದು ಗಂಡಸಿನ ಕೆಲಸ. ತಂದುದನ್ನು ಸದ್ವಿನಿಯೋಗ ಪಡಿಸುವುದು ಹೆಣ್ಣಿನ ಕೆಲಸ! " ಎಂದಳು ಶ್ಯಾಮಲೆ.

" ಹೌದು ನಿನ್ನ ಮಾತು ನಿಜ. ಆದರೆ ದುಡಿಯುವುದು ಅನಿವಾರ್ಯವಾದರೆ ? "

" ಅನಿವಾರ್ಯವಾದರೆ ಹೊಟ್ಟೆಪಾಡಿಗೆ ಎಂಥದೋ ಒಂದು ಮಾರ್ಗ ತೀರದೇ ಇದೆ. ಆದರೆ ನಿನ್ನದು ಹಾಗಲ್ಲ. ದುಡಿದು ತರುವ ಗಂಡನು ಇರುವಾಗ ನೀನೂ ದುಡಿಯಲು ಹೊರಡುವುದು ಯಾಕೋ ನನಗೆ ಚೆನ್ನಾಗಿ ಕಾಣಿಸದು. ನಿನ್ನ ಬಗ್ಗೆ ಭಾವನ ಮನಸ್ಸು ಎಷ್ಟೇ ಕೆಟ್ಟಿದ್ದರೂ ನಿನ್ನನ್ನು ಸಾಕುವ ಹೊಣೆಗಾರಿಕೆ ಅವನದೇ ಇದೆ. ಇದಕ್ಕೆ ಕಾನೂನಿನ ಬೆಂಬಲವೂ ಇದೆ. ಹೀಗಿರುವಲ್ಲಿ ಅವನೊಡನೆ ಮಾತನಾಡಿ ಯಾವುದನ್ನೂ ಏಕೆ ಇತ್ಯರ್ಥ ಮಾಡಬಾರದು ? ನಿನ್ನೊಂದಿಗೆ ಸಂಸಾರ ಮಾಡಿಕೊಂಡಿರುವುದಾದರೆ ನನಗೂ ಸಂತೋಷ. ಹಾಗಿಲ್ಲದೆ ಹೋದರೆ ನಿನ್ನ ಹಾಗೂ ನಿನ್ನ ಮಕ್ಕಳ ಹೊಟ್ಟೆ ಬಟ್ಟೆಗೆ ಒಂದಿಷ್ಟು ಹಣ ಕೊಡಲೀಳು ! ಹೇಗೂ ದೊಡ್ಡ ಕೆಲಸದಲ್ಲಿದ್ದಾನೆ. ಕೈತುಂಬಾ ಸಂಬಳ ಬರುತ್ತಿದೆ. ಎಲ್ಲವನ್ನೂ ಏಕೆ ಆ ರಂಡೆಗೆ ಇಡಬೇಕು ? "

ಇದು ಸೂಕ್ತವಾದ ಆಲೋಚನೆಯೇ ಎಂದು ಶಾರದ ಒಪ್ಪಿದಳು. ಈ ಬಗ್ಗೆ ಮಾತನಾಡಲು ಶ್ಯಾಮಲೆಯ ಗಂಡನನ್ನು ಆರಿಸಿದಳು. ಶಾರದೆಯ ಬಗ್ಗೆ ತುಂಬಾ ಅನುಕಂಪವಿದ್ದ ಸೀತಾರಾಮು ಈ ಕೆಲಸಕ್ಕೆ ಸಂತೋಷದಿಂದ ಒಪ್ಪಿದ. ಹೇಗಾದರೂ ಶಾರದೆ ನೆಮ್ಮದಿಯಾಗಿರುವುದು

ಅವನಿಗೆ ಬೇಕಿತ್ತು.

ಒಂದು ದಿನ ಸೀತಾರಾಮು ಬಿಡುವು ಮಾಡಿಕೊಂಡು ರಾಮಚಂದ್ರನನ್ನು ಅವನ ಆಫೀಸಿನಲ್ಲಿ ಸಂಜೆ ಕಂಡ. ಅವನೊಡನೆ ಕೊಂಚ ಗೃಹಕೃತ್ಯದ ವಿಷಯ ಮಾತನಾಡುವುದಿದೆ ಎಂದು ಹೇಳಿ ಅವನನ್ನು ಕಬ್ಬನ್ ಪಾರ್ಕಿಗೆ ಕರೆದುಕೊಂಡು ಹೋದ. ಅಲ್ಲಿನ ರೆಸ್ಟೋರೆಂಟಿನಲ್ಲಿ ತನ್ನ ಖರ್ಚಿನಲ್ಲೇ ಹೊಟ್ಟೆಯಾರ ತಿಂಡಿಯನ್ನು ಕೊಡಿಸಿದ. ಅನಂತರ ಅಲ್ಲಿದ್ದ ಹಸಿರು ಹುಲ್ಲುಗಂಬಳಿಯ ಮೇಲೆ ಕುಳಿತು, ತಾನು ಬಂದ ಕೆಲಸವನ್ನು ಸಕಾರಣವಾಗಿ, ಸರಳವಾಗಿ ತಿಳಿಸಿದ.

" ನಾನು ಅವಳೊಂದಿಗೆ ಒಮ್ಮನಸ್ಸಿನಿಂದ ಸಂಸಾರ ಮಾಡಿಕೊಂಡಿರಲು ಸಾಧ್ಯವೇ ಇಲ್ಲ. ಇದು ಬಿಟ್ಟು ಬೇರೆ ಮಾತು ಇದ್ದರೆ ಹೇಳಿ " ಎಂದು ಖಡಾ ಖಂಡಿತವಾಗಿ ಹೇಳಿಬಿಟ್ಟ ರಾಮಚಂದ್ರ.

" ಏಕೆ ಸಾಧ್ಯವಿಲ್ಲ—ಕೇಳಬಹುದೇ ? " ಎಂದ ಸೀತಾರಾಮು.

" ಅದು ನಮ್ಮ ನಮ್ಮ ವಿಷಯ. ಆ ಬಗ್ಗೆ ನಾನೇನೂ ಹೇಳಲಾರೆ ಕ್ಷಮಿಸಿ " ಎಂದ ಇಂಗ್ಲೀಷಿನಲ್ಲಿ.

" ಆ ವಿಷಯ ಅಷ್ಟು ಅಂತರಂಗದ್ದಾದರೆ ಒಮ್ಮೆ ಶಾರದಕ್ಕನೊಡನೆ ಮಾತನಾಡಿ ಬರಬಹುದಲ್ಲ ! "

" ಅವಳ ಮುಖದರ್ಶನ ಮತ್ತೆ ಮಾಡುವುದಿಲ್ಲ ! "

" ಕಾರಣ ? "

" ಷಿ ಈಸ್ ಎ ಬಿಚ್ ( ಅವಳು ಹೆಣ್ಣು ನಾಯಿ ) ಅವಳ ನಡತೆ ಸರಿಯಾಗಿಲ್ಲ ! " ಈ ಮಾತು ಕೇಳಿ ಸೀತಾರಾಮುವಿಗೆ ಆಕಾಶ ಬಂದು ಅಪ್ಪಳಿಸಿದ ಅನುಭವವಾಯಿತು.

" ನೀವು ಶಾರದಕ್ಕನ ವಿಷಯದಲ್ಲಿ ವಿಚಾರಿಸದೆ ಹಾಗೆಲ್ಲಾ ದೂರುವುದು ಸರಿಯಲ್ಲ ! ಎನ್ನಲೇ ಬೇಕಾಯಿತು ಸೀತಾರಾಮು.

" ಆ ಬಗ್ಗೆ ನನಗೆ ಬೇಕಾದಷ್ಟು ವರದಿ ಬಂದಿದೆ. ನಾನೇ ಖುದ್ದು ಒಮ್ಮೆ ನೋಡಿದ್ದೇನೆ ! " ಸೀತಾರಾಮು ಈ ಮಾತು ಕೇಳಿ ಉಗುಳು ನುಂಗಿದ. ಬಹುಶಃ ತಾವು ಸಿನಿಮಾದಿಂದ ಹಿಂತಿರುಗಿ ಬರುತ್ತಿದ್ದಾಗ ತಮ್ಮನ್ನು

ರಾಮಚಂದ್ರ ಕಂಡು ಈ ಮಾತು ಆಡುತ್ತಿರುವನೆಂದು ಊಹಿಸಿದ ಸೀತಾರಾಮು. ಹಾಗಾದರೆ ಸೈಕಲ್ಲಿನ ಮೇಲೆ ಹೋಗುತ್ತಿದ್ದವನು ರಾಮಚಂದ್ರ ! ತನ್ನ ಹೆಂಡತಿಯೊಡನೆ ಶಾರದೆ ಸಿನೆಮಾಕ್ಕೆ ಬಂದ ಮಾತ್ರಕ್ಕೆ ರಾಮಚಂದ್ರ ಇಷ್ಟೆಲ್ಲಾ ಸಂಶಯ ಪಡಬೇಕೇ ? " ಎಂದು ತನ್ನಲ್ಲೇ ಮರುಗಿದ.

" ಹಾಗಾದರೆ ಈ ವಿಷಯದಲ್ಲಿ ಮಾತನಾಡಲು ನನಗೆ ದಾರಿಯಿಲ್ಲ. ಹೋಗಲಿ ಆಕೆಯ ಹೊಟ್ಟೆಬಟ್ಟೆಯ ಪಾಡು ಇತ್ಯರ್ಥ ಮಾಡಿ "

" ಅದು ಅವಳು ಯಾರಿಗೆ ಜೋತು ಬಿದ್ದಿದ್ದಾಳೋ ಆ ಮಿಂಡನ ಜವಾಬ್ದಾರಿ ! "

ಈ ಮಾತು ಕೇಳಿ ಸೀತಾರಾಮುವಿಗೆ ಮೈ ಧಗಧಗನೆ ಉರಿಯಿತು.

" ರಾಮಚಂದ್ರರಾವ್ ಕೊಂಚ ನಾಲಿಗೆ ಬಿಗಿ ಹಿಡಿದು ಮಾತನಾಡಿ ! " ಎಂದ ಕೋಪದಿಂದ.

" ಯಾಕೆ ಸಿಟ್ಟಾಗುತ್ತೀರಿ ಮಿಸ್ಟರ್ ಸೀತಾರಾಮ್. ನಾನು ಹೇಳಿದುದರಲ್ಲಿ ತಪ್ಪೇನಿದೆ ಹೇಳಿ ? "

ಇಂತಹ ಮಾನಗೆಟ್ಟವನೊಡನೆ ಮಾತನಾಡಿ ಪ್ರಯೋಜನವಿಲ್ಲವೆಂದು ಸೀತಾರಾಮು ಕಡೆಯದಾಗಿ ಹೇಳಿದ.

" ಹಾಗಾದರೆ ನಾನು ಶಾರದಕ್ಕನಿಗೆ ಏನೆಂದು ಹೇಳಲಿ ? "

" ಹೇಳಲು ನಾನು ಯಾರು ? ಕೇಳಲು ಅವಳು ಯಾರು ? ಅವಳಿಗೂ ನನಗೂ ಯಾವ ಸಂಬಂಧ ? "

" ನೀವು ಹಾಗೆನ್ನಬಹುದೇ? ಆಕೆ ನಿಮ್ಮ ಹೆಂಡತಿ--ಮರೆಯಬೇಡಿ "

" ಹಾಗೋ. ಅವಳು ನನ್ನ ಹೆಂಡತಿಯಾಗಿದ್ದರೆ, ಅವಳ ಹಕ್ಕು ಏನುಂಟೋ ಅದನ್ನು ಕೋರ್ಟಿನಲ್ಲಿ ದಕ್ಕಿಸಿಕೊಳ್ಳಲಿ.—ನಾನು ಬರ್‍ತೇನೆ. ಗುಡ್ ಬೈ ! " ಎಂದೆನ್ನುತ್ತಾ ಎದ್ದು ಹೊರಟೇಬಿಟ್ಟ ರಾಮಚಂದ್ರ.

ಸೀತಾರಾಮು ಅವನು ಕತ್ತಲಲ್ಲಿ ಕರಗಿ ಹೋಗುವುದನ್ನೇ ನೋಡುತ್ತಿದ್ದು ಅನಂತರ ತಾನೂ ಕತ್ತಲಲ್ಲಿ ಕರಗಿ ಹೋದ.

೯

ಶಾರದೆಗೆ ತುಂಬಾ ಅಳುಬಂತು. ಗಂಡ ತನ್ನನ್ನು ಎಂದೆಂದಿಗೂ ಬಿಟ್ಟು ಬಿಟ್ಟನೆಂದು ಅಲ್ಲ. ಇನ್ನು ಮೇಲೆ ಗಂಡನಿಂದ ತನ್ನ ಸಂಸಾರಕ್ಕೆ ಒಂದು ಚಿಕ್ಕಾಸಿನ ಸಹಾಯ ದೊರೆಯದೆಂದು ಅಲ್ಲ. ಆದರೆ ಗಂಡ ತನ್ನ ನಡತೆಯ ಬಗ್ಗೆ ಶಂಕಿಸಿದನಲ್ಲಾ ಎಂದು, ಶಾರದೆಗೆ ದುಃಖವಾಯಿತು. ತಾನು ಯಾರನ್ನು ಪತಿದೈವವೆಂದು ನಂಬಿದ್ದಳೋ ಅವನು ನಡುನೀರಿನಲ್ಲಿ ತನ್ನನ್ನು ಕೈಬಿಟ್ಟದು ಮಾತ್ರವಲ್ಲದೆ ತನ್ನ ಮುಂದಿನ ದಾರಿಯನ್ನೂ ತೊಡಕು ಮಾಡಲು ಇಲ್ಲದ ಭೂತ ಪ್ರೇತಗಳನ್ನು ಎಬ್ಬಿಸಿದನಲ್ಲಾ ಎಂದು ಗಂಡನನ್ನು ಬೈದಳು. ಮೊದಲಿನಿಂದಲೂ ರಾಮಚಂದ್ರ ಎಂಥವನೆಂಬುದು ಲೋಕಕ್ಕೆ ತಿಳಿದಿತ್ತು. ಅಂಥವನೊಂದಿಗೆ ತಾನು ಸಂಸಾರ ಮಾಡಲು ಬರಲೇ ಬಾರದಿತ್ತು ಎಂದು ತನ್ನನ್ನು ರಾಮಚಂದ್ರನ ಕತ್ತಿಗೆ ಕಟ್ಟಿದ ಕಾವೇರಮ್ಮ ಶಾಮಣ್ಣೋರು ಶಾಸ್ತ್ರಿಗಳು ಎಲ್ಲರನ್ನೂ ತರಾಟೆಗೆ ತೆಗೆದುಕೊಂಡಳು. ಪಾಪ ತನ್ನ ದುರ್ವಿಧಿಗೆ, ಹಣೆಯ ಬರಹಕ್ಕೆ ಅವರೇನು ಮಾಡುತ್ತಾರೆ? ಅವರೆಲ್ಲರೂ ತನ್ನ ಸುಖಕ್ಕಾಗಿ ಶ್ರಮಿಸಿದರು. ಆದರೆ ತಾನು ಹಿಂದೆ ಮಾಡಿದ್ದ ಕರ್ಮಸಂಚಯನ ಕರಗದಿರುವಾಗ ಯಾರು ತಾನೇ ಏನು ಮಾಡಬಲ್ಲರು? ಯಾರನ್ನು ದೂರಿ ಏನು ಪ್ರಯೋಜನ! ಎಂದು ಸಮಾಧಾನ ತಂದುಕೊಂಡರೂ ತಾನು ತಂಗಿಯ ಮನೆಯಲ್ಲಿ ನಾಲ್ಕು ದಿನ ಇದ್ದ ಮಾತ್ರಕ್ಕೆ ತನ್ನ ನಡತೆಯನ್ನು ಶಂಕಿಸಿ, ತಂಗಿಯ ಗಂಡನ ಮುಖಕ್ಕೆ ಮಸಿ ಬಳಿಯುವ ಪ್ರಯತ್ನ ಗಂಡ ಮಾಡಿದನಲ್ಲಾ ಎಂದು ಗಂಡನ ವಿಷಯದಲ್ಲಿ ಹುಟ್ಟಿದ ಜಿಗುಪ್ಸೆ ಏನು ಮಾಡಿದರೂ ಹೋಗಲಿಲ್ಲ. ತನ್ನ ಹೊಸ ಜೀವನ ಆರಂಭವಾಗಿ, ಇನ್ನೂ ತಿಂಗಳು ಕೂಡ ಕಳೆದಿಲ್ಲ. ಆಗಲೇ ಎಷ್ಟೆಲ್ಲ ಹುಯಿಲು ಎಬ್ಬಿಸಿದ್ದಾನೆ? ತಾನು ಜೀವನೋಪಾಯಕ್ಕಾಗಿ ಯಾವುದಾದರೊಂದು ವೃತ್ತಿ ಹಿಡಿದರೆ ತನ್ನ ಬಗ್ಗೆ ಗಂಡ ಏನು ಮಾಡುತ್ತಾನೆ ಏನು ಮಾಡುವುದಿಲ್ಲ ಎಂದು ಹೇಳುವುದು ಕಷ್ಟ. ಅಬಲೆಯ ಮೇಲೆ, ಸಮಾಜದಲ್ಲಿ ಪ್ರತಿಷ್ಠಿತನಾಗಿರುವ ಗಂಡಸು ಕೈಮಾಡಿದರೆ ಈ ಮಲ್ಲಯುದ್ಧದಲ್ಲಿ ಸೋಲುವುದು ದಿಕ್ಕಿಲ್ಲದ ಪರಿತ್ಯಕ್ತ ಹೆಣ್ಣೇ ಹೊರತು ಗಂಡಲ್ಲ! ಸಮಾಜದ ಸಾವಿರ ಬಗೆಯ ಕೊಂಬು ಕಹಳೆ, ಮದ್ದು ಗುಂಡುಗಳು ಎಲ್ಲವೂ ಗಂಡನ ಕಡೆಗೇ ಇರು

ವಾಗ ಆ ಯುದ್ಧದಲ್ಲಿ ತಾನು ಸೋಲುವುದೇ ನಿಜ. ಆಗಲಿ ಶಾರದೆ ಕಣ್ಣಿಲ್ಲದ ಸಮಾಜದ ನಾಲಿಗೆಗೆ ಬಲಿಯಾಗುವ ಸಾವಿರ ಹೆಣ್ಣುಗಳಂತೆ ಅಲ್ಲ. ಅದರ ಅನ್ಯಾಯಗಳ ಶಾಸನಗಳಿಗೆ ವಿಚಾರಶೂನ್ಯಳಾಗಿ ಮಣಿಯುವ ಹೆಣ್ಣಲ್ಲ! ಅವಳು ಸಮಾಜದ ಮೊಂಡುತನಕ್ಕೆ ಸಾಣೆ ಹಿಡಿಯಬಲ್ಲ ದಿಟ್ಟೆದೆಯವಳು. ಅದು ಎಬ್ಬಿಸುವ ಹೂಕಿಡಿಗಳ ಬೆದರಿಕೆಗೆ ಅವಳು ಬಗ್ಗುವವಳಲ್ಲ! ಹೆಣ್ಣಿನ ಸಹಕಾರವಿಲ್ಲದೆ ಸಮಾಜ ರಥ ಡೊಗ್ಗಾಲೂರುವುದೆಂಬುದನ್ನು ತೋರಿಸು ತ್ತೇನೆ! ಎಂದು ಹೂಂಕರಿಸಿ, ವಿಕಟವಾಗಿ ವಿಜೃಂಭಿಸಿ ನಕ್ಕಳು.

ಇದುವರೆಗೆ ಹೆಣ್ಣು ಹೆಂಗಸಾಗಿದ್ದ ಶಾರದ ಈಗ ಗಂಡಸಾಗಬೇಕಾ ಯಿತು. ಗಂಡಸಿನಂತೆ ದುಡಿದು ಹೊಟ್ಟೆ ಹೊರೆಯಬೇಕಾಗಿ ಬಂತು. ಇದು ವರೆಗೂ ತನ್ನ ಕಷ್ಟಕಾಲದಲ್ಲಿ ತಂಗಿ ಆದಾಳೆಂಬ ದೂರದ ಆಸೆಯಿತ್ತು. ರಾಮ ಚಂದ್ರ ಅಕಾರಣವಾಗಿ ತನ್ನ ನಡತೆಯನ್ನು ದೂರುತ್ತಿರುವಾಗ ತಾನು ಯಾರಿಂದ ಸಹಾಯ ಪಡೆದರೂ ತಪ್ಪೇ. ತನ್ನಿಂದ ಅವರಿಗೆ ಇಲ್ಲದ ಅಪಖ್ಯಾತಿ. ಏಕೆ ಇವೆಲ್ಲ ಬರಬೇಕು? ಎಂದುಕೊಂಡು ಶಾರದ ಯಾರ ಸಹಾಯಕ್ಕೂ ಕೈಯೊಡ್ಡ ಲಿಲ್ಲ. ಇನ್ನು ನಾಲ್ಕೆಂಟು ದಿನ ಇರಲು ಹೇಳಿದ್ದ ಶ್ಯಾಮಲೆಯ ವಿಶ್ವಾಸಪೂರಿತ ಆಹ್ವಾನವನ್ನು ನಿರ್ದಾಕ್ಷಿಣ್ಯವಾಗಿ ಧಿಃಕರಿಸಿ ತನ್ನ ಜೋಪಡಿಗೆ ಬಂದುಬಿಟ್ಟಳು. ಸೀತಾರಾಮು ದಂಪತಿಗಳಿಗೂ ಶಾರದೆಗೆ ತಾವು ಭೂತದಯೆಯಿಂದ ನೆರವಾದರೆ ಅದೇ ತಮಗೆ ಶಾಪವಾಗಿ ಪರಿಣಮಿಸಬಹುದೆಂಬ ಅಂಜಿಕೆಯಿತ್ತು. ಆದರೂ ಹೃದಯದಲ್ಲಿ ತುಂಬಾ ಕನಿಕರವಿದ್ದರೂ ಹೊರಗೆ ಮಾತ್ರ ಅದನ್ನು ತೋರ ಗೊಡದೆ ಶಾರದೆಯಿಂದ ದೂರವಿರಲು ಯತ್ನಿಸುತ್ತಿದ್ದರು. ಶಾರದೆಗೂ ಹಾಲು ಗಡಲಿನಂತಹ ಅವರ ಸಂಸಾರಕ್ಕೆ ತಾನು ಹುಳಿಯಾಗಿ ತಲೆ ಹಾಕುವುದೂ ಇಷ್ಟವಿರಲಿಲ್ಲ. ಯಾರ ನೆರವು ಬೇಡವೆಂದರೂ, ಶಾರದೆ ಬದುಕಬೇಕು. ಮಕ್ಕಳಿಗಾಗಿ ಅಲ್ಲ; ಗಂಡನಿಗೆ ಒಂದು ದಿನ ಬುದ್ಧಿ ಕಲಿಸಲು ಅವಳು ಬದು ಕಲೇ ಬೇಕು! ಅವನು ತುಳಿದ ಮಾತ್ರಕ್ಕೆ ನಿಶ್ಶೇಷವಾಗುವ ಮಣ್ಣಿನ ಬೊಂಬೆ ತಾನಲ್ಲ ಎಂದು ತೋರಿಸಲು ಅವಳು ಬದುಕಲೇ ಬೇಕು. ಬಾಳಲೇ ಬೇಕು. ಆದರೆ ಬದುಕುವ ದಾರಿ? ಅದು ಮಾತ್ರ ಕಾಣಿಸಲಿಲ್ಲ.

ತೊಂದರೆಗಳು ಬಂದರೆ ಯಾವಾಗಲೂ ಹಿಂಡು ಕಟ್ಟಿಕೊಂಡು ಬರುವು ವಂತೆ. ಶಾರದೆ ಬದುಕುವ ದಾರಿ ಕಾಣದೆ ದಿಗ್ಭ್ರಾಂತಳಾಗಿ ಕುಳಿತಿರುವಾಗ,

ಅದೇ ವೇಳೆಗೆ ಮನೆಯ ಮಾಲೀಕನೂ ಬಾಡಿಗೆ ಕೇಳಲು ಬರಬೇಕೇ? ಮನೆಯ ಮಾಲೀಕ ಕಿಟ್ಟಣ್ಣನಿಗೂ ರಾಮಚಂದ್ರನಿಗೂ ತುಂಬ ಪರಿಚಯ ಸ್ನೇಹವಿತ್ತು. ಅವನೂ ರಾಮಚಂದ್ರನೂ ಸಜಾತಿಯಾಗಿದ್ದುದರಿಂದಲೋ ಏನೋ ಅವರವರಲ್ಲಿ ಮಾಲೀಕ ಬಾಡಿಗೇದಾರನೆನ್ನುವ ಭೇದವಿಲ್ಲದೆ ಸಂಬಂಧಿಕರಂತೆ ಇದ್ದರು. ಅನೇಕ ದಿನ ಹಬ್ಬ ಹರಿದಿನಗಳಲ್ಲಿ ರಾಮಚಂದ್ರನ ಮನೆಯಲ್ಲಿಯೇ ಆ ಕಿಟ್ಟಣ್ಣನ ಊಟ ನಡೆದುಹೋಗುತ್ತಿತ್ತು. ಕಿಟ್ಟಣ್ಣ ಒಬ್ಬೊಂಟಿಗ. ಹೆಂಡರಿಲ್ಲ. ಮಕ್ಕಳಿಲ್ಲ. ಗುಂಡುಗೋಪಿಯಾಗಿ ಇದ್ದು ಬಿಟ್ಟಿದ್ದ. ಕೆಲವೇ ವರ್ಷಗಳ ಹಿಂದೆ ಅವನ ಹೆಂಡತಿ ಮುತ್ತೈದೆ ಸಾವಿತ್ರಿಯಾಗಿ ತೀರಿಕೊಂಡಿದ್ದಳು. ಈಗ ಅವನು ವಿಧುರ; ಕಿಟ್ಟಣ್ಣ ಮದುವೆಯಾಗಲು ಬಯಸಿದ್ದರೆ ಕಾಲಿಗೆ ಬಿದ್ದು ಮಗಳನ್ನು ಕೊಡುವ ಕನ್ಯಾಪಿತೃಗಳಿಗೆ ಕಡಿಮೆಯಿರಲಿಲ್ಲ. ಆದರೆ ಕಿಟ್ಟಣ್ಣ ಏಕೋ ಮದುವೆಯ ವಿಷಯವನ್ನೇ ಎತ್ತುತ್ತಿರಲಿಲ್ಲ ಮದುವೆಯಾಗಲು ಕಿಟ್ಟಣ್ಣನಿಗೆ ರೂಪ, ಯೌವ್ವನ, ಆಸ್ತಿ ಇವುಗಳೆಲ್ಲ ಇದ್ದರೂ ಅವನು ಒಂಟಿ ಬಾಳನ್ನೇ ಆಪ್ಪಿದ್ದ. ಅವನಿಗಿನ್ನೂ ಮೂವತ್ತೈದು ವರ್ಷ ಪ್ರಾಯ. ಒಳ್ಳೆಯ ಕಟ್ಟುಮಸ್ತಾದ ಆಳು. ಗುಂಡು ಮುಖ, ಹೊಳಪಾದ ಕಣ್ಣುಗಳು. ಅವನಿಗೆ ಎಂಥವರನ್ನೂ ಮಿತ್ರರನ್ನಾಗಿ ಮಾಡಿಕೊಳ್ಳುವ ಕಲೆ ಚೆನ್ನಾಗಿ ಸಾಧಿತವಾಗಿತ್ತು. ಅವನಿಗೆ ಊರುತುಂಬಾ ಸ್ನೇಹಿತರು. ಅವರೇ ಅವನ ನಿಜವಾದ ನೆಂಟರು. ಅದರಲ್ಲೂ ರಾಮಚಂದ್ರನ ಮನೆಯವರನ್ನು ಕಂಡರೆ ತುಂಬಾ ವಿಶ್ವಾಸ, ಸಲಿಗೆ.

ಒಮ್ಮೊಮ್ಮೆ ಮಾತಿಗೆ ಮಾತು ಬಂದು ಶಾರದ ಕಿಟ್ಟಣ್ಣನಿಗೆ

"ಯಾಕೆ ನೀವಿನ್ನೂ ಮದುವೆಯಾಗಿಲ್ಲ. ಎಷ್ಟು ದಿನಾ ಅಂತ ಹೀಗೆ ಇರ್ತೀರಿ?"

ಎಂದು ಕೇಳಿದ್ದಕ್ಕೆ ಕಿಟ್ಟಣ್ಣ ತಟಕ್ಕನೆ ಉತ್ತರ ಕೊಟ್ಟಿದ್ದ

"ನಿಮ್ಮಂಥ ಹೆಂಡ್ತಿ ಸಿಗೋತನಕ ನಾನು ಹೀಗೇ ಇರ್ತೇನಮ್ಮ!"

ಶಾರದೆಗೆ ಈ ಮಾತು ಕೇಳಿ ತಾನು ಯಾಕಾದರೂ ಈ ಪ್ರಶ್ನೆ ಕೇಳಿದೆನೋ ಎಂದೆನಿಸಿತ್ತು.

ಮತ್ತೊಂದು ದಿನ ಕಿಟ್ಟಣ್ಣ ಕೃಷ್ಣವೇಣಿಯನ್ನು ಮುದ್ದಿಸುತ್ತಾ ಶಾರದೆಗೆ ಹೇಳಿದ.

" ಶಾರದಮ್ಮಾ ಕೃಷ್ಣವೇಣೀನ ನನಗೆ ದತ್ತು ಕೊಡ್ತೀರಾ ? "

" ದತ್ತು ಗಿತ್ತು ಕೊಡೋಲ್ಲ. ಬೇಕಾದ್ರೆ ಮಾರ್ತೀನಿ. ಕೊಂಡುಕೊಳ್ಳೋಕೆ ತಯಾರಾಗಿದ್ರೆ ನೋಡಿ "

" ಬೆಲೆ ಎಷ್ಟು ? "

" ನಿಮ್ಮ ಮನೆ ಬರೆದು ಕೊಡಬೇಕು "

" ಇಷ್ಟೇ ತಾನೇ " ಎಂದು ನಗುತ್ತಾ ಕೃಷ್ಣವೇಣಿಯ ಕಡೆ ತಿರುಗಿ " ನಿಮ್ಮಮ್ಮ ನಿನ್ನ ಮಾರ್ತಾರಂತೆ—ಬರ್ತೀಯೇನೇ ? ನಮ್ಮ ಮನೆಗೆ " ಎಂದ.

ಕೃಷ್ಣವೇಣಿ " ಆಗಲಿ " ಎಂದಳು.

" ಅವಳೇನು ಯಾರ ಮನೆಗಂದ್ರೆ ಅವರ ಮನೆಗೆ ಸೈ ಅಂತಾಳೆ. ಕೊಂಚವೂ ಅವರು ಇವರು ಅನ್ನುವ ಭೇದವೇ ಇಲ್ಲ. "

" ಹೌದಮ್ಮಾ ಮಕ್ಕಳೇ ಹಾಗೆ. ನನಗೆ ಇಂಥ ದಿಟ್ಟ ಮಕ್ಕಳನ್ನು ಕಂಡರೆ ಪ್ರಾಣ."

" ಇಂಥವು ಹನ್ನೆರಡಾಗುತ್ತೆ. ಮೊದಲು ಮದುವೆಯಾಗಿ ನೀವು "

ಮತ್ತೆ ಹಳೆಯ ಹಾಡು.

" ನಿಮ್ಮಂಥ ಹೆಂಡತಿ ಸಿಗಬೇಕಲ್ಲ ! "

ಶಾರದೆಗೆ ಕಿಟ್ಟಣ್ಣ ಮಾತು ಮಾತಿಗೂ ನಿಮ್ಮಂಥ ಹೆಂಡತಿ, ನಿಮ್ಮಂಥ ಹೆಂಡತಿ ಅಂತ ಹೇಳುತ್ತಿದ್ದುದರಿಂದ ಅವನ ವಿಷಯದಲ್ಲಿ ಕೊಂಚ ಅನುಮಾನವಾಯಿತು—ಯಾಕೆ ಹೀಗೆ ಹೇಳ್ತಾನೆ ಅಂತ. ಆದರೆ ಒಂದು ದಿನ ಅಗಲಿದ ಹೆಂಡತಿಯನ್ನು ನೆನೆಸಿಕೊಂಡು ಕಿಟ್ಟಣ್ಣ ಹೇಳಿದ " ಶಾರದಮ್ಮ, ಅವಳು ಎಲ್ಲಾ ನಿಮ್ಮ ಹಾಗೇನೇ ಇದ್ದಳಮ್ಮ. ನೋಡೋಕೂ ತದ್ರೂಪು. ಇದೇ ನಗುಮುಖ. ಅವಳು ಇದ್ದಷ್ಟು ದಿನ ನಾನು ಬಹಳ ಸುಖವಾಗಿದ್ದೆ. ಅವಳೂ ಇಂಥದೇ ವೇಣಿಯಂತಹ ಕೂಸನ್ನು ಹೆತ್ತು ಬಾಣಂತಿಯ ಖಾಯಿಲೆಯಲ್ಲಿ ತೀರಿಕೊಂಡಳಮ್ಮ. ಅವಳ ಹಿಂದೆಯೇ ಮಗುವೂ ಕಣ್ಣುಮುಚ್ಚಿಕೊಂಡಿತು. ಆದಿನದಿಂದ ನಾನು ಹೀಗೇ ಇದ್ದೇನೆ. ಮತ್ತೆ ಮದುವೆಯಾದ್ರೆ ಅವಳ ಆತ್ಮ ಎಲ್ಲಿ ನೊಂದುಕೊಳ್ಳುತ್ತೋ ಅಂತ " ಎಂದು ಹೆಣ್ಣಿಗನಂತೆ ಅತ್ತುಬಿಟ್ಟ. ಆಗಿನಿಂದಲೂ ಶಾರದೆಗೆ ಕಿಟ್ಟಣ್ಣನ ವಿಷಯದಲ್ಲಿ ತುಂಬಾ ಮರುಕ.

" ಹಾಗಂತ ಇದ್ದುಬಿಟ್ರೆ ನಿಮ್ಮ ಮುಂದಿನ ಗತಿ ? "

" ಅಂದ್ರೆ ? "

" ಮದುವೆಯಾಗದೇನೇ ಇದ್ದು ಬಿಡ್ತೀರಾ ? ಒಂದು ಕಾಹಿಲೆ ಕಸಾಲೆ ಆದರೆ ಯಾರಾಗ್ತಾರೆ ? "

" ಅದಕ್ಕೇ ಮದುವೆಯಾದರೆ ನಿಮ್ಮಂತಹ ಹೆಂಡತಿಯನ್ನೇ ಮದುವೆ ಯಾಗಬೇಕೂಂತ ಅನ್ನೋದು ! "

ಈ ಮಾತು ಕೇಳಿ ಶಾರದೆಗೆ ನಗು.

" ಆಗ ಮಾತ್ರ ಅವಳ ಆತ್ಮ ಶಾಂತವಾಗುತ್ತೆ "

ಎಂದ ಕಿಟ್ಟಣ್ಣ.

" ಒಳ್ಳೇ ಹುಚ್ಚು ಮನುಷ್ಯ ಕಿಟ್ಟಣ್ಣ "

ಎಂದುಕೊಂಡು ಸುಮ್ಮನಾದಳು ಶಾರದ.

ಈಚೆಗೆ ಶಾರದ ಕಿಟ್ಟಣ್ಣನನ್ನು ಕಂಡು ಅನೇಕ ತಿಂಗಳಾಗಿತ್ತು. ಅವಳು ಹೆರಿಗೆಗೆಂದು ಹಳ್ಳಿಗೆ ಹೋದಲಾಗಾಯ್ತು ಕಿಟ್ಟಣ್ಣನ ದರ್ಶನವಾಗಿರಲಿಲ್ಲ. ಇದೀಗ ತಾನೇ ಅವನು ಬಂದಿದ್ದ ಬಾಡಿಗೆ ವಸೂಲಿಗೆ.

" ಶಾರದಮ್ಮ ಚೆನ್ನಾಗಿದ್ದೀರಾ ? " ಎಂದ ಲೋಕಾಭಿರಾಮವಾಗಿ.

" ನನ್ನ ಚೆನ್ನ ಅದೇನು ಕೇಳ್ತೀರಿ ? ಇದ್ದೇನೆ ಭೂಮಿಗೆ ಭಾರವಾಗಿ— ಸಾಯದೆ ಬದುಕಿದ್ದೇನೆ ! " ಎಂದಳು ಶಾರದೆ ತಲೆ ತಗ್ಗಿಸಿಕೊಂಡು.

ಶಾರದೆಯ ಮಾತು ಕೇಳಿ ಕಿಟ್ಟಣ್ಣನಿಗೆ ವಿಸ್ಮಯ. ಮನೆಯ ಭಣಭಣ ವೆನ್ನುವ ವಾತಾವರಣವನ್ನು ಕಂಡೇ ಅವನಿಗೆ ಮನೆಯಲ್ಲಿ ಏನೋ ನಡೆದಿದೆ ಎಂದುಕೊಂಡಿದ್ದ.

" ಯಾಕೆ ಹಾಗೆ ಅಂತೀರಿ ? ಏನಾಯಿತೀಗ ? "

" ಏನಾಗಬೇಕು ? "

ಎಂದು ಆವರೆಗಿನ ಕಥೆಯನ್ನು ಸೂಕ್ಷ್ಮವಾಗಿ ಕಿಟ್ಟಣ್ಣನಿಗೆ ಹೇಳಿದಳು. ಅವಳ ಉದ್ದಿಶ್ಯ ಬಾಡಿಗೆಗಾಗಿ ತನ್ನನ್ನು ಪೀಡಿಸದಿರಲಿ ಎಂದು. ಶಾರದೆಯ ಕರುಣ ಕಥೆಯನ್ನು ಕೇಳಿ ಕಿಟ್ಟಣ್ಣನಿಗೆ ಇದು ನಡೆದದ್ದೋ ಕಥೆಯೋ ಒಂದೂ ತಿಳಿಯಲಿಲ್ಲ.

" ಇಷ್ಟೆಲ್ಲಾ ಆಯಿತೆಂದು ನಾನು ಯಾವ ದೇವರನ್ನು ಹಳಿಯಲಿ ? "

ಎಂದು ಹೇಳಿದಾಗಲಂತೂ ಕಿಟ್ಟಣ್ಣನ ಅಂತಃಕರಣ ನೀರಾಯಿತು.

" ಶಾರದಮ್ಮ ನಾನು ಒಮ್ಮೆ ರಾಮಚಂದ್ರನನ್ನು ಕಂಡು ಬುದ್ಧಿ ಹೇಳಿ ಬರಲೇ ? " ಎಂದ ಕಿಟ್ಟಣ್ಣ.

ಈ ಮಾತು ಕೇಳಿ ಶಾರದೆ ಗಾಬರಿಯಾದಳು. ಒಮ್ಮೆ ತನ್ನ ವಿಷಯವನ್ನು ರಾಮಚಂದ್ರನಲ್ಲಿ ಎತ್ತಿ ಸೀತಾರಾಮೂಗೆ ಮಂಗಳಾರತಿಯಾಗಿತ್ತು. ಈಗ ಕಿಟ್ಟಣ್ಣನು ತನ್ನ ಕಾರಣದಿಂದ ಅಪಕೀರ್ತಿಗೆ ಒಳಗಾಗಬೇಕೇ ? ಮತ್ತೊಮ್ಮೆ ಅಂತಹ ಪ್ರಸಂಗವೇ ?

" ಬೇಡ. ಒಮ್ಮೆ ಕೈತೋರಿಸಿ ಅವಲಕ್ಷಣವೆನಿಸಿಕೊಂಡಾಗಿದೆ. ವೃಥಾ ನಿಮಗೇಕೆ ತೊಂದರೆ. ನನಗೂ ಅವರಿಗೂ ಸಂಬಂಧ ಹರಿದುಹೋಗಿದೆ "

ಎಂದಳು ನಿಷ್ಠುರಳಾಗಿ

" ಹಾಗಾದರೆ ಜೀವನೋಪಾಯಕ್ಕೇನು ಮಾಡುತ್ತೀರಿ ? "

" ನಾನೂ ಅದನ್ನೇ ಕುರಿತು ಆಲೋಚಿಸುತ್ತಿದ್ದೇನೆ ! "

ಎಂದಳು ಶಾರದೆ. ಅವಳ ದನಿಯಲ್ಲಿ ನೋವಿತ್ತು.

" ಭಗವಂತ ಎಂಥವರಿಗೆ ಕಷ್ಟ ತಂದಿಡ್ತಾನೆ ! ಶಾರದಮ್ಮ ನಿಮ್ಮಂಥ ಸಾಧ್ವಿಯರಿಗೆ ಇಷ್ಟು ಕಷ್ಟ ಬರಬಾರದಮ್ಮ "

ಎಂದನೇ ಹೊರತು ಬೇರೇನನ್ನೂ ಹೇಳಲಿಲ್ಲ. ಗಂಡಸಾಗಿದ್ದರೆ ಹೀಗೆ ಮಾಡಿ, ಹಾಗೆ ಮಾಡಿ, ಇಂಥವರನ್ನು ಕಾಣಿ, ಇಲ್ಲಿ ಚಾಕರಿಗೆ ಸೇರಿಕೊಳ್ಳಿ ಎಂದು ಹೇಳುತ್ತಿದ್ದನೋ ಏನೋ. ಆದರೆ ಶಾರದೆಗೆ ಏನು ಹೇಳಬೇಕು ?

" ಶಾರದಮ್ಮ ನಿಮ್ಮನ್ನು ಕಂಡು ನನಗೆ ಅಯ್ಯೋ ಅಂತ ಅನಿಸುತ್ತೆ. ನಿಮ್ಮ ಮನೆಯಲ್ಲಿ ನಾನು ಒಂದೆರಡು ತುತ್ತು ಅನ್ನ ತಿಂದು ಋಣ ಹೊತ್ತಿದ್ದೇನೆ. ಈಗ ನೀವು ದುರ್ದೆಸೆಯಲ್ಲಿ ಇದ್ದೀರಿ. ನೀವು ಏನೂ ಭಾವಿಸದೆ ಇದನ್ನು ತೆಗೆದುಕೊಳ್ಳಬೇಕು " ಎಂದು ಜೇಬಿನಿಂದ ನಾಲ್ಕೈದು ಹತ್ತು ರೂಪಾಯಿಯ ನೋಟು ಕೊಡಲು ಹೋದ. ಶಾರದೆ ಅವನ್ನು ತೆಗೆದುಕೊಳ್ಳದೆ " ಏನು ಏನು ? " ಎಂದಳು.

" ಏನೂ ಇಲ್ಲ ತಂಗಿಗೆ ಅಣ್ಣನ ಸಹಾಯ. ಮನುಷ್ಯ ಮನುಷ್ಯನಿಗೆ ಮಾಡುವ ಅಲ್ಪ ಸಹಾಯ ! " ಎಂದ.

" ನಾನು ಹೀಗೆನ್ನುವೆನೆಂದು ನೀವೇನೂ ತಿಳಿಯಬಾರದು. ನಿಮ್ಮ

ಔದಾರ್ಯಕ್ಕೆ ನಮ್ಮ ಕೃತಜ್ಞತೆಗಳು. ನಿಮಗೆ ನನಗೇನಾದರೂ ಸಹಾಯ ಮಾಡಬೇಕೆಂದು ಅನ್ನಿಸಿದ್ದರೆ, ಈ ಹಣವನ್ನು ಖಂಡಿತವಾಗಿಯೂ ಹಿಂದಕ್ಕೆ ತೆಗೆದುಕೊಳ್ಳಿ! ”

ಶಾರದೆ ಹೀಗೆನ್ನುವಳೆಂದು ಕಿಟ್ಟಣ್ಣ ಮೊದಲೆ ಊಹಿಸಿದ್ದ.

“ ಇದನ್ನು ನೀವು ಸಾಲವಾಗಿ ತಿಳಿಯಿರಿ. ನಿಮ್ಮ ಅನ್ನವನ್ನು ನೀವು ಸಂಪಾದಿಸುವ ತನಕ ಕೈಯಲ್ಲಿ ಏನೂ ಬೇಡವೇ ? ನೀವು ಅನ್ಯಥಾ ತಿಳಿದು ಸಂಕೋಚಪಟ್ಟುಕೊಳ್ಳಬಾರದು. ನಿಮ್ಮ ಈ ಸ್ಥಿತಿಯಲ್ಲಿ ನಿಮ್ಮ ಅಣ್ಣ ಬಂದು ಸಹಾಯ ಮಾಡಿದ್ದರೆ ನೀವು ನಿರಾಕರಿಸುತ್ತಿದ್ದಿರಾ ?....ಹಾಗೆಯೇ ನನ್ನನ್ನೂ ಭಾವಿಸಿ! ”

“ ಇಲ್ಲ ಸದ್ಯಕ್ಕೆ ನನಗೆ ಹಣದ ಅವಶ್ಯಕತೆಯಿಲ್ಲ. ನಿಮಗೆ ಸಹಾಯ ಮಾಡುವ ಇಚ್ಛೆಯಿದ್ದರೆ ನನಗೆ ಈ ಸಹಾಯಮಾಡಿ. ಒಂದೆರಡು ತಿಂಗಳ ಬಾಡಿಗೆ ಬಾಕಿನಿಂತಿದೆ. ಅದನ್ನು ತೀರಿಸಲು ನನಗೆ ಕೊಂಚ ಕಾಲಾವಕಾಶ ಕೊಡಿ. ನನಗಿಷ್ಟೇ ಸಾಕು.”

“ ಏನಮ್ಮ ನೀವನ್ನುವ ಮಾತು? ನಿಮ್ಮ ಕಷ್ಟವನ್ನು ಕಂಡೂ ನಾನು ಬಾಡಿಗೆಯನ್ನು ಯಾವ ನಾಲಗೆಯಿಂದ ಕೇಳಲಿ! ” ಎಂದ.

“ ಲೋಕದಲ್ಲಿ ಒಳ್ಳೆಯವರೂ ಇರ್ತಾರಮ್ಮ ಕೆಟ್ಟವರೂ ಇರ್ತಾರೆ. ಯಾರೋ ಒಬ್ಬರು ಕೆಟ್ಟವರು ಆದಮಾತ್ರಕ್ಕೆ ಎಲ್ಲರೂ ಕೆಡುಕರೇ ಆಗಬೇಕೇ?”

ಎನ್ನುವ ಲೋಕನೀತಿಯನ್ನೇ ಹೇಳಿದ ಕಿಟ್ಟಣ್ಣ. ಶಾರದೆ ಅವನನ್ನು ಮನಸ್ಸಿನಲ್ಲೇ ವಂದಿಸಿದಳು.

ಕಿಟ್ಟಣ್ಣ ಹಣತೆಗೆದುಕೊಳ್ಳಬೇಕೆಂದು ಶಾರದೆಯನ್ನು ಹೆಚ್ಚು ಬಲವಂತ ಪಡಿಸಲಿಲ್ಲ. ಹಾಗೆ ಮಾಡಿದ್ದರೆ ಶಾರದೆ ತಪ್ಪು ತಿಳಿಯುವ ಸಂಭವವಿತ್ತು. ತನ್ನ ಸಹಾಯವನ್ನು ಶಾರದೆ ತಿರಸ್ಕರಿಸಿದಳೆಂದು ಅವನಿಗೆ ಸಿಟ್ಟು ಬರುವ ಬದಲು ಶಾರದೆಯ ವಿಷಯದಲ್ಲಿ ಅಭಿಮಾನ ಗೌರವಗಳು ಉಂಟಾದವು.

ದಿನಗಳು ಕಳೆದಂತೆ ಅನ್ನ ಬಟ್ಟೆಯ ಸಮಸ್ಯೆಯನ್ನು ಹೇಗಾದರೂ ಬಿಡಿಸಲೇ ಬೇಕಾಯಿತು. ಶಾರದೆ ಎಲ್ಲ ದಾರಿಯಲ್ಲಿ ಆಲೋಚಿಸಿದಳು.

ಬೆಂಗಳೂರಿನಲ್ಲಿ ಏಳೆಂಟು ಫ್ಯಾಕ್ಟರಿಗಳಿದ್ದುವು. ಅವುಗಳಲ್ಲಿ ಸ್ತ್ರೀಕೂಲಿಕಾರರು ಕೆಲಸಮಾಡುತ್ತಿದ್ದರು. ಅವುಗಳೊಂದರಲ್ಲಿ ತಾನೂ ಏಕೆ ಸೇರಿ

ಕೊಂಡು ದುಡಿಯಬಾರದು. ಅದು ಸರಿ. ಕೆಲಸದ ವೇಳೆಯಲ್ಲಿ ಕೃಷ್ಣವೇಣಿ ಶ್ರೀಧರರನ್ನು ನೋಡಿಕೊಳ್ಳುವರು ಯಾರು ? ಅವರಿನ್ನು ಯಾರ ವಶದಲ್ಲಿ ಬಿಟ್ಟು ಹೋಗಬೇಕು. ಅಲ್ಲದೆ ಶ್ಯಾಮಲೆ ಬೇರೆ ಹೇಳಿದ್ದಳು:—" ಗಂಡು ಹೊರಗೆ ದುಡಿಯಬೇಕು. ಹೆಣ್ಣು ಒಳಗೆ ದುಡಿಯಬೇಕು."

ಶಾರದೆ ತನಗೆ ಪರಿಚಯವಿದ್ದ ಮನೆಗಳಲ್ಲಿ ಅಡಿಗೆ ಹಪ್ಪಳ ಮೊದಲಾದ ಕೆಲಸ ಮಾಡಿಕೊಟ್ಟು ಹೊಟ್ಟೆ ಹೊರೆಯಬಾರದೇಕೆ ? ಎಂದು ಆಲೋಚಿಸಿದಳು. ಈ ದಿಕ್ಕಿನಲ್ಲಿ ನಡೆಸಿದ ಒಂದೆರಡು ಪ್ರಯತ್ನಗಳ ಅನುಭವ ಈ ಕೆಲಸಗಳಿಗೆ ತನ್ನಂತಹ ಹೆಂಗಸು ಲಾಯಕ್ಕಿಲ್ಲ ಎಂದು ತಿಳಿಸಿಕೊಟ್ಟಿದ್ದವು. ಅಂಗಾಂಗಗಳಲ್ಲಿ ನವಯೌವ್ವನವನ್ನು ರೇಡಿಯಂನಂತೆ ಹೊರಸೂಸುತ್ತಿರುವ ತಾನು ಪರಪುರುಷರ ಮನೆಗಳಲ್ಲಿ ದುಡಿಯುವುದರಿಂದ ತನ್ನ ಕೀರ್ತಿಗೆ ತಾನಾಗಿ ತಾನು ಅಪವಾದ ತಂದುಕೊಳ್ಳುವೆನೆಂದು ತಿಳಿದಳು. ಒಂದು ಮನೆಯಲ್ಲಂತೂ ಕೊಬ್ಬಿ ಬೆಳೆದ ಯಜಮಾನ ಶಾರದೆಯನ್ನು ಕಂಡೊಡನೆ ವಿಷಯವಾಸನೆಯ ದುರ್ನಾತವನ್ನು ಹೊರಚೆಲ್ಲಿದ್ದ. ಇನ್ನೊಂದು ಮನೆಯಲ್ಲಿ ಸುಮಾರು ಐವತ್ತು ವರ್ಷದ ಯುವಕರೊಬ್ಬರು ಶಾರದೆಯನ್ನು ಹೆಂಡತಿಯನ್ನು ಕಾಣುವಂತೆ ತುಂಬಾ ಸಲಿಗೆ ಪ್ರೀತಿಯಿಂದ ಕಂಡರು. ಮತ್ತೊಂದು ಮನೆಯಲ್ಲಿ ಶಾರದೆಯ ಹಾಗೂ ಅವಳ ಮಕ್ಕಳ ಹರುಕು ಬಟ್ಟೆಗಳನ್ನುನೋಡಿ ಹೊಲೆಯರನ್ನು ಕಾಣುವಂತೆ ಅವರನ್ನುಕಂಡಿದ್ದರು. ಈ ಎಲ್ಲ ಕಟು ಅನುಭವಗಳಿಂದ ಒಬ್ಬರ ಮನೆಯ ಆಳಾಗಿ ದುಡಿಯುವುದಕ್ಕಿಂತ ಉಪವಾಸವಿರುವುದೇ ಲೇಸೆನಿಸಿಬಿಟ್ಟಿತ್ತು ಶಾರದೆಗೆ! ಆದರೆ ಹಸಿದ ಹೊಟ್ಟೆ ಈ ಧರ್ಮೋಪದೇಶವನ್ನು ಕೇಳಬೇಕಲ್ಲ!

ಒಂದು ದಿನ ಶಾರದೆಗೆ ಬೇಜಾರಾಗಿ ಯಾವುದೋ ಕೀರ್ತನೆಯೊಂದನ್ನು ತನ್ನಲ್ಲಿ ತಾನೇ ಹಾಡಿಕೊಳ್ಳುತ್ತಿದ್ದಾಗ ಇದ್ದಕ್ಕಿದ್ದ ಹಾಗೆ ಒಂದು ಆಲೋಚನೆ ಬಂತು. ತನಗೆ ಹೇಗೋ ಕೊಂಚ ಸಂಗೀತ ಜ್ಞಾನವೂ ಇದೆ. ಹಾರ್ಮೋನಿಯಂ ನುಡಿಸುವುದೂ ಗೊತ್ತು. ಇವುಗಳನ್ನೇ ನಾಲ್ಕುಜನ ಹೆಣ್ಣು ಹುಡುಗಿಯರಿಗೆ ಕಲಿಸಿಕೊಟ್ಟು ಯಾಕೆ ಹೊಟ್ಟೆಹೊರೆಯಬಾರದೆಂದು. ಇದರಲ್ಲಿ ಏನು ತಪ್ಪು ? ಇದರಿಂದ ತಾನು ವಿದ್ಯಾದಾನಮಾಡಿದ ಹಾಗೂ ಆಗುತ್ತದೆ. ಅಲ್ಲದೆ ಜೀವನೋಪಾಯವನ್ನು ಕಲ್ಪಿಸಿಕೊಳ್ಳಬಹುದು, ಎಂದು ಪಾತಮ್ಮನ ಮನೆಯಲ್ಲಿದ್ದ ಹಳೆಯ ಹಾರ್ಮೋನಿಯಂನ್ನು ತಂದು ಒಂದು ಬಾರಿ ಅದರ ಮೇಲೆ

ಬೆರಳಾಡಿಸಿದಳು. ಅವಳ ಬಾಯಿ ಅವಳಿಗೇ ತಿಳಿಯದಂತೆ "ಯಾರು ಕೈ ಬಿಟ್ಟರೂ ನೀಕೈಯ್ಯ ಬಿಡಬೇಡ" ಎನ್ನುವ ಕೀರ್ತನೆಯನ್ನು ಹಾಡಿತು. ಅವಳು ಹಾಡು ಮುಗಿಸುವ ಹೊತ್ತಿಗೆ ಪಾತಮ್ಮ, ಪಾತಮ್ಮನ ಹನ್ನೆರಡುವರ್ಷದ ಮಗಳು "ಸುಬ್ಬಿ" ವರಾಂಡದಲ್ಲಿಯೇ ನಿಂತು ಕೇಳಿಕೊಂಡಿದ್ದವರು ಒಳಗೆ ಬಂದರು. "ಶಾರದ ನಿನಗೆ ಇಂತಹ ಕಂಠ ಇದೆ. ಇಷ್ಟು ಸಂಗೀತ ಬರುತ್ತೆ ಅಂತ ನನಗೆ, ತಿಳಿದಿರಲಿಲ್ಲ. ನಿನ್ನ ಹಾಡು ಕೇಳ್ತಾ, ಕೇಳ್ತಾ ನನ್ನ ಕಣ್ಣಿನಲ್ಲಿ ನೀರು ಬಂದು ಬಿಡ್ತಮ್ಮ." ಎಂದಳು ಪಾತಮ್ಮ. ತನ್ನ ಹಾಡನ್ನು ಪಾತಮ್ಮ ಕೇಳಿಬಿಟ್ಟರೆಂದು ಶಾರದೆಗೆ ಸಂಕೋಚವಾಯಿತು. ಶಾರದ ಅಪರೂಪಕ್ಕೆ ತಮ್ಮ ಮನೆಯಿಂದ ಹಾರ್ಮೋನಿಯಂನ್ನು ತೆಗೆದುಕೊಂಡು ಹೋದುದನ್ನು ನೋಡಿ ಹೇಗೆ ಬಾರಿಸುತ್ತಾಳೋ ಅನ್ನುವ ಕೂತೂಹಲದಿಂದ ಪಾತಮ್ಮ ಮಗಳೊಡನೆ ಶಾರದೆಯ ಮನೆಗೆ ಬಂದಿದ್ದರು.

"ನನ್ಗೇನು ಏನು ಸಂಗೀತವ್ರೋಮ್ಮ. ಕಲಿತದ್ದೆಲ್ಲಾ ಮರೆತುಹೋಗಿದೆ" ಎಂದಳು ಶಾರದೆ. ವಿನಯವಾಗಿ.

"ಅಮ್ಮ ನಾನೂ ಸಂಗೀತ ಹೇಳಿಸಿಕೊಳ್ಳುತ್ತೇನಮ್ಮ.. ಶಾರದತ್ತೆ ಕೈಲಿ—" ಎಂದಳು ಪಾತಮ್ಮನ ಮಗಳು ಸುಬ್ಬಿ ನಾಚುತ್ತ.

ಅವಳಿಗೆ ಮದುವೆಯ ವಯಸ್ಸು. ಕೊಂಚ ಸಂಗೀತ ಬಂದಿದ್ದರೆ ಒಳ್ಳೆಯದೇ ಎಂದುಕೊಂಡು ಪಾತಮ್ಮ ಶಾರದೆಗೆ ಹೇಳಿದರು:

"ಶಾರದ, ಅಂದಹಾಗೆ ನಮ್ಮ ಸುಬ್ಬಿಗೆ ಕೊಂಚ ಸಂಗೀತ ಹೇಳಿ ಕೊಡ್ತೀಯಾ? ಅವಳಿಗೂ ಸಂಗೀತ ಕಲಿಯೋಕೆ ತುಂಬಾ ಆಸೆಯಿದೆ. ಆದರೆ ಸಂಗೀತಗಾರರನ್ನು ಮಾತಾಡಿಸೋಕೆ ಹೋದ್ರೆ ಅವರು ತಿಂಗಳಿಗೆ ಹತ್ತುರೂಪಾಯಿ ಕೇಳ್ತಾರೆ. ಅಷ್ಟೊಂದು ದುಡ್ಡು ಕೊಟ್ಟು ಸಂಗೀತ ಹೇಳಿಸೋ ಅಷ್ಟು ಪುಣ್ಯವಂತರೇ ನಾವು. ನೋಡಮ್ಮ ಶಾರದ. ನೀನು ನಿನಗೆ ತಿಳಿದಿರೋ ಅಷ್ಟನ್ನು ಹೇಳಿ ಕೊಡೋದಾದ್ರೆ ನಾವೂ ನಮ್ಮ ಕೈಲಾದ ಸಂಭಾವನೆ ಕೊಡ್ತೇವೆ" ಎಂದರು.

ಶಾರದೆಗೆ ಬೇರೆ ದಾರಿ ಕಾಣದೆ ಒಪ್ಪಿಕೊಳ್ಳಬೇಕಾಯಿತು. ಸುಬ್ಬಿಯೇ ಶಾರದೆಯ ಮೊದಲನೆಯ ಶಿಷ್ಯೆ. ಸುಬ್ಬಿಗೆ ಶಾರದೆ ಸಂಗೀತ ಹೇಳಿಕೊಡುವ ಸುದ್ದಿ ಸುಬ್ಬಿಯಿಂದ ಅವಳ ಸ್ನೇಹಿತೆಯರಿಗೆಲ್ಲಾ ತಿಳಿಯಿತು.

" ಶಾರದ ಸಂಗೀತ ಚೆನ್ನಾಗಿ ಹೇಳಿಕೊಡ್ತಾಳೆ "

ಅಂತ ಸುಬ್ಬಿ ಡಂಗುರ ಹಾಕಿಬಿಟ್ಟಿದ್ದಳು.

" ಸಂಗೀತಮಾತ್ರವೇ ಅಲ್ಲ. ಪಾಠ ಹೇಳಿಕೊಡ್ತಾಳೆ. ಕಸೂತಿ ಹಾಕೋದು ಕಲಿಸಿಕೊಡ್ತಾಳೆ. ಹಣಿಗೆ ಕೆಲಸ, ರಂಗೋಲಿ ಹಾಕೋದು ಎಲ್ಲ ಹೇಳಿಕೊಡ್ತಾಳೆ " ಅಂತ ಶಾರದೆಯನ್ನು ಗೆಳತಿಯರೆದುರಿಗೆ ಅವಳು ಹೊಗಳಿದ್ದೇ ಹೊಗಳಿದ್ದು. ಶಾರದೆಯ ಸಂಗೀತ ಶಾಲೆ ಆರಂಭವಾದ ಎಂಟೇ ದಿನಕ್ಕೇ ಐದಾರು ವರ್ಷದ ಹುಡುಗ ಹುಡುಗಿಯರಿಂದ ತೊಡಗಿ ಹದಿನಾರು ವರ್ಷದ ಹುಡುಗಿಯರತನಕ ಸುಮಾರು ಹತ್ತೆಂಟು ಮಂದಿ ಅವಳ ಮನೆಗೆ ಸಂಗೀತ ಹೇಳಿಸಿಕೊಳ್ಳಲು ಬರತೊಡಗಿದ್ದರು. ಶಾರದೆ ಒಬ್ಬರನ್ನೂ ಇಷ್ಟು ಸಂಭಾವನೆ ಕೊಡಿ ಎಂದು ಬಾಯಿಬಿಟ್ಟು ಕೇಳಲಿಲ್ಲ. ಅವರು ಸಂತೋಷದಿಂದ ತಂದು ಕೊಟ್ಟಷ್ಟನ್ನು ತೆಗೆದುಕೊಳ್ಳುತ್ತಾ ತನಗೆ ತಿಳಿದಿರುವ ವಿದ್ಯೆಯನ್ನು ನಿರ್ವಂಚನೆಯಿಂದ ಕಲಿಸಿ ಕೊಡುತ್ತಿದ್ದಳು.

ಈಗ ಶಾರದೆಯ ಮನೆ ಅಂದರೆ ಶಿಶುವಿಹಾರ, ಗಾಯನ ಶಾಲೆ, ಪಾಠ ಶಾಲೆ, ಎಲ್ಲವೂ ಆಗಿತ್ತು. ಸದಾ ಮನೆ ಸಣ್ಣಪುಟ್ಟ ಮಕ್ಕಳಿಂದ ತುಂಬಿರುತ್ತಿತ್ತು. ಅವರ ನಗುವಿನಲ್ಲಿ ತಾನೂ ನಕ್ಕು, ಅವರ ಗದ್ದಲದಲ್ಲಿ, ಆಟಪಾಟಗಳಲ್ಲಿ ತನ್ನ ಸಂಸಾರದ ಭವಣೆಯನ್ನು ಸಂಪೂರ್ಣವಾಗಿ ಮರೆತು ಬಿಟ್ಟಳು. ಶಾರದೆ.

ಶಾರದೆಯ ಸಂಸಾರ ಹೇಗೋ ನಡೆಯುತ್ತಿತ್ತು. ಹೆಣ್ಣುಮಕ್ಕಳು ಬರುವಾಗ ಶಾರದೆಯ ಮಕ್ಕಳಿಗೆ ಮನೆಯಲ್ಲಿ ಮಾಡಿದ ತಿಂಡಿ ತಂದುಕೊಡುವರು. ಮನೆಯಲ್ಲಿ ಹಿರಿಯರು ಅವರಿಗೆ ಬಟ್ಟೆ ಹೊಲಿಸುವಾಗ ಅವರ ಪಟ್ಟಿಯಲ್ಲಿ ಶಾರದೆಯ ಅನಾಥ ಮಕ್ಕಳೂ ಸೇರಿಕೊಳ್ಳುವರು. ಶಾರದೆಯ ಮನೆಯಲ್ಲಿ ಇಂತಹ ಪದಾರ್ಥ ಮುಗಿದು ಹೋಗಿದೆ ಎಂದು ತಿಳಿದು ಬಂದರೆ ಸಾಕು. ( ಹುಡುಗಿಯರಿಗೆ ಶಾರದೆಯ ಮನೆಯಲ್ಲಿ ಅಷ್ಟು ಸ್ವಾತಂತ್ರ್ಯ! ಅವರು ತಮ್ಮ ಮನೆಗಳಲ್ಲಿ ಜಡತಿಮಾಡುವಂತೆ ಶಾರದೆಯ ಮನೆಯ ಪಾತ್ರೆ ಪದಾರ್ಥಗಳೆಲ್ಲವನ್ನೂ ಮುಟ್ಟುತ್ತಿದ್ದರು. ) ಶಾರದೆಗೆ ತಿಳಿಸದೇ ಆ ಪದಾರ್ಥವನ್ನು ತಂದು ಡಬ್ಬವನ್ನು ಭರ್ತಿಮಾಡುವರು—ಕೊಂಡುತಂದೋ ಇಲ್ಲ ಮನೆಯಲ್ಲಿ

ಕೇಳಿ ತಂದೋ. ಶಾರದ ಒಮ್ಮೊಮ್ಮೆ ಹೀಗೆಲ್ಲಾ ಮಾಡಬಾರದೆಂದು ಗದರಿ ಕೊಳ್ಳುವಳು.

"ನೀವು ಸುಮ್ಮನಿರಿ ಶಾರದತ್ತೆ!"

ಎಂದು ಮಕ್ಕಳೂ ಗದರಿಕೊಳ್ಳುವರು. ಇದರ ಮೇಲೆ ಹಬ್ಬ ಹರಿ ದಿನಗಳು ಬಂದಿತೆಂದರೆ ಎಲ್ಲರೂ ಶಾರದೆಯನ್ನು ತಮ್ಮ ಮನೆಗಳಿಗೆ ಊಟಕ್ಕೆ ಕರೆಯುತ್ತಿದ್ದರು. ಶಾರದೆ ಯಾರ ಮನೆಗೆ ಹೋಗಬೇಕು, ಯಾರ ಮನೆಗೆ ಬಿಡಬೇಕು. ಒಬ್ಬೊಬ್ಬರ ಮನೆಗೆ ಒಂದೊಂದು ದಿನವೆಂದರೂ ತಿಂಗಳಲ್ಲಿ ಹದಿನೈದು ದಿನಗಳು ಹೊರಗಡೆಯೇ ಊಟಕಳೆದುಕೊಳ್ಳಬಹುದಿತ್ತು. ಶಾರದೆ ಹಾಗೆ ಮಾಡದೆ, ನಿರ್ವಾಹವಿಲ್ಲದ ಮನೆಗಳಿಗೆ ಮಾತ್ರ ಹೋಗಿಬರುತ್ತಿದ್ದಳು.

ಹೀಗೆ ಶಾರದೆಯ ಹೊಸ ಸಂಸಾರದ ಚಕ್ರ ಉರುಳಿತ್ತು. ಮೊದಲು ಮೊದಲು ಶಾರದೆಗೆ ತನ್ನ ಹೊಸಜೀವನಕ್ಕೆ ಹೊಂದಿಕೊಳ್ಳುವುದು ಕೊಂಚ ಕಷ್ಟವಾಯಿತು

'ಗಂಡು ದಿಕ್ಕಿಲ್ಲದ ಮನೆ ಒಂದು ಮನೆಯೇ ?' ಎಂದು ಅವಳಿಗೆ ಅನೇಕ ಬಾರಿ ಅನಿಸಿತ್ತು. ಅನೇಕ ದಿನಗಳು ಪಾಠಕ್ಕೆಂದು ಬರುತ್ತಿದ್ದ ಮಕ್ಕಳೆಲ್ಲ ಹೊರಟು ಹೋದ ಮೇಲೆ ತನ್ನ ಏಕಾಂತವಾಸವನ್ನು ನೆನೆದು ಅತ್ತುದುಂಟು. ತನ್ನ ವಯಸ್ಸಿನ ಇತರ ಹೆಂಗಸರು ಗಂಡಂದಿರೊಡನೆ ಸುಖವಾಗಿ ಇರುವಾಗ ತನಗೆ ಆ ಸಂಸಾರ ಸುಖವಿಲ್ಲವಾಯಿತೇ ಎಂದು ಪರಿತಾಪಗೊಳ್ಳುವಳು. ಆಗ ಗಂಡನ ಪ್ರೀತಿಯ ಮಾತು, ಸಾನಿಧ್ಯಸುಖಕ್ಕಾಗಿ ಹೃದಯ ಕಾತರಿಸುವುದು. ರಾಮಚಂದ್ರನೊಡನೆ ತಾನು ಕಳೆದಿದ್ದ ಸುಖಜೀವನದ ನೆನಪಾಗಿ, ಹೋಗಿ ಅವನ ಕಾಲು ಕಟ್ಟಲೇ, ತಪ್ಪನ್ನು ಮನ್ನಿಸಿ ಮತ್ತೆ ತನ್ನನ್ನು ಕೂಡಿಕೊಳ್ಳಲು ಬೇಡಿಕೊಳ್ಳಲೇ ಎಂದೆನಿಸುವುದು. ಅವೆಲ್ಲ ಒಂದೇ ಒಂದು ಕ್ಷಣದ ಚಿಂತೆ. ರಾಮಚಂದ್ರ ತನ್ನದಾವ ತಪ್ಪೂ ಇಲ್ಲದಿದ್ದರೂ, ತನ್ನನ್ನೇ ಪರಿಪರಿಯಾಗಿ ಪೀಡಿಸಿದ್ದು, ಅವನು ತನಗೆ ಬಗೆದ ಮೋಸ,ಅನ್ಯಾಯ ಎಲ್ಲವೂ ನೆನಪಿಗೆ ಬಂದು, ಅಂತಹ ನೀಚನೊಂದಿಗೆ ಮತ್ತೆ ವೈಸಂಬಂಧ ಬೆಳಸಬೇಕೇ ? ಎಂದು ಹೃದಯ ವಜ್ರದಷ್ಟು ಕಠಿಣವಾಗುವುದು. ಆಗ ರಾಮಚಂದ್ರನ ನೆನಪು ಗಾವುದ ದೂರ ಓಡುವುದು. ಆ ಮಾಯಾಮೃಗದ ಚಿಂತೆ ತನಗೇಕೆ ಎಂದು, ಆ ಬಗೆಯ ಎಲ್ಲ ಆಲೋಚನೆಗಳಿಂದ ಮನ

ಸ್ಸನ್ನು ಬಲವಂತವಾಗಿ ಕಿತ್ತು, ತನ್ನ ದೈನಂದಿನ ವ್ಯವಹಾರಗಳಲ್ಲಿ ಮನಸ್ಸು ಹಾಕುವಳು.

ಇಂತು ಭಾವನೆಗಳ ಉಬ್ಬರವಿಳಿತಗಳಲ್ಲಿ ಶಾರದೆಯ ಬಾಳು ಒಂದಲ್ಲ, ಎರಡಲ್ಲ, ನಾಲ್ಕು ವರ್ಷಗಳು ಕಳೆದಿತ್ತು. ಹೀಗೆಯೇ ಮುಂದಿನ ವರ್ಷಗಳೂ ಗದ್ದಲರಹಿತವಾಗಿ ಸಾಗಿದ್ದರೆ ಶಾರದೆಯ ಕಥೆ ಬೇರೆಯಾಗಿರುತ್ತಿತ್ತು! ಆದರೆ ಆ ದಿನ ರಾಮಚಂದ್ರ, ಅಕಸ್ಮಾತ್ ಕಾಣಿಸಿಕೊಂಡು, ಸುಂಟರ ಗಾಳಿಯನ್ನು ಎಬ್ಬಿಸದಿದ್ದರೆ, ಶಾರದೆ ಕ್ರಾಂತಿಕನ್ಯೆ ಯಾಗುತ್ತಿದ್ದಳೋ ಇಲ್ಲವೋ ಹೇಳು ವುದು ಕಷ್ಟ!

ಆ ದಿನ ಪಾಠಕ್ಕೆ ಬಂದಿದ್ದ ಹುಡುಗರೆಲ್ಲ ತಮ್ಮ ತಮ್ಮ ಮನೆಗಳಿಗೆ ತೆರಳಿದ್ದರು. ಶಾರದೆ ಒಲೆಯ ಮೇಲೆ ಅನ್ನಕ್ಕೆ ಇಟ್ಟು ಯಾವುದೋ ಗೀತೆ ಯೊಂದನ್ನು ಗೊಣಗಿಕೊಳ್ಳುತ್ತಾ ವರಾಂಡದಲ್ಲಿ ಚಾಪೆಯ ಮೇಲೆ ಕಾಲು ಚಾಚಿಕೊಂಡು ಆರಾಮವಾಗಿ ಕುಳಿತಿದ್ದಳು. ಅದು ರಾತ್ರೆ ಸುಮಾರು ಎಂಟರ ಸಮಯ. ಯಾರೋ ಬಂದು ವರಾಂಡದ ಬಾಗಿಲನ್ನು ಮೆಲ್ಲನೆ ತಳ್ಳಿದಂತೆ ಆಯಿತು. ಶಾರದೆ ಕೂತಕಡೆಯಿಂದ ಕದಲದೆ.

“ ಯಾರು ? ” ಎಂದಳು.

“ ನಾನು. ಕೊಂಚ ಬಾಗಿಲು ತೆಗೆ ” ಎಂದಿತು ದನಿ.

ಆ ದನಿಯ ಪರಿಚಯ ಅವಳಿಗೆ ಚೆನ್ನಾಗಿತ್ತು. ಹೋಗಿ ಬಾಗಿಲು ತೆಗೆಯಬೇಕೋ ಬೇಡವೋ ಎಂದು ಆಲೋಚಿಸುತ್ತಿರುವಾಗಲೇ ಅವಳ ದೇಹ ಎದ್ದು ಬಂದು ಬಾಗಿಲುತೆರೆಯಿತು. ಎದುರಿಗೆ ರಾಮಚಂದ್ರ ಬೆವರುತ್ತಾ ನಿಂತಿದ್ದಾನೆ! ಅವನ ಬಟ್ಟೆಬರೆಗಳು ಕೆಟ್ಟುಹೋಗಿವೆ. ಮುಖ ಗಾಬರಿಯಿಂದ ಕೂಡಿದೆ. ಅವನನ್ನು ನೋಡಿದೊಡನೆಯೇ ಶಾರದೆ ದಿಗ್ಭ್ರಾಂತಳಾಗಿ ನಿಂತು ಬಿಟ್ಟಳು.

“ ಏನು ನೋಡುತ್ತಾ ನಿಂತುಬಿಟ್ಟೆ. ನಾನು ರಾಮಚಂದ್ರ! ”

ಎಂದ ಅವನು. ಶಾರದೆಗೆ ಈ ಮಾತು ಕಿವಿಗೆ ಬಿತ್ತೋ ಇಲ್ಲವೋ ಹೇಳುವುದು ಕಷ್ಟ.

‘ ಕೊಂಚ ಬಾಗಿಲು ಮುಚ್ಚಿ ಬಾ! ”

ಶಾರದ ಸುಮ್ಮನೆ ಕಂಬದಂತೆ ನಿಂತಿರುವುದನ್ನು ಕಂಡು ರಾಮಚಂದ್ರನೇ

ಬಾಗಿಲು ಮುಚ್ಚಿಬಂದ. ಅವನು ಬಾಗಿಲು ಹಾಕುವುದಕ್ಕೂ ಮೂರು ಜನ ಭೀಮಾಕಾರದ ಪಠಾಣರು ಬಾಗಿಲಬಳಿ ಬರುವುದಕ್ಕೂ ಸರಿ ಹೋಯಿತು. ರಾಮಚಂದ್ರ ನಿರ್ವಾಹವಿಲ್ಲದೆ ಹೊರಗೆ ಬರಬೇಕಾಯಿತು. ಅವರು ರಾಮ ಚಂದ್ರನನ್ನು ಬಾಯಿಗೆ ಬಂದಂತೆ ತಮ್ಮ ಭಾಷೆಯಲ್ಲಿ ಬೈಯ್ಯುತ್ತಾ ಹೊರಗೆ ಎಳೆದುಕೊಂಡು ಹೋಗಲು ನೋಡಿದರು. ಇವರ ಕೈಗೆ ತಾನು ಮತ್ತೆ ಸಿಕ್ಕಿದರೆ ಸತ್ತೆ ಎಂದುಕೊಂಡ. ಇವರಿಂದ ಹೇಗೆ ತಪ್ಪಿಸಿಕೊಳ್ಳುವುದು ?

ರಾಮಚಂದ್ರ ತನ್ನ ಬಿಡಾರವನ್ನು ಶೋಭಿಸಿಯ ಮನೆಗೆ ಬದಲಾಯಿಸಿದ ದಿನದಿಂದ ಈ ಮೂವರು ಪಠಾಣರ ಬಳಿಯಲ್ಲಿ ಕೊಂಚಕೊಂಚ ಸಾಲ ಮಾಡಿದ್ದ. ಅವರಿಗೆ ಸಕಾಲದಲ್ಲಿ ಬಡ್ಡಿಪಾವತಿ ಮಾಡದೆ ಇದ್ದುದರಿಂದ ಸಾವಿರ ರೂಪಾಯಿನ ಸಾಲ ನಾಲ್ಕು ವರ್ಷಕ್ಕೇ ಎರಡು ಸಾವಿರವಾಗಿತ್ತು. ರಾಮಚಂದ್ರ ಸಾಲದ ಹೊರೆಯನ್ನು ಇಳಿಸಿಕೊಳ್ಳುವ ದಾರಿ ಕಾಣದೆ ಪಠಾಣರಿಗೆ ಇಂದು ನಾಳೆ ವಾಯಿದೆ ಹೇಳುತ್ತಾ ಇಲ್ಲಿಯ ತನಕ ತಳ್ಳಿಕೊಂಡು ಬಂದಿದ್ದ. ಪಠಾಣರು ನೋಡುವಷ್ಟು ದಿನನೋಡಿ ಆಸಾಮಿ ಭಂಡಕುಳವೆಂದು ಅರಿತುಕೊಂಡು ಈ ದಿನ ಮುಗ್ಗ ಹಿಡಿದಿದ್ದರು. ಏನೇ ಆಗಲಿ ಈ ದಿನ ಒಂದು ನೂರುರೂಪಾಯಿನಷ್ಟು ಹಣವನ್ನು ರಾಮಚಂದ್ರನಿಂದ ಕಕ್ಕಿಸಿಬಿಡಬೇಕೆಂದು ನಿರ್ಧರಿಸಿ, ಅವನ ಆಫೀಸಿನ ಬಳಿಯಲ್ಲೇ ಅವನ ಮುತ್ತಿಗೆ ಹಾಕಿದರು. ರಾಮಚಂದ್ರ ಯಾರಲ್ಲಾದರೂ ಕೈಬದಲು ಮಾಡಿ ಅವರನ್ನು ಸಿಗಹಾಕಲು ಸಂಜೆ ಎಲ್ಲಾ ವಿಶ್ವಪ್ರಯತ್ನ ಮಾಡಿದ. ಅವನ ಗ್ರಹಚಾರಕ್ಕೆ ಒಂದು ರೂಪಾಯಿ ಹುಟ್ಟಲಿಲ್ಲ. ತಮ್ಮನ್ನು ಬೇಕೆಂದೇ ಅಲೆಸುತ್ತಿರುವನೆಂದು ಪಠಾಣರಿಗೆ ಮನವರಿಕೆಯಾಗಿ ಮಲ್ಲೇಶ್ವರದ ಜೇವಿನಮರದ ರಸ್ತೆಯಬಳಿ ಯಾರೂ ಕಾಣದ ಎಡೆಯಲ್ಲಿ ತಲೆಗೊಂದು ಏಟಿನಂತೆ ನಾಲ್ಕು ಬಿಗಿದಿದ್ದರು. ಅವರ ಏಟುಗಳನ್ನು ತಾಳಲಾರದೆ, ತಪ್ಪಿಸಿಕೊಂಡು ಹತ್ತಿರದಲ್ಲಿಯೇ ಇದ್ದ ಶಾರದೆಯ ಮನೆಗೆ ಓಡಿಬಂದಿದ್ದ. ಈಗ ಇಲ್ಲಿಗೂ ಬಂದಿದ್ದರು ಪಠಾಣರು, ಅವನ ಬೆನ್ನು ಹತ್ತಿ. ರಾಮಚಂದ್ರ ಏನೋ ಆಲೋಚನೆ ಮಾಡಿ, ಪಠಾಣರಿಗೆ ಧೈರ್ಯವಾಗಿ ಮುಖತೋರಿಸಿ, ಮನೆಯ ಹೊರಗೆ ಗದ್ದಲಮಾಡದೆ ಹತ್ತೆಂಟು ನಿಮಿಷ ಕಾದಿದ್ದರೆ ಅವರಿಗೆ ಕೊಂಚ ಹಣ ಹೆಂಡತಿಯಿಂದ ತಂದುಕೊಡುವುದಾಗಿ ಹೇಳಿ ಮತ್ತೆ ಮನೆಗೆ ಬಂದ. ಹೆಂಡತಿ ನಿಂತಲ್ಲಿಯೇ ಎಲ್ಲ ನಾಟಕವನ್ನೂ ನೋಡು

ತ್ತಿದ್ದಳು. ಇಂದು ಗಂಡನಿಂದ ತನಗೇನೋ ಅನಿಷ್ಟಕಾದಿದೆ ಎಂದು ತಿಳಿದು ಕೊಂಡು ಅದನ್ನು ಎದುರಿಸಲು ಸಿದ್ಧಳಾದಳು.

" ಶಾರದ, ಈ ಯಮಕಿಂಕರರು ನನ್ನನ್ನು ಜೀವಸಹಿತ ಇಂದು ಬಿಡುವು ದಿಲ್ಲ. ನಿನ್ನ ಬಳಿ ಹಣವಿದ್ದರೆ ಕೊಡುತ್ತೀಯಾ ? "

ಎಂದ ದೈನ್ಯವಾಗಿ. ಶಾರದ ಮಾತನಾಡಲಿಲ್ಲ.

" ಹೊರಗೆ ಅವರು ಕಾದಿದ್ದಾರೆ "

ಶಾರದ ಮೌನವಾಗಿದ್ದಳು.

" ಹಣವೆಲ್ಲಿದೆ ಎಂದು ತಿಳಿಸಿದರೆ ನಾನೇ ತೆಗೆದುಕೊಳ್ಳುತ್ತೇನೆ."

ಶಾರದ ಗಂಡನನ್ನು ಪಿಳಪಿಳನೆ ನೋಡುತ್ತಿದ್ದಳೇ ಹೊರತು ಏನೂ ನುಡಿಯಲಿಲ್ಲ. ಮಾತು ಹೊರಟರೆ ತಾನೇ ?

" ಏನು ಹಾಗೆ ನೋಡುತ್ತಿದ್ದೀಯೇ ? ನಾನು---ರಾಮಚಂದ್ರ--- ನಿನ್ನಗಂಡ "

" ಯಾರು ? ರಾಮಚಂದ್ರ! ನನ್ನಗಂಡ ? "

ಎಂದು ಎಚ್ಚರತಪ್ಪಿದವಳಂತೆ ನುಡಿದಳು ಶಾರದೆ, ಗಂಡನೆನ್ನುವುದನ್ನು ಮರೆತು. ಅವಳಿಗೆ ಈ ಮಾತುಗಳೆಲ್ಲ ಹೊಸದು.

" ಹ್ಞೂಂ. ನಿನ್ನಗಂಡ!"

" ಯಾವ ಗಂಡ ? "

" ಮದುವೆಯಾದ ಗಂಡ! "

" ನನಗೆ ಮದುವೆ ಆಗಿದೆಯೇ ? "

ಈ ಮಾತು ಅವಳಿಗೇ ಆಶ್ಚರ್ಯ.

" ಶಾರದ! ಏನು ನಿನ್ನ ಮಾತು. ಸುಮ್ಮನೆ ನನ್ನನ್ನು ಸತಾಯಿಸಬೇಡ- ನಿನ್ನ ಕಾಲಿಗೆ ಬೇಕಾದರೆ ಬೀಳುತ್ತೇನೆ....ಹಣಕೊಡು "

" ಹಣ! ನನ್ನಲ್ಲಿ ಹಣವೆಲ್ಲಿದೆ ? ಬೇಕಿದ್ದರೆ ಮನೆಯನ್ನೆಲ್ಲಾ ಹುಡುಕಿ ಕೊಳ್ಳಿ" ಎಂದಳು ಶಾರದ.

ಶಾರದೆಯ ಮಾತಿನಲ್ಲಿ ರಾಮಚಂದ್ರನಿಗೆ ನಂಬಿಕೆ ಹುಟ್ಟದೆ ಮನೆ ಯನ್ನೆಲ್ಲಾ ಶೋಧಿಸಿದ. ಒಂದು ದಮ್ಮಡಿ ಸಿಕ್ಕಲಿಲ್ಲ.

" ಹಾಗಾದರೆ ಈ ಯಮಕಿಂಕರರು ನನ್ನ ಪ್ರಾಣತೆಗೆಯುವುದು ಖಂಡಿತ" ಎಂದ ಖಿನ್ನನಾಗಿ.

" ಒಳ್ಳೆಯದೇ ಆಯಿತು "

" ನಾನು ಸತ್ತು ಹೋದರೆ ನಿನ್ನ ಪಾಡು ? "

" ನಾನು ಎಂದೋ ವಿಧವೆಯಾಗಿದ್ದೇನೆ "

ವಿಧವೆ ಎನ್ನುವ ಮಾತನ್ನು ಕೇಳಿ ರಾಮಚಂದ್ರ ಬೆಚ್ಚಿ ಬಿದ್ದ. ಆ ಪದ ಅವನಿಗೆ ತಾನು ಪಾರಾಗುವ ದಾರಿಯನ್ನು ತೋರಿಸಿತು.

" ಹಾಗಾದರೆ ನಾನು ಕಟ್ಟಿದ್ದ ಮಾಂಗಲ್ಯವನ್ನು ಕೊಡಿಲ್ಲಿ "

ಶಾರದ ಮಂಕಾಗಿ ನಿಂತಿದ್ದಳು. ಮಾಂಗಲ್ಯವನ್ನು ಕೊಡಬೇಕೇ ? ಬಿಡಬೇಕೆ ?

" ನೀನು ವಿಧವೆ. ವಿಧವೆಗೇಕೆ ಮಾಂಗಲ್ಯದ ಗೊಡವೆ ? "

ಎಂದು ಹೇಳುತ್ತಾ ರಾಮಚಂದ್ರ ಶಾರದೆಯ ಕೊರಳಿಗೆ ಕೈಹಾಕಿ ತಾಳಿ ಸರವನ್ನು ಎಳೆದ. ನುಶಿ ಹಿಡಿದಿದ್ದ ದಾರ ಪಟಕ್ಕನೆ ಕಿತ್ತುಹೋಗಿ ಸರ ಕೈಗೆ ಬಂತು. ದಾರಕ್ಕೆ ಪೋಣಿಸಿದ್ದ ಕರಿಮಣಿ ಗುಂಡುಗಳು ನೆಲದ ಮೇಲೆಲ್ಲಾ ಚೆಲ್ಲಾಡಿದವು. ಶಾರದೆ ಪ್ರತಿಭಟಿಸಲಿಲ್ಲ. ಕಟ್ಟಿದ್ದ ಕೈಯ್ಯೆ ಕಿತ್ತುಕೊಂಡು ಹೋಗುತ್ತಿರುವಾಗ ಏಕೆ ಪ್ರತಿಭಟನೆ ?

ಮಂಗಳ ಸೂತ್ರ ಕೈಗೆ ಬಂದೊಡನೆಯೇ ರಾಮಚಂದ್ರ ಮನೆಯಿಂದ ಕಾಲ್ತೆಗೆದ. ಅಲ್ಲಿ ಇದ್ದರೆ ಶಾರದೆ ಏನು ಮಾಡುವಳೋ ಎನ್ನುವ ಹೆದರಿಕೆ! ತಾಳಿಸರದಲ್ಲಿದ್ದ ಹತ್ತೆಂಟು ಚಿನ್ನದ ಗುಂಡುಗಳೂ, ಕೋಳವೆಗಳೂ, ಒಂದು ಸವರನ್ನಿನ ಎರಡು ತಾಳಿಗಳೂ, ಸೇರಿ ರಾಮಚಂದ್ರನಿಗೆ ಬೇಕಾಗಿದ್ದ ಹಣವನ್ನು ಚಿನ್ನದರೂಪವಾಗಿ ಕೊಟ್ಟಿದ್ದವು. ರಾಮಚಂದ್ರನಿಗೆ ಇನ್ನು ಭಯವಿಲ್ಲ!

ಶಾರದೆ ರಾಮಚಂದ್ರನು ಮನೆಯಿಂದ ಹೊರಟು ಹೋದಮೇಲೆ ಬಹು ಕಾಲ ವಿಗ್ರಹದಂತೆ ನಿಂತಿದ್ದಳು. ಉಸಿರಾಡುತ್ತಿದ್ದಳೋ ಇಲ್ಲವೋ ಅವಳಿಗೇ ಅನುಮಾನ! ಅವಳು ಶಾಂತವಾಗಿ ಕೊರಳನ್ನು ಮುಟ್ಟಿ ನೋಡಿಕೊಂಡಳು. ಸರವನ್ನು ಬಲವಾಗಿ 'ಗುಂಜಿ'ದುದರಿಂದ ಕೊರಳು ನೋಯುತ್ತಿತ್ತು. ಶಾರದ ಕೊರಳಿನಲ್ಲಿದ್ದ ಇತರ ಸರಗಳಲ್ಲಿ ಬೆರಳಾಡಿಸಿದಳು. ಮಾಂಗಲ್ಯ ಇನ್ನೂ ಕತ್ತಿನಲ್ಲಿ ಇದೆ ಎನ್ನುವ ಭ್ರಮೆಯಿಂದ ಹುಡುಕಿದಳು. ಹುಡುಕುತ್ತಲೇ ಇದ್ದಳು!

ಈಗ ಅವಳಿಗೆ ಪೂರ್ಣಪ್ರಜ್ಞೆ ಬಂದಿತ್ತು. ನಡೆದುಹೋದ ಘಟನೆಯ ಅರಿವಾಗಿತ್ತು.

"ಮಂಗಳಸೂತ್ರ ಹೋಯಿತು—ಹೋಯಿತು—ಹೋಯಿತು–ಹರಿದು ಹೋಯಿತು"

ಎಂದು ಕೂಗಿಕೊಂಡಳು. ಅವಳ ಕೂಗಿಗೆ ಮಲಗಿದ್ದ ಮಕ್ಕಳು ಬೆಚ್ಚಿ ಬಿದ್ದು ಎದ್ದುಕುಳಿತು ಅಳತೊಡಗಿದವು. ಅವರನ್ನು ಅಪ್ಪಿಕೊಂಡು ಹೋ! ಎಂದು ಅತ್ತಳು. ರಾತ್ರಿ ಕಳೆದು ಬೆಳ್ಳಿ ಮೂಡುವ ತನಕ ಅತ್ತಳು. ಅತ್ತು ಅತ್ತು ಕಣ್ಣು ಬಾಡಿ ಆಗ ನಿದ್ರೆ ಅವಳಿಗೆ. ಅವಳ ಅಳುವಿನ ಅಬ್ಬರವನ್ನು ಕೇಳಿದ ನೆರೆಮನೆಯುವರು ಏನೋ ಕಳ್ಳತನ ನಡೆದಿದೆ ಎಂದುಕೊಂಡರು. ಹೌದು. ಭಾರಿ ಕಳ್ಳತನ ನಡೆದಿತ್ತು. ಆ ರಾತ್ರಿ ಅತ್ಯಮೂಲ್ಯವಾದ ಆಭರಣ "ಮಾಂಗಲ್ಯ"ದ ಕಳುವಾಗಿತ್ತು.

## ೧೦

ಶಾರದೆ ಒಂದೆರಡು ದಿನ ತನ್ನ ಸತೀತ್ವದ ಮುದ್ರಾಭರಣವೆನಿಸಿದ್ದ ಮಂಗಳಸೂತ್ರ ಹೋದುದಕ್ಕಾಗಿ ತುಂಬಾ ಜಡವಾಗಿ ಬಿಟ್ಟಿದ್ದಳು. ಆದರೆ ಕೆಲವೇ ದಿನಗಳಲ್ಲಿ ಮಾಂಗಲ್ಯ ತನ್ನ ಕತ್ತಿನಲ್ಲಿ ಇದ್ದುದಕ್ಕಿಂತಲೂ ಹೋದುದೇ ಮೇಲು ಎಂದೆನಿಸಿತು. ಅದು ಅವಳ ಮೈಮೇಲೆ ಇದ್ದಷ್ಟು ದಿನ ಅವಳಿಗೆ ಪತಿಯ ಹಂಗಿತ್ತು. ಅದು ತನಗೊಬ್ಬ ಗಂಡನಿರುವ ವಿಷಯವನ್ನು ಎತ್ತಿ ಸಾರುವ ಏಕೈಕ ಲಾಂಛನವಾಗಿತ್ತು. ಪರಪುರುಷರು ತನ್ನ ಕಡೆಗೆ ಗಮನ ಕೊಡಬಾರದೆಂದು ಬೆದರಿಸುವ ಒಂದು ರಕ್ಷಾಕವಚವಾಗಿತ್ತು. ಅದನ್ನು ಕಟ್ಟಿದ್ದ ಗಂಡನೇ ಇಂದು ಕಿತ್ತುಕೊಂಡು ಹೋಗಿದ್ದ. ಅದನ್ನು ಕಟ್ಟುವಾಗ ಪುರೋಹಿತರು ಹೇಳಿದ ಮಂತ್ರಘೋಷಕ್ಕೆ ಈಗ ಅರ್ಥವಿಲ್ಲ. ಆ ಮಂಗಳಸೂತ್ರ ಇದ್ದಾಗ ತಾನೆ ಅರ್ಥವಿತ್ತೇ? ಶಾಸ್ತ್ರಿಗಳು ಅಗ್ನಿಯ ಎದುರಿನಲ್ಲಿ ಗಂಡನ ಕೈಲಿ ಪ್ರತಿಜ್ಞೆ ಮಾಡಿಸಿದ್ದರು—ಧರ್ಮ, ಅರ್ಥ, ಕಾಮ, ಮೋಕ್ಷಗಳಲ್ಲಿ ಇವಳು

ನಿನ್ನ ಸತಿ. ಸಹಭಾಗಿನಿ ಎಂದು. ಆದರೆ ಗಂಡನೊಡನೆ ಸಂಸಾರ ಮಾಡಿ ದಷ್ಟು ದಿನ ತಾನು ಕೇವಲ ಅರ್ಥಕಾಮುಗಳಿಗಾಗಿ ಬದುಕಿದ್ದಳೇ ಹೊರತು, ಬೇರೆಯಲ್ಲ. ತನ್ನ ಚಿನ್ನದ ಸರ, ಕೈಬಳೆ, ಕಡೆಗೆ ಮಾಂಗಲ್ಯ ಎಲ್ಲವೂ ಅವನ ಆರ್ಥಿಕ ಮುಗ್ಗಟ್ಟನ್ನು ಬಿಡಿಸಲು ನೆರವಾಗಿದ್ದವು. ಅರ್ಥದ ಗತಿ ಹೀಗಾದರೆ ಇನ್ನು ಕಾಮದ ಗತಿ ? ತಾನು ಅವನಿಗೆ ಬೇಕಿದ್ದುದು ತನ್ನಿಂದ ಪಿತೃಗಳ ಪಿಂಡಾರ್ಥವಾಗಿ ಒಂದು ಪುತ್ರರತ್ನವನ್ನು ಪಡೆಯಲೆಂದಲ್ಲ. ಅವನ ಕಾಮ ಪಿಪಾಸೆಯನ್ನು ತಣಿಸಲು ತಾನು ಬೇಕಾಗಿತ್ತು. ಮದವೇರಿದ ಅವನ ದೇಹ ವನ್ನು ತೃಪ್ತಿಗೊಳಿಸಲು ಸುಕೋಮಲವಾದ ತನ್ನ ದೇಹ ಬೇಕಿತ್ತು!............ ಅಷ್ಟಲ್ಲದೇ ಏನು ?........ತನ್ನಿಂದ ಒಂದು ಪುಣ್ಯಸಂತಾನವನ್ನು ಪಡೆಯು ವುದೇ ಅವನ ದಾಂಪತ್ಯದ ನೀತಿಯಾಗಿದ್ದರೆ ಯಾವಳೋ ಎಟ್ಟಿ ಹೆಂಗಸಿಗೆ ಮರುಳಾಗಿ ತನ್ನ ಧರ್ಮಸಂತಾನವನ್ನು ಅವನೇಕೆ ಮರೆಯಬೇಕು ? ಇಂತಹ ಪುರುಷನೊಡನೆ ಇದ್ದ ತನ್ನ ವೈಸಂಬಂಧ ಪವಿತ್ರವೆನ್ನಲು ಹೇಗಾದೀತು. ಇದು ಮದುವೆಯ ಮುಖವಾಡದ ಹಿಂದೆ ನಡೆಸಿದ ವಿಕೃತ ಲೈಂಗಿಕ ಜೀವನ! ಮದುವೆ ಅದೊಂದು ಅರ್ಥವಿಲ್ಲದ ಬೂಟಾಟಿಕೆ. ತಾನು ಸುಖಿಸುವ ಹೆಣ್ಣನ್ನು ಪರರು ಹಾರಿಸದಿರಲೆಂದು ಹಾಕಿದ ಡಂಗುರ!............ಹೀಗೆಂದ ಮಾತ್ರಕ್ಕೆ ಹೆಣ್ಣಿನ ದೇಹದ ಮೇಲೆ ಗಂಡಿಗೆ ಅಧಿಕಾರ ಕೊಟ್ಟಂತಾಯಿತೇ ? ಕೇವಲ ಮಂತ್ರಗಳಿಂದ ಗಂಡಿಗೆ ಈ ಅಧಿಕಾರ ಬಂದುದಾದರೆ ಇಂದು ಗಂಡನಿಂದ ತಾನು ತಿರಸ್ಕೃತಳಾಗಿರುವಾಗ ಆ ಅಧಿಕಾರದ ಕೊನೆ ಬಂದಂತಾಯಿತು. ತನ್ನ ಮೇಲೆ ಇದ್ದ ಹೊಣೆಗಾರಿಕೆಯನ್ನು ಹೊರಿಸಿದ್ದ ವ್ಯಕ್ತಿಯೇ ಕಳಚಿದಾಗ ತಾನು ಮದುವೆಯ ನಿಬಂಧನೆಯಿಂದ ಹೊರಗಿರುವೆನೆಂದಾಯಿತು. ಮದುವೆಗೆ ಮೊದಲಿನ ಸ್ವಾತಂತ್ರ್ಯ ತನ್ನದಾಯಿತು. ತಾನು ಇನ್ನು ಸಮಾಜದ ಕೃತಕ ಎಲ್ಲೆ ಕಟ್ಟನ್ನು ಕಡೆಗಣಿಸಿ ಮನಬಂದವರನ್ನು ಪ್ರೀತಿಸಬಹುದು. ಹೃದಯದ ಉರಿ ಆರಿಸುವ ಹೃದಯದೊಡನೆ ಬೆರೆಯಬಹುದು. ತನ್ನ ನೂರು ಹೊಂಗನ ಸನ್ನು ಅರಳಿಸುವ ಮಂದಮಾರುತನೊಡನೆ ಸ್ವಚ್ಛಂದ ಪ್ರಣಯ ಕೇಳಿಯಾಡ ಬಹುದು. ತಾನಿನ್ನುಸ್ವತಂತ್ರೆ! ಮದುವೆಯ ಬಂಧನದಿಂದ ತನಗಿನ್ನು ಬಿಡುಗಡೆ. ಗಂಡನಿರುವನೆಂಬ ಪಿಶಾಚಿಗೆ ಬೆದರಿ, ಮುದುಡಿ ಕುಳಿತಿದ್ದ ಹೃದಯದ ಹಕ್ಕಿಗೆ ಇಂದು ಪಂಜರದಿಂದ ಬಿಡುಗಡೆ. ಅದು ಇಂದು ರೆಕ್ಕೆಗೆದರಿ ಮನಬಂದತ್ತ

ಹಾರಬಹುದು; ಕುಣಿದು ಕುಪ್ಪಳಿಸಬಹುದು!

ಈ ವಿಚಾರಗಳನ್ನೆಲ್ಲಾ ಮೆಲಕುಹಾಕುತ್ತಾ ಶಾರದೆಗೆ ವೈರೋಪ್ಯಾಂಚನವಾಯಿತು. ಎಂತಹ ಹುಚ್ಚು ಆನಂದ ಅವಳದು!

ಆದರೆ ಸಮಾಜ ಅವಳ ಆನಂದದಲ್ಲಿ ಪಾಲುಗೊಳ್ಳಲು ಸಿದ್ಧವಿರಲಿಲ್ಲ. ಅದಕ್ಕಿನ್ನೂ ಒಂದು ಕಾಲದಲ್ಲಿ ಗಂಡನಾಗಿದ್ದ ರಾಮಚಂದ್ರನ ಭೀತಿ ಇದ್ದೇ ಇತ್ತು. ಅವನು ಕಟ್ಟಿದ್ದ ಮಂಗಳ ಸೂತ್ರ ಹರಿದು ಹೋದರೇನಂತೆ! ಅವನಿನ್ನೂ ಜೀವಂತನಿದ್ದಾನೆ, ಶಾರದೆ ತನ್ನವಳೆಂದು ಸಾರಲು. ಅವನ ಮಾತಿಗೂ ಮೀರಿದ ಪ್ರಮಾಣವನ್ನು ಒಪ್ಪಲು ಸಮಾಜ ಸಿದ್ಧವಿಲ್ಲ. ಅವನ ಕಣ್ಣಿಗೆ ಶಾರದೆ ಇನ್ನೂ ರಾಮಚಂದ್ರನ ಸೊತ್ತು. ಅವನು ಅನುಭವಿಸಲಿ—ಬಿಡಲಿ!

ಇಂತಹ ಮೂಢನಂಬಿಕೆಯ ಸಮಾಜವನ್ನು ಧಿಃಕ್ಕರಿಸಿ ಬಾಳುವ ಎದೆಗಾರಿಕೆ ಶಾರದೆಯಲ್ಲಿತ್ತು.

ಮಾಂಗಲ್ಯ ಅಪಹಾರವಾದ ದಿನ ಶಾರದೆಯ ಪಾಲಿಗೆ ಒಂದು ಹಬ್ಬದ ದಿನವಾಯಿತು. ಮಾರನೆಯ ವರ್ಷ ಆ ದಿನ ಬಂದಾಗ ಹಬ್ಬದಡಿಗೆಯನ್ನು ಮಾಡಿ ಮಕ್ಕಳಿಗೆ ಬಡಿಸಿದಳು. ಆ ದಿನ ವಿಚಾರಿಸಿಕೊಂಡು ಹೋಗಲು ಅಕಸ್ಮಾತ್ತಾಗಿ ಬಂದಿದ್ದ ಕಿಟ್ಟಣ್ಣನನ್ನು ಬಲವಂತಪಡಿಸಿ ಅಲ್ಲೇ ಊಟಕ್ಕೆ ನಿಲ್ಲಿಸಿಕೊಂಡಳು. ಕಿಟ್ಟಣ್ಣ ಸಂಕೋಚಪಟ್ಟುಕೊಂಡೇ ಊಟಕ್ಕೆದ್ದ. ರಾಮಚಂದ್ರ ಹೆಂಡತಿಯನ್ನು ಬಿಟ್ಟು ಹೋದಲಾಗಾಯ್ತು ಅವರ ಮನೆಯಲ್ಲಿ ಊಟಕ್ಕೆದ್ದುದು ಆರೇಳು ವರ್ಷಗಳಲ್ಲಿ, ಇದೇ ಮೊದಲು. ಶಾರದ ಕಿಟ್ಟಣ್ಣನನ್ನು ಉಪಚರಿಸುತ್ತಾ ಎಂದಳು.

" ಇಂದು ಯಾವ ಹಬ್ಬ ಗೊತ್ತೇ ಕಿಟ್ಟಣ್ಣ ? "

" ಇಲ್ಲ ಶಾರದಮ್ಮ! "

" ನೋಡೋಣ. ಯಾವ ಹಬ್ಬವಿರಬಹುದು. ಊಹಿಸಿ ಹೇಳಿ."

" ಬಹುಶಃ ಕೃಷ್ಣವೇಣಿಯ ಹತ್ತನೆಯ ಹುಟ್ಟಿದ ಹಬ್ಬ ಅಂತ ಕಾಣುತ್ತೆ"

" ಅಲ್ಲ—ನನ್ನ ಮಾಂಗಲ್ಯದ ವರ್ಷಾಬ್ದಿಕ! "

ಈ ಮಾತಿನ ಅರ್ಥ ಬೇಗನೆ ಕಿಟ್ಟಣ್ಣನಿಗೆ ಆಗಲಿಲ್ಲ. ಶಾರದೆ ಕೊಂಚ ವಿವರಣೆಯಿತ್ತಾಗ " ಶಾರದೆಗೆ ಹುಚ್ಚು ಹಿಡಿದಿಲ್ಲ ತಾನೇ ? " ಎಂದುಕೊಂಡ. ಶಾರದೆ ಮಾಂಗಲ್ಯ ಹೋಯಿತೆಂದು ಅಳುವ ಬದಲು ನಗುತ್ತಿದ್ದಾಳೆ. "ಹೇಗೂ

ಉಂಟೇ ? ಜಗತ್ತಿನಲ್ಲಿ ಇಂತಹವರೂ ಉಂಟೇ " ಎಂದುಕೊಂಡ ಮನಸ್ಸಿನಲ್ಲಿ ಕಿಟ್ಟಣ್ಣ.

ಈಚೆಗೆ ಕೆಲವು ತಿಂಗಳುಗಳಿಂದ ಕಿಟ್ಟಣ್ಣ ಶಾರದೆಯರಲ್ಲಿ ಸಲಿಗೆಹೆಚ್ಚಿತ್ತು. ಇಬ್ಬರೂ ಇನ್ನೊಬ್ಬರ ಅಂಜಿಕೆಯಿಲ್ಲದೆ ಸ್ನೇಹಿತರಂತೆ ಮನಬಿಚ್ಚಿ ಮಾತನಾಡುತ್ತಿದ್ದರು. ಈಚೀಚೆಗೆ ಶಾರದೆಗೆ ಕಿಟ್ಟಣ್ಣನ ವಿಷಯದಲ್ಲಿ ತೀವ್ರಾಸಕ್ತಿ. ಅವನು 'ನಿಮ್ಮಂಥ ಹೆಂಡತಿ' 'ನಿಮ್ಮಂಥ ಹೆಂಡತಿ' ಎಂದು ಹೊಗಳಿದಾಗಲೆಲ್ಲ ಏಕೋ ಅವಳಿಗೆ ಮೈಯುಬ್ಬುತ್ತಿತ್ತು. ಕಿಟ್ಟಣ್ಣನೊಡನೆ ಮಾತನಾಡಲು ತುಂಬಾ ಹಿಂಜರಿಯುತ್ತಿದ್ದ ಶಾರದೆಗೆ ಈಗ ಅವನ ಮಾತೆಂದರೆ ಜೇನಿನಷ್ಟು ಸವಿ!

ಶಾರದೆ ತನ್ನ ವಿಷಯದಲ್ಲಿ ಮಿತಿಮೀರಿದ ಆಸಕ್ತಿ ತೋರಿಸುವುದನ್ನು ಕಂಡು, ಕಿಟ್ಟಣ್ಣ ಶಾರದೆ ಮಾಡುತ್ತಿರುವುದು ಸರಿಯೇ ಎಂದು ಆಲೋಚಿಸಿದ್ದ. ಶಾರದೆ ತನ್ನ ಹೊಸ ಜೀವನ ಆರಂಭಿಸಿದ ಮೊದಲ ದಿನಗಳಲ್ಲಿ ಕಿಟ್ಟಣ್ಣನೊಡನೆ ಮುಖಕ್ಕೆ ಮುಖಕೊಟ್ಟು ಮಾತನಾಡಿರಲಿಲ್ಲ. ರಾಮಚಂದ್ರ ಮನೆಯಲ್ಲಿದ್ದಾಗ ಇದ್ದ ಸಲಿಗೆ ಕೂಡ ಆಗ ಕಿಟ್ಟಣ್ಣನಿಗಿರಲಿಲ್ಲ. ಕಿಟ್ಟಣ್ಣ ಕೂಡ ಶಾರದೆಯೊಡನೆ ಮಿತಿಮೀರಿದ ಸಲಿಗೆ ಬೆಳಸಲು ಹೋಗಲಿಲ್ಲ. ಗಂಡಸಿಲ್ಲದ ಮನೆಯಲ್ಲಿ ಹೆಣ್ಣಿನೊಡನೆ ವಿಶೇಷ ಸಲಿಗೆಯಿಂದಿರುವುದು ಒಳ್ಳೆಯದಲ್ಲ ಎನ್ನುವ ವಿವೇಕವಾಣಿ ಸದಾ ಅವನಲ್ಲಿ ಜಾಗೃತವಾಗಿತ್ತು. ಶಾರದೆ ತನ್ನೊಡನೆ ಬಿಗುಮಾನದಿಂದ, ಸಂಕೋಚದಿಂದ ವರ್ತಿಸಿದಷ್ಟೂ ಅದನ್ನು ಶ್ಲಾಘಿಸುತ್ತಿದ್ದನೇ ಹೊರತು, ತೆಗಳುತ್ತಿರಲಿಲ್ಲ. ಆದರೆ ಕಳೆದ ಒಂದು ವರ್ಷದಿಂದ ಶಾರದೆಯ ವರ್ತನೆ ಬೇರೊಂದು ಬಗೆಯಾಗಿತ್ತು. ಕಿಂಚಿತ್ ಸದ್ದಾದರೆ ತನ್ನ ಚಿಪ್ಪಿನ ಒಳಗೆ ತಲೆ ಮರೆಸಿಕೊಳ್ಳುವ ಆಮೆಯಂತಿದ್ದ ಶಾರದೆ ಈಗ ತನ್ನ ದೈನಂದಿನ ವ್ಯವಹಾರಗಳಲ್ಲಿ ನಿರಾತಂಕವಾಗಿ ಈಜ ತೊಡಗಿದ್ದಳು. ಕಿಟ್ಟಣ್ಣ ತನ್ನೊಡನೆ ಮಾತನಾಡುತ್ತಾ ನಿಂತರೆ ಶಾರದೆಗೆ ತಾನು ರಾಮಚಂದ್ರನ ಹೆಂಡತಿ ಎನ್ನುವ ವಿಷಯ ಮರೆತು ಹೋಗುತ್ತಿತ್ತು. ಅವಳಿಗೆ ತಾನು ತನ್ನ ಪ್ರಿಯಬಂಧುವಿನೊಡನೆ ಮಾತನಾಡುತ್ತಿರುವಂತೆ ಭಾಸವಾಗುತ್ತಿತ್ತು. ಒಮ್ಮೊಮ್ಮೆ ಭಾವೋನ್ಮಾದದಲ್ಲಿ ಶಾರದೆ ಕಿಟ್ಟಣನೊಡನೆ ಶಾರದೆಯಂತಹ ಹೆಂಗಸು ಹೇಳಬಾರದ ಮಾತುಗಳನ್ನು ಹೇಳಿದ್ದಳು. ಇದನ್ನು ಅವನು ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ. ಯಾಕೆಂದರೆ ಶಾರದೆಯನ್ನು ಕಂಡರೆ ಕಿಟ್ಟಣ್ಣನಿಗೆ ತನ್ನ ಹೆಂಡತಿಯನ್ನು

ಕಂಡಂತೆಯೇ ಆಗುತ್ತಿತ್ತು; ಅವಳೊಡನೆ ಮಾತನಾಡುವುದೆಂದರೆ ಅವನಿಗೊಂದು ಹಬ್ಬ. ಆದರೆ ಅವನೆಂದೂ ಸಂಯಮರಹಿತನಾಗಿ ವರ್ತಿಸಿರಲಿಲ್ಲ. ಶಾರದೆಯೊಡನೆ ಮಾತನಾಡುವಾಗಲಿಲ್ಲಾ ತನ್ನ ನಡೆನುಡಿಯ ವಿಷಯವಲ್ಲಿ ತುಂಬಾ ಜಾಗರೂಕನಾಗಿದ್ದ. ಆದರೂ ಒಮ್ಮೊಮ್ಮೆ ಶಾರದೆಯ ರೀತಿನೀತಿ ಅವನನ್ನು ದುಡುಕಲು ಪ್ರಚೋದಿಸುತ್ತಿತ್ತು. ಆಗ ಶಾರದೆ ಏಕೆ ಹೀಗೆ ಆಡುವಳು ಎಂದು ಆಲೋಚಿಸುವನು.

ಕಿಟ್ಟಣ್ಣನಂತೆ ಶಾರದೆಯೂ ಆಲೋಚಿಸುವಳು— ಕಿಟ್ಟಣ್ಣನೊಡನೆ ತಾನೇಕೆ ಹೀಗೆ ವರ್ತಿಸುತ್ತೇನೆ ಎಂದು. ಅವಳಿಗೆ ಬೇಗನೆ ಅರಿವಾಯಿತು. ತಾನು ಕಿಟ್ಟಣ್ಣನ ಒಳ್ಳೆಯ ಗುಣಗಳಿಗೆ ಮುಗ್ಧಳಾಗಿದ್ದೇನೆ. ಅವನ ಸಚ್ಚಾರಿತ್ರ; ಉದಾರಾಂತಃಕರಣ, ಉದಾತ್ತವಿಚಾರಗಳಿಗೆ ತಾನು ಮಾರು ಹೋಗಿದ್ದೇನೆ. ಅವನ ಮೃದುಸ್ವಭಾವ ಹಾಗೂ ಉಚ್ಚ ಆದರ್ಶಗಳಿಗೆ ಮೋಹಿತಳಾಗಿದ್ದೇನೆ. ಹೆಚ್ಚೇನು ? ಕಿಟ್ಟಣ್ಣನನ್ನು ತಾನು ಪ್ರೀತಿಸುತ್ತಿದ್ದೇನೆ, ಎಂದು ಅವಳಿಗೆ ಖಚಿತವಾಯಿತು. ರಾಮಚಂದ್ರನಲ್ಲಿ ಕಾಣದಿದ್ದ ನಯ, ವಿನಯ, ಸತ್ಯಸಂಧ್ಯತೆ, ಸಂಯಮಜೀವನ, ರಸಿಕತೆಗಳನ್ನು ಕಿಟ್ಟಣ್ಣನಲ್ಲಿ ಕಂಡ ಶಾರದೆ ಅವನಿಗೆ ಮನಸೋತುದರಲ್ಲಿ ಆಶ್ಚರ್ಯವಿಲ್ಲ.

ಕಿಟ್ಟಣ್ಣನನ್ನು ಕಂಡಲಾಗಾಯಿತು ಶಾರದೆಗೆ ಅವನ ಬಗ್ಗೆ ಒಳ್ಳೆಯ ಭಾವನೆಯಿತ್ತು. ಎಷ್ಟೋ ಬಾರಿ ಕಿಟ್ಟಣ್ಣನ ಸದ್ಗುಣಗಳನ್ನು ರಾಮಚಂದ್ರನೊಡನೆ ತೂಗಿನೋಡಿ, ಕಿಟ್ಟಣ್ಣ ಗಂಡನಾಗಿ ಇರಬಾರದಿತ್ತೇ ಎಂದು ಆಶಿಸಿದ್ದಳು. ರಾಮಚಂದ್ರನ ಹಂಗು ಅವಳಿಗಿರುವತನಕ ಅವಳು ಇಂತಹ ವಿಚಾರಗಳಿಗೆ ಒಂದು ನಿಶ್ಚಿತರೂಪ ಪಡೆಯಲು ಅವಕಾಶಕೊಟ್ಟಿರಲಿಲ್ಲ. ಅವಳು ಕಾಯಾ, ವಾಚಾ, ಮನಸಾ, ರಾಮಚಂದ್ರನಿಗೆ ಎರಡು ಬಗೆಯದ ಸತೀರತ್ನವೇ ಆಗಿದ್ದಳು. ರಾಮಚಂದ್ರ ಅವಳ ಮಂಗಳಸೂತ್ರವನ್ನು ಅಪಹರಿಸಿ, ಅವಳ ಬಂಧವಿಮೋಚನೆ ಎಂದು ಮಾಡಿದನೋ ಆ ದಿನದಿಂದ ಶಾರದೆ ತಾನು ಅವಿವಾಹಿತ ಮಹಿಳೆ ಎಂದು ಮನಃಪೂರ್ತಿಯಾಗಿ ತಿಳಿದುಕೊಂಡಳು. ತನ್ನಂಥವಳು ಕಿಟ್ಟಣ್ಣನ ಬಗ್ಗೆ ಚಿಂತಿಸಿದರೆ—ಅನೀತಿಯಲ್ಲ, ಪಾಪವಲ್ಲ. ಎಂದುಕೊಂಡು ಕಿಟ್ಟಣ್ಣನ ವಿಷಯದಲ್ಲಿ ಹೊಂಗನಸನ್ನು ಕಟ್ಟಿಕೊಳ್ಳತೊಡಗಿದಳು. ತನ್ನ ಒಳ ಆಸೆಯನ್ನು ಸ್ತ್ರೀಸಹಜ ನಾಚಿಕೆಯಿಂದ ಬಾಯಿಬಿಟ್ಟು ತಿಳಿಸಲಾರದೆ

ಹಲವಾರು ರೀತಿಯಲ್ಲಿ ಅದನ್ನು ಪ್ರದರ್ಶಿಸಿದಳು. ಕಿಟ್ಟಣ್ಣ ಕೃಷ್ಣವೇಣಿ ಶ್ರೀಧರನನ್ನು ಎತ್ತಿಕೊಂಡು ಮುದ್ದುಮಾಡುವಾಗಲೆಲ್ಲ ಅವನು ತನ್ನನ್ನು ಮುದ್ದುಮಾಡುತ್ತಿರುವನೆಂದು ಶಾರದ ಕನಸುಕಾಣುವಳು. ಆದರೆ ತನ್ನ ವಿಷಯದಲ್ಲಿ ಕಿಟ್ಟಣ್ಣ ಅನಾಸಕ್ತನಾಗಿರುವುದನ್ನು ಕಂಡು ಅವಳ ಮನಸ್ಸೊಡೆಯುವುದು. ಕಿಟ್ಟಣ್ಣನಂತಹವನನ್ನು ಪಡೆಯುವ ಭಾಗ್ಯ ತನಗೆಲ್ಲಿಯದು ? ಎಂದು ಸುಮ್ಮನಾಗುವಳು. ಹೀಗೆ ಕಿಟ್ಟಣ್ಣ ಶಾರದೆಯರು ತುಂಬಾ ಸಮೀಪದಲ್ಲಿದ್ದರೂ, ತುಂಬಾ ದೂರದಲ್ಲಿದ್ದರು. ಜಿಂಕೆಯ ಬಳಿ ಬೆಣ್ಣೆ ಎಷ್ಟುಹೊತ್ತು ತಾನೇ ಮುದ್ದೆಯಾಗಿ ಉಳಿದೀತು ? ಅದಕ್ಕೆ ಶಾಖ ತಗಲುವತನಕ ತಾನೇ ?

ರಾಮಚಂದ್ರ ತನಗೆ ತಿಳಿಯದಂತೆ ಶಾಖವಾಗಿ ಒದಗಿಬಂದ.

ತಾನು ಕೈಬಿಟ್ಟ ಮೇಲೆ ಶಾರದೆ ಬೀದಿಯ ಪಾಲಾಗುತ್ತಾಳೆ ಎಂದು ತಿಳಿದಿದ್ದ ರಾಮಚಂದ್ರನಿಗೆ ಶಾರದೆ ಎಲ್ಲರಂತೆ ಮಾನವಾಗಿ ಸಂಸಾರಮಾಡಿಕೊಂಡಿರುವ ವಿಷಯ ಕೇಳಿ ಸಹಿಸದಾಯಿತು. ಅವಳ ನೆಮ್ಮದಿಯ ಬಾಳನ್ನು ಹಾಳುಮಾಡಲು ಶಾರದೆಯ ನಡತೆಯ ಬಗ್ಗೆ ಸುಳ್ಳಿನ ಕಥೆಕಟ್ಟಿ ಪ್ರಚುರ ಪಡಿಸಿದ. ಶಾರದೆ ಅದಕ್ಕೆ ಸೊಪ್ಪುಹಾಕಲಿಲ್ಲ. ಮಾನವಂತರ ಮನೆಯ ಹೆಣ್ಣು ಅವಳು. ಮಾನವಾಗಿಯೇ ಬಾಳಿದಳು. ಮಾಂಗಲ್ಯ ಕತ್ತಿನಲ್ಲಿರುವತನಕ ತ್ರಿಕರಣಪೂರ್ವಕವಾಗಿ ಪರಪುರುಷರ ವಿಷಯ ಆಲೋಚಿಸಿರಲಿಲ್ಲ. ಗಂಡ ಬಂದು ಮಾಂಗಲ್ಯವನ್ನು ಕಿತ್ತುಕೊಂಡು ಹೋದ. ಅನಂತರವೇ ಕಿಟ್ಟಣ್ಣನ ವಿಷಯದಲ್ಲಿ ಅವಳು ಮನಸ್ಸುಕೊಟ್ಟದ್ದು. ಈ ವಿಷಯ ಹೇಗೋ ರಾಮಚಂದ್ರನಿಗೆ ತಿಳಿಯಿತು. ತಾನು ತಿಂದು ಬಿಸಾಡಿದ ಎಂಜಲಿಗೆ ಬೇರೊಬ್ಬರು ಪ್ರತಿಸ್ಪರ್ಧಿಯಾಗಿ ನಿಂತುದು ಸಹಿಸದಾಯಿತು. ತನಗೆ ಬೇಡದ ವಸ್ತು ಪರರಿಗೂ ದಕ್ಕಬಾರದು ಎನ್ನುವ ಕೀಳು ಮನಸ್ಸು ರಾಮಚಂದ್ರನದು. ಸರಿ ಒಮ್ಮೆ ಕಿಟ್ಟಣ್ಣನನ್ನು ಸಂಧಿಸಿ, ತನ್ನ ಮನಃಕಷಾಯವನ್ನು ಕಾರಿದ.

" ಕಿಟ್ಟಣ್ಣ, ಶಾರದೆಯ್ನ ನಾನು ಬಿಟ್ಟುದೇಕೆ ಗೊತ್ತೇ ? ಅವಳ ಗೋಮುಖವ್ಯಾಘ್ರತನದಿಂದ "

ಎಂದು ಹೆಂಡತಿಯನ್ನು ಗಂಡನೇ ಬೈದರೆ ಮೂರನೆಯ ವ್ಯಕ್ತಿ ಕಿಟ್ಟಣ್ಣ ಏನನ್ನುತ್ತಾನೆ ?

"ಹೊರಗೆ ನೋಡಲು ಅವಳು ಯಾವ ಸೀತಾ ಸಾವಿತ್ರಿಯರಿಗೂ ಕಡಿಮೆಯಿಲ್ಲ. ಆದರೆ ಮುಸುಕಿನಲ್ಲಿ ನಡೆಯುವ ಅವಳ ಹಾದರದ ಪ್ರಕರಣಗಳನ್ನು ನೆನೆವರೆ—ಅಬ್ಬಾ!—ಮೈ ಜುಂ ಎನ್ನುವುದು "

ಈ ಸತಿನಿಂದೆಯನ್ನು ಕೇಳಿ ಕಿಟ್ಟಣ್ಣನಿಗೂ ಮೈ ಜುಂ ಎನ್ನದಿರಲಿಲ್ಲ.

" ನಾನು ಇಷ್ಟೆಲ್ಲಾ ಹೇಳುವ ಕಾರಣ ನೀನು ಅವಳಿರುವ ಮನೆಯ ಮಾಲೀಕ. ಏನಾದರೂ ಅತ್ತ ಹೋಗುವ ಪ್ರಮೇಯ ಬರಬಹುದು ಕೊಂಚ ಎಚ್ಚರಿಕೆಯಾಗಿರು ಅಂತ! "

" ನಿನ್ನ ಎಚ್ಚರಿಕೆಗೆ ಸಾವಿರ ನಮಸ್ಕಾರ ತೆಗೆದುಕೋ. ಮೊದಲು ಇಲ್ಲಿಂದ ದಯಮಾಡಿಸು " ಎನ್ನಲೇಬೇಕಾಯಿತು ಕಿಟ್ಟಣ್ಣ.

ಕಿಟ್ಟಣ್ಣನ ಮುಂದೆ ತನ್ನ ಬೇಳೆ ಬೇಯದೆಂದು ರಾಮಚಂದ್ರ, ಗಂಡನೆನಿಸಿಕೊಂಡ ವ್ಯಕ್ತಿ ಮಾಡಬಾರದ ಕೆಲಸಕ್ಕೆ ನಿರ್ಲಜ್ಜೆಯಿಂದ ಕೈಹಾಕಿದ.

ಒಂದು ದಿನ ಕಿಟ್ಟಣ್ಣನ ವಿಳಾಸಕ್ಕೆ ಒಂದು ಅನಾಮಧೇಯ ಪತ್ರಬಂತು. ಅದರಲ್ಲಿ ಶಾರದೆಯನ್ನು ಕೆಡಿಸಿದವನು ಕಿಟ್ಟಣ್ಣನೇ ಎಂದು ಅವನನ್ನು ಮನಸ್ಸಿಗೆ ಬಂದಂತೆ ಬೈದು ಬರೆದಿದ್ದ. ಈ ಕಾಗದ ಓದಿಕೊಂಡು ಕಿಟ್ಟಣ್ಣ ನಿರಪರಾಧಿಯಾದ ತನ್ನ ಮೇಲೆ ಎಂತಹ ಆರೋಪಬಂತು ಎಂದು ತುಂಬಾ ಪೇಚಾಡಿಕೊಂಡ. ತಾನು ಶಾರದೆಯ ಮನೆಗೆ ಹೋದರೆ ತಾನೇ ಆ ಹೆಣ್ಣುಮಗಳ ಹೆಸರಿಗೆ ಕಳಂಕ ತಟ್ಟುವುದು ಎಂದುಕೊಂಡು ತಿಂಗಳ ಕಾಲ ಆ ಮನೆಯ ಕಡೆ ತಲೆಯಿಡಲಿಲ್ಲ.

ಕಿಟ್ಟಣ್ಣನಿಗೆ ಪತ್ರ ಬಂದದಿನವೇ ಶಾರದೆಗೂ ಒಂದು ಅನಾಮಧೇಯ ಪತ್ರ ಬಂದಿತ್ತು. ಅದರಲ್ಲಿ ಹೀಗೆ ಬರೆದಿತ್ತು:—

"—ನಿನ್ನನ್ನು ಹೆಸರಿಸಿ ಕರೆಯಲು ನನಗೆ ಅಸಹ್ಯವಾಗಿದೆ. ಅಂತಹ ನೀಚಬಾಳು ನಿನ್ನದು. ಹೊರಗೆ ಮಾತ್ರ ನಿನ್ನಂತಹ ಪತಿವ್ರತೆ ಇನ್ನಿಲ್ಲ. ಆದರೆ ನೀನು ನಡೆಸುತ್ತಿರುವ ವ್ಯಭಿಚಾರವನ್ನು ಕಂಡು ಎಂತಹ ಸೂಳೆ ಯಾದರೂ ನಾಚಬೇಕು! ಬಹುಶಃ ಈ ನಿನ್ನಚಾಳಿ ಹಳ್ಳಿಯಲ್ಲಿ ಇದ್ದಾಗಲೇ ಆರಂಭವಾಗಿರಬೇಕು. ಪಾಪ, ವಯಸ್ಸಿಗೆ ಬಂದ ಹೆಣ್ಣು, ಫಲಕ್ಕೆ ಬಂದ ಹಣ್ಣು ಯಾರಿಗೆ ಬೇಡ ? ಹಳ್ಳಿಯಲ್ಲಿ ನಿನ್ನೊಂದಿಗೆ ಸುಖಿಸಿದವರು ಎಷ್ಟು ಮಂದಿಯೋ ಯಾರು ಬಲ್ಲರು ? ಅಂತೂ ನಾನು ನಿನ್ನನ್ನು ಮತ್ತೆ ಬರಮಾಡಿಕೊಂಡು ಮಾಡಬಾರದ

ತಪ್ಪು ಮಾಡಿದೆ. ಎಂಜಲು ಊಟ ಮಾಡಿದೆ. ಇಲ್ಲಿಗೆ ಬಂದಮೇಲೆ ಕಲಿತ ವಿದ್ಯೆ ಮರೆತೀತೇ ? ನನ್ನ ಕಣ್ಣಿಗೆ ಮಣ್ಣೆರಚಿ ನಿನ್ನ ಆಟ ನಡೆಸಿದೆ. ನಾನು ನಿನ್ನ ಗಂಡನಾಗಿರುವುದರಿಂದ ನಿನ್ನ ಕಾಮುಕೇಳಿಗೆ ಅಡ್ಡಿ ಎಂದು ತಿಳಿದು ನನ್ನ ಮೇಲೆ ಇಲ್ಲದ ಆರೋಪ ಹೊರಿಸಿ, ಹೊರಗಟ್ಟಿದೆ. ಈಗ ನಿನ್ನಿಚ್ಛೆ ಬಂದವರಿಗೆ ನಿನ್ನ ದೇಹವನ್ನು ಬಡಿಸಬಹುದು. ಥೂ ! ನಿನ್ನ ಜನ್ಮಕ್ಕೆ ಬೆಂಕಿ ಇಟ್ಟರು. ಈಗ ಕಿಟ್ಟಣ್ಣನ ಮೇಲೆ ಕಣ್ಣು ಹಾಕಿದ್ದೀಯೆ ! ಇನ್ನೆಷ್ಟು ಜನರನ್ನು ಆಹುತಿ ತೆಗೆದುಕೊಳ್ಳಬೇಕೆಂದಿರುವೆ ಹಾದರಗಿತ್ತಿ ! ಬೀದಿಯಲ್ಲಿ ಬೋರ್ಡು ಹಾಕಿ ರಾಜಾರೋಷವಾಗಿ ನಿನ್ನ ಪಾಪಜೀವನ ನಡೆಸಬಾರದೇ ? ”

ಈ ಪತ್ರವನ್ನು ಓದಿಕೊಂಡು ಶಾರದೆ ಮೊದಲು ನಕ್ಕಳು. ಅನಂತರ ಅತ್ತಳು. ಈ ಬಾರಿ ಅತ್ತುದು ಗಂಡ ತನ್ನ ಮೇಲೆ ಮಿಥ್ಯಾರೋಪ ಹೊರಿಸಿದ್ದಾನೆಂದಲ್ಲ. ಇಂತಹ ನಿರ್ಲಜ್ಜ ಪಶುವಿನೊಂದಿಗೆ ತಾನು ನಾಲ್ಕು ವರ್ಷಗಳ ಕಾಲ ಸಂಸಾರ ಮಾಡಿಕೊಂಡು ಗಂಡನೆಂದು ತಿಳಿದಿದ್ದೆನಲ್ಲಾ ಎಂದು ಪಶ್ಚಾತ್ತಾಪವಾಗಿ ಕಣ್ಣೀರು ಬಂತು. ಅವಳ ದೃಷ್ಟಿ ಮನೆಯ ಮುಂದಿನ ಬಯಲಿನಲ್ಲಿ ಆಟವಾಡುತ್ತಿದ್ದ ಮಕ್ಕಳ ಕಡೆ ತಿರುಗಿತು. ಆ ಪಾಪಿಯ ಪಾಪದ ಕೂಸುಗಳು ಇವು ! ಎಂದು ಅವುಗಳನ್ನು ಹೆತ್ತು ಹೊತ್ತುದಕ್ಕಾಗಿ ಅವಳಿಗೆ ತನ್ನ ದೇಹದ ಮೇಲೆ ಅಸಹ್ಯವಾಯಿತು. ಆದರೆ ತಾಯಿಯ ಕಣ್ಣಿನಲ್ಲಿ ನೀರನ್ನು ಕಂಡು ಕೃಷ್ಣವೇಣಿ ‘ ಅಮ್ಮಾ ಯಾಕೆ ಅತ್ತೀಯಾ ’ ಎಂದು ಓಡಿ ಬಂದು ತಬ್ಬಿಕೊಂಡಾಗ ಅವಳ ಮಾತೃಹೃದಯ ಕರಗಿ, ಮಗಳನ್ನು ನೇವರಿಸುತ್ತಾ ತನ್ನಲ್ಲೇ ಅಂದುಕೊಂಡಳು—

“ ಈ ಮಕ್ಕಳನ್ನು ಪಾಪದ ಕೂಸುಗಳೆಂದು ಕರೆದು ನಾನು ಯಾವ ನರಕಕ್ಕೆ ಹೋಗಲಿ ? ”

ಕಿಟ್ಟಣ್ಣ ಸಾಮಾನ್ಯವಾಗಿ ಎಂಟು ದಿನಕ್ಕೆ ಒಮ್ಮೆಯಾದರೂ ಶಾರದೆಗೆ ಮುಖ ತೋರಿಸುತ್ತಿದ್ದವನು ತಿಂಗಳಾದರೂ ಮನೆಯ ಕಡೆ ಸುಳಿಯದಿರುವುದನ್ನು ಕಂಡು ಶಾರದೆಗೆ ತುಂಬಾ ಕಳವಳವಾಯಿತು. ಕಿಟ್ಟಣ್ಣ ಮನೆಗೆ ಬಾರದಿರಲು ತನ್ನ ಗಂಡ ಕಾರಣವಾಗಿರಬಹುದೇ ? ಎಂದು ಅನುಮಾನಪಟ್ಟಳು. ತನಗೆ ಬಂದಿದ್ದಂತೆ ಕಿಟ್ಟಣ್ಣನಿಗೂ ಏಕೆ ಪತ್ರ ಬಂದಿರಬಾರದು ಎಂದುಕೊಂಡಳು. ಹಾಗೇನಾದರೂ ಆದರೆ ಎಂತಹ ಪ್ರಮಾದ ! ಎಂದುಕೊಂಡು ಕಿಟ್ಟ

ಣ್ಣನಿಗಾಗಿ ಕಾದಳು. ಒಮ್ಮೆ ಅವಳಿಗೆ ಕಿಟ್ಟಣ್ಣನನ್ನು ನೋಡದೆ ಅವನೊಡನೆ ಮಾತನಾಡದೆ ಎಷ್ಟು ಬೇಸರವಾಯಿತೆಂದರೆ ಅವನ ಅಂಗಡಿಗೆ ಹೋಗಿಯಾದರೂ ಮಾತನಾಡಿಸಿಕೊಂಡು ಬರೋಣವೆ ಎನ್ನುವ ಉತ್ಕಟಾಕಾಂಕ್ಷೆ ಉಂಟಾಯಿತು. ಇದನ್ನು ಕಾರ್ಯರೂಪಕ್ಕೆ ತರಲು ಅವಳಿಗೆ ಸಂಕೋಚವಾಗಿ ಸುಮ್ಮನಾದಳು. ಕಿಟ್ಟಣ್ಣ ಒಂದು ದಿನ ಬಾಡಿಗೆ ವಸೂಲಿಗೆಂದು ಶಾರದೆಯ ಮನೆಗೆ ಬರಲೇ ಬೇಕಾಯಿತು. ಬಂದ.

ಶಾರದೆ ಮಾತಿಲ್ಲದೆ ಬಾಡಿಗೆಯನ್ನು ತಂದಿತ್ತಳು. ಅದನ್ನು ತೆಗೆದುಕೊಂಡು ಕಿಟ್ಟಣ್ಣ ಹೊರಡಲು ಎದ್ದ.

" ಕೊಂಚ ಕುಳಿತುಕೊಳ್ಳಬಹುದಲ್ಲ "

ಎಂದಳು ಶಾರದೆ.

ಕಿಟ್ಟಣ್ಣ ವರಾಂಡದಲ್ಲಿದ್ದ ಕುರ್ಚಿಯ ಮೇಲೆ ಮಂಡಿಸಿದ. ಶಾರದೆ ವಿಷಯವನ್ನು ಹೇಗೆ ಆರಂಭಿಸುವುದು ಎಂದು ಯೋಚಿಸುತ್ತಾ ಶ್ರೀಧರನೊಂದಿಗೆ ಕಿಟ್ಟಣ್ಣನಿಗೆ ಉಪ್ಪಿಟ್ಟು ಕಳುಹಿಸಿದಳು. ಶ್ರೀಧರ್ ಉಪ್ಪಿಟ್ಟಿನ ತಟ್ಟೆ ಕೈಗೆ ಕೊಡುತ್ತಾ

" ಯಾಕೆ ಮಾವ ನೀವು ಮನೆಗೆ ಬರೋಲ್ಲ "

ಎಂದು ಮುಗ್ಧ ಪ್ರಶ್ನೆ ಕೇಳಿದ.

" ಬಂದಿದ್ದೇನಲ್ಲ ಮಗು "

ಈ ಉತ್ತರವನ್ನು ಶ್ರೀಧರ ಒಪ್ಪಲಿಲ್ಲ.

" ಆವತ್ತಿಂದ ಯಾಕೆ ಬರ್ಲಿಲ್ಲ. ಅಮ್ಮನ ಮೇಲೆ ಸಿಟ್ಟು ಮಾಡಿಕೊಂಡಿದ್ದೀರಿ " ಎಂದ. ಕಿಟ್ಟಣ್ಣ ಈ ಮಾತನ್ನು ಕೇಳಿ ಹೌಹಾರಿ ಉಪ್ಪಿಟ್ಟಿನ ಕೈಲೇ ಶ್ರೀಧರನ ಬಾಯಿ ಮುಚ್ಚಿದ.

ಈ ವೇಳೆಗೆ ಶಾಲೆಗೆ ಹೋಗಲು ಶೃಂಗಾರವಾಗಿದ್ದ ಕೃಷ್ಣವೇಣಿ ಕಾಫಿ ತಂದು ಮಾವನನ್ನು ವಿಚಾರಿಸಿದಳು.

" ಯಾಕೆ ಮಾವ ಅಮ್ಮ ಈಚೀಚೆಗೆ ತುಂಬಾ ಅಳೋದು. ಅದು ಯಾವುದೋ ಹಾಳು ಕಾಗದ ಬಂದಲಾಗಾಯ್ತು ಅಮ್ಮನ ಕಣ್ಣಿನಲ್ಲಿ ನೀರು ತಪ್ಪಿಲ್ಲ. "

ಎಂದಳು ಸಿಡುಕಾಗಿ. ಹುಡುಗರಿಗೆ ಕಿಟ್ಟಣ್ಣನನ್ನು ಕಂಡರೆ ತುಂಬಾ

ಸಲಿಗೆ. ಅವನೊಂದಿಗೆ ತಮ್ಮ ಮನೆಯ ಸುಖ ದುಃಖಗಳನ್ನು ಹೇಳಿಕೊಳ್ಳು ವುದು ಅವುಗಳಿಗೆ ರೂಢಿ. ಕಿಟ್ಟಣ್ಣ ಆ ಮಕ್ಕಳ ಭಾಗಕ್ಕೆ ಮಾವನಾಗಿದ್ದ. ಕೃಷ್ಣ ವೇಣಿಯ ಮಾತು ಕೇಳಿ ಕಿಟ್ಟಣ್ಣ ಅವಾಕ್ಕಾದ. ಅವನ ದೃಷ್ಟಿ ಶಾರದೆಯ ಕಡೆ ತಿರುಗಿತು. ಶಾರದೆಯೂ ಕಿಟ್ಟಣ್ಣನನ್ನು ಏನೋ ಒಂದು ಬಗೆಯಾಗಿ ನೋಡಿ ತಲೆ ತಗ್ಗಿಸಿದಳು.

" ಆಗಲಮ್ಮ. ಅಳಬೇಡಾಂತ ಹೇಳ್ತೀನಿ. ನೀವು ಇನ್ನು ಸ್ಕೂಲಿಗೆ ಹೋಗಿ "

ಎಂದು ಹುಡುಗರನ್ನು ಶಾಲೆಗೆ ಕಳುಹಿಸಿ, ಅಲ್ಲೇ ಹೊಸಲಬಳಿ ನಿಂತಿದ್ದ ಶಾರದೆಯನ್ನು " ಏನು ಶಾರದಮ್ಮ ಸಮಾಚಾರ ? " ಎಂದ.

" ನನ್ನ ಸುದ್ದಿ ಆಮೇಲೆ. ನೀವು ಯಾಕೆ ಒಂದು ತಿಂಗಳ ಕಾಲ ಈ ಕಡೆ ಬರಲಿಲ್ಲ ? ಮೊದಲು ಹೇಳಿ "

" ಕೆಲಸ ಹೆಚ್ಚಾಗಿತ್ತು. ಬಿಡುವಾಗಲಿಲ್ಲ "

" ಸುಳ್ಳು " ಎಂದಳು ನಗುತ್ತಾ

" ಅವರಿಂದ ನಿಮಗೇನಾದರೂ ಕಾಗದ ಬಂದಿತ್ತೇ "

" ಹ್ಞಾಂ. ಬಂದಿತ್ತು " ಎಂದ ಅನುಮಾನಿಸುತ್ತಾ.

" ಅಂಥದೇ ನನಗೂ ಒಂದು ಬಂದಿದೆ. "

" ನಿಮ್ಮ ಕಾಗದದಲ್ಲಿ ಏನು ಬರೆದಿದ್ದಾನೆ ! ?

ಅದನ್ನು ಬಾಯಲ್ಲಿ ಹೇಳಲು ಸಂಕೋಚಪಟ್ಟುಕೊಂಡು ಕಿಟ್ಟಣ್ಣ ತನಗೆ ಬಂದಿದ್ದ ಕಾಗದವನ್ನು ಜೇಬಿನಿಂದ ತೆಗೆದು ಶಾರದೆಯ ಕೈಗೆ ಇತ್ತ. ಶಾರದ ಅದನ್ನು ಓದಿಕೊಂಡು ಸಿಟ್ಟುಸಿರು ಬಿಟ್ಟು ತನಗೆ ಬಂದಿದ್ದ ಕಾಗದವನ್ನು ನಿಸ್ಸಂಕೋಚದಿಂದ ಕಿಟ್ಟಣ್ಣನ ಕೈಗೆ ಕೊಟ್ಟಳು.

" ನನ್ನ ಮಾಂಗಲ್ಯದ ಜತೆಯಲ್ಲಿಯೇ ಅವನು ನನ್ನ ಭಾಗಕ್ಕೆ ಇನ್ನಿಲ್ಲ ವೆಂದಿದ್ದೆ. ಇನ್ನೂ ಕಾಡುತ್ತಿದ್ದಾನಲ್ಲ ! " ಎಂದಳು ಶಾರದ ಬೇಸತ್ತು.

" ಹೌದು ಇದುವರೆಗೆ ಬದುಕಿ ಕಾಡಿದ—ಈಗ ಸತ್ತು ಕಾಡುತ್ತಿದ್ದಾನೆ. ಅವನು ಇಷ್ಟು ತುಚ್ಛನೆಂದು ನಾನೆಣಿಸಿರಲಿಲ್ಲ ! "

" ಹಾಗಾದರೆ ನನ್ನ ವಿಷಯದಲ್ಲಿ ನಿಮಗೆ........"

ಶಾರದ ಮಾತು ಪೂರೈಸುವ ಮುನ್ನ ಕಿಟ್ಟಣ್ಣ ಹೇಳಿದ

" ನಿಜವಾಗಿಯೂ ಪೂರ್ಣ ನಂಬಿಕೆಯಿದೆ. ನೀವು ಈ ಬಗ್ಗೆ ಚಿಂತಿಸುವ ಕಾರಣವಿಲ್ಲ! ನಾಯಿ ಬೊಗಳಿದರೆ ಸ್ವರ್ಗಕ್ಕೆ ಕುಂದೇ? "

" ಬೊಗಳುವ ನಾಯಿ ಬೊಗಳಿಕೊಳ್ಳಲಿ. ಒಮ್ಮೊಮ್ಮೆ ನಿಮ್ಮಂಥ ಸಜ್ಜನರ ಮೇಲೂ ಬೀಳಲು ಬರುತ್ತದಲ್ಲ! "

" ಬಿದ್ದಾಗ ತಕ್ಕ ಶಾಸ್ತಿ ಮಾಡಿ ಬುದ್ಧಿ ಕಲಿಸಬೇಕು. "

" ಇದಕ್ಕೆ ನೀವು ಸಿದ್ಧರಿದ್ದೀರಾ? "

" ಅಂದರೆ? "

" ಆ ನಾಯಿ ನಮ್ಮಿಬ್ಬರ ಶೀಲವನ್ನು ಕುರಿತು ಅಕಾರಣವಾಗಿ ಬೊಗುಳಿದೆ. ನಾವು ಅದನ್ನೇ ನಿಜಮಾಡಿ ತೋರಿಸಿ ಬೊಗಳುವ ನಾಯಿಗೆ ಬುದ್ಧಿ ಕಲಿಸಬಾರದೇಕೆ? "

ಕಿಟ್ಟಣ್ಣ ಈ ಮಾತು ಶಾರದೆಯ ಬಾಯಿಯಲ್ಲಿ ಬರುವುದೆಂದು ಖಂಡಿತ ನಂಬಿರಲಿಲ್ಲ. ಅವನು ಇಂತಹ ಮಾತು ಅವಳ ಬಾಯಿಂದ ಬಂದೀತೇ ಎಂದು ಬಹಳ ದಿನಗಳಿಂದ ಕಾದಿದ್ದ. ಈ ಮಾತು ಕೇಳಿದೊಡನೆಯೇ ಅವನಿಗೆ ಸ್ವರ್ಗ ಮೂರು ಗೇಣು ಉಳಿಯಿತು. ಅವನು ಆ ಆನಂದವನ್ನು ಅನುಭವಿಸುತ್ತಾ ಸುಮ್ಮನೆ ಕುಳಿತುಬಿಟ್ಟ. ಶಾರದ ಕಿಟ್ಟಣ್ಣನ ಕೈಯನ್ನು ಮೆಲ್ಲನೆ ತನ್ನ ಕೈಯಲ್ಲಿ ಮೊಟ್ಟಮೊದಲನೆಯ ಬಾರಿ ತೆಗೆದುಕೊಂಡಳು. ಅವಳ ಕೈ ಕಂಪಿಸುತ್ತಿತ್ತು. ಶಾರದೆಯ ಕೈ ಸ್ಪರ್ಶವಾದೊಡನೆ ಕಿಟ್ಟಣ್ಣನಿಗೆ ಮೈಯಲ್ಲಿ ವಿದ್ಯುತ್ಪ್ರವಾಹ ಸಂಚಾರವಾದಂತಾಗಿ ಎಚ್ಚತ್ತ.

" ನನ್ನನ್ನು ಇನ್ನೆಷ್ಟು ದಿನ ಹೀಗೆಯೇ ಕಾಯಿಸುವಿರಿ? "

ಕಿಟ್ಟಣ್ಣ ' ಆ್ಞ ' ಎಂದ.

" ಕಳೆದ ಒಂದು ವರ್ಷದಿಂದಲೂ ನಿಮ್ಮನ್ನು ಹೃದಯಪೀಠದಲ್ಲಿ ಕುಳಿಸಿ ಆರಾಧಿಸುತ್ತಿದ್ದೇನೆ. ನನ್ನ ಮೇಲೆ ನಿಮಗೆ ಇದುವರೆಗೂ ದಯೆ ಬರಲಿಲ್ಲ. "

" ನೀವು ಒಂದು ವರ್ಷ ಕಾದರೆ ನಾನು ಆರು ವರ್ಷಗಳಿಂದ ನಿಮ್ಮನ್ನು ಕುರಿತು ತಪಸ್ಸು ಮಾಡಿದ್ದೇನೆ. ನಿಮ್ಮಲ್ಲಿ ಆ ನನ್ನ ಅಳಿದ ಬಾಳಿನ ಗೆಳತಿಯನ್ನು ಕಂಡಲಾಗಾಯಿತು ನಿಮ್ಮನ್ನು ಪೂಜಿಸುತ್ತಾ ಬಂದಿದ್ದೇನೆ. ನೀವು ರಾಮಚಂದ್ರನ ಸತಿಯಾಗಿದ್ದುದರಿಂದ ನನ್ನದು ನಿಷ್ಕಾಮ ಪ್ರೇಮ ಪೂಜೆಯಾಗಿತ್ತು. ನೀವು ನನ್ನವಳಾಗುವುದು ನನಗೆ ಸ್ವಪ್ನಪ್ರಾಯವಾಗಿತ್ತು. "

" ಮಂಗಳಸೂತ್ರ ಕತ್ತಿನಲ್ಲಿ ಇರುವ ತನಕ ನೀವೂ ನನಗೆ ಸ್ವಪ್ನ ಪ್ರಾಯರೇ ಆಗಿದ್ದಿರಿ ! "

" ಇಂದು ? "

" ನಾನು ನಿಮ್ಮವಳೇ ಆಗಿದ್ದೇನೆ. ಈಗ ನನಗೆ ಯಾರ ಹಂಗೂ ಇಲ್ಲ. ನಾನು ಸ್ವತಂತ್ರೆ ! "

" ಇದನ್ನು ಜಗತ್ತು ಒಪ್ಪಬೇಕಲ್ಲ ? "

" ಅದು ಒಪ್ಪಿದರೆಷ್ಟು ಬಿಟ್ಟರೆಷ್ಟು ? ನಮ್ಮಿಬ್ಬರ ಒಲಿದ ಹೃದಯಗಳು ಒಪ್ಪಿಕೊಂಡರೆ ಸರಿ. "

" ಲೋಕದ ಕಣ್ಣಿನಲ್ಲಿ—ಸಮಾಜದ ಕಣ್ಣಿನಲ್ಲಿ ನಾನು ಪರಪುರುಷ "

" ಪ್ರೇಮದ ಕಣ್ಣಿನಲ್ಲಿ ಪರದೈವ "

ಎಂದು ದನಿಗೂಡಿಸಿದಳು ಶಾರದೆ.

ಈ ಮಾತನ್ನು ಕೇಳಿ ಕಿಟ್ಟಣ್ಣ ಶಾರದೆಯನ್ನು ಬರಸೆಳೆದು ಅಪ್ಪಿಕೊಂಡು

" ಶಾರದ ನಾನಿಂದು ಸುಖಿ "

ಎಂದು ಅವಳ ಮುಖವನ್ನು ಎರಡು ಕೈಗಳಿಂದ ಎತ್ತಿದ.

" ನೀನು ನನ್ನವಳಾದೆ " ಎಂದ.

ಶಾರದೆಯ ಕಣ್ಣು ಏನೋ ಸೂಚಿಸಿತು. ತುಟಿ ಏನೋ ಒಪ್ಪಿತು. ಕಿಟ್ಟಣ್ಣ ಶಾರದೆಯ ಕೆಂದುಟಿಯ ಮೇಲೆ ಒಲವಿನ ಮುದ್ರೆಯನ್ನು ಒತ್ತಿದ.

ಈಗ ಶಾರದೆಯ ಸಂಸಾರ ಕಿಟ್ಟಣ್ಣನ ಸಂಸಾರವಾಗಿತ್ತು. ಕಿಟ್ಟಣ್ಣನ ಊಟ, ತಿಂಡಿ ಎಲ್ಲಾ ಶಾರದೆಯ ಮನೆಯಲ್ಲಿಯೇ ನಡೆಯುತ್ತಿತ್ತು. ಕೃಷ್ಣ ವೇಣಿಗಿಂತ ಶ್ರೀಧರನಿಗೆ ಮಾವ ಬಂದು ತಮ್ಮ ಮನೆಯಲ್ಲಿ ಇದ್ದುಬಿಟ್ಟುದು ಸಂತೋಷವಾಯಿತು. ಆದರೆ ಕೃಷ್ಣವೇಣಿ ಬುದ್ಧಿ ಬಂದ ಹುಡಿಗಿ. ಎಂದಾದರೂ ಒಮ್ಮೆ ಬಂದು ಮಾತನಾಡಿಸಿ ಹೋಗುತ್ತಿದ್ದ ಮಾವ ಬಂದು ತಮ್ಮ ಮನೆಯಲ್ಲಿಯೇ ಪಟ್ಟಾಗಿ ಇರಲಾರಂಭಿಸಿದ್ದು ಅವಳಿಗೆ ಯಾಕೋ ಸರಿಬರಲಿಲ್ಲ. ಕಿಟ್ಟಣ್ಣನು ಒಳ್ಳೆಯವನು ಇರಬಹುದು. ಆದರೂ ಅವನು ತಮ್ಮ ಸಂಸಾರದ ಹೊರೆಯನ್ನು ಹೊತ್ತುಕೊಂಡು ಶಾರದೆಯನ್ನು ಹೆಂಡತಿಯಂತೆ ಕಾಣತೊಡಗಿದ್ದು ಯಾಕೋ ಚಂದ ಕಾಣಲಿಲ್ಲ. ಆ ಮುಗ್ಧೆಗೆ ಕಿಟ್ಟಣ್ಣ ಈಗ ತನ್ನ ಮಲತಂದೆ ಎಂಬ ಅರಿವು ಹೇಗಾದೀತು?

ಕಿಟ್ಟಣ್ಣ ಶಾರದೆಯ ಮನೆಯಲ್ಲಿ ಬಂದು ನಿಂತ ಮೇಲೆ ಶಾರದೆಯ ಪಾಠ ಶಾಲೆಗೆ ಕೊನೆ ಬಂತು. ಶಾರದೆ ಗಂಡನಿದ್ದೂ ಬೇರೊಬ್ಬನೊಡನೆ ಸಂಸಾರ ಮಾಡುತ್ತಿರುವ ವಿಷಯ ತಿಳಿದು ಸಮಾಜಭೀತ ತಂದೆ ತಾಯಿಗಳು ತಮ್ಮ ಮಕ್ಕಳನ್ನು ಶಾರದೆಯ ಶಾಲೆಗೆ ಕಳುಹಿಸಿಕೊಡಲು ಹಿಂಜರಿದರು. ಕಡೆ ಗೊಂದು ದಿನ ಶಾಲೆ ಸಂಪೂರ್ಣವಾಗಿ ನಿಂತುಹೋಗಬೇಕಾಯಿತು. ಈ ಬಗ್ಗೆ ಶಾರದೆ ಚಿಂತಿಸಲಿಲ್ಲ.

ಶಾರದೆಯ ಹೊಸ ಸಂಸಾರದ ಕಥೆ ಕರ್ಣಾಕರ್ಣಿತವಾಗಿ ಹರಡಿ, ರಾಮಚಂದ್ರನ ಕಿವಿಗೂ ಬಿತ್ತು. ಹೀಗೆ ಆಗಬಹುದೆಂದು ಅವನೆಂದೋ ಊಹಿಸಿದ್ದುದರಿಂದ ಈ ವಿಷಯ ಅವನ ಮೇಲೆ ಹೆಚ್ಚಿನ ಪರಿಣಾಮ ಮಾಡ ಲಿಲ್ಲ. ಶಾರದೆಯ ಪರಿಚಯಸ್ಥರು ಶಾರದೆಯ ಹೊಸ ಸಂಸಾರದ ಕಥೆ ಕೇಳಿ ಆವಳೊಂದಿಗೆ ಮುಖ ಕೊಟ್ಟು ಮಾತನಾಡಲು ಹಿಂದೆಗೆದರು. ಪಕ್ಕದ ಮನೆಯ ಪಾತಮ್ಮನಂತೂ ಸಂಪೂರ್ಣವಾಗಿ ಮಾತು ಬಿಟ್ಟುಬಿಟ್ಟರು. ಎಲ್ಲರೂ ಶಾರದೆಯ ಎದುರಿನಲ್ಲಿ ಏನು ಹೇಳಲು ಧೈರ್ಯವಾಗದಿದ್ದರೂ ಅವಳ ಬೆನ್ನ ಹಿಂದೆ ಚಪ್ಪಾಳೆ ಇಕ್ಕಿ, ಹಾಸ್ಯ ಮಾಡುತ್ತಿದ್ದರು. ಅವರಿಗೆ ಶಾರದೆ ಮಾಡಿದ ಕೆಲಸಕ್ಕೂ ಸೂಳೆಯ ಕೆಲಸಕ್ಕೂ ಯಾವ ವ್ಯತ್ಯಾಸ ಕಾಣಲಿಲ್ಲ.

ಶಾರದ ತನ್ನ ಹೊಸ ಸಂಸಾರದ ವಿಷಯವನ್ನು ಯಾರಿಂದಲೂ ಬಚ್ಚಿಡ ಲಿಲ್ಲ. ಇತರರೊಡನೆ ಮಾತನಾಡುವಾಗ ಕಿಟ್ಟಣ್ಣನ ವಿಷಯ ಬಂದಾಗ ಅವ ನನ್ನು ತನ್ನ ಗಂಡನೆಂದೇ ಕರೆಯುವಳು. ಅವಳ ದಿಟ್ಟತನ ಕಂಡು ಕೆಲವರು ಮೂಗಿನ ಮೇಲೆ ಕೈಯಿಕ್ಕಿದರೆ ಕೆಲವರು ಮೂಗು ಮುರಿದರು. ಒಮ್ಮೆ ಯಾವುದೋ ವಿಷಯವಾಗಿ ಕಾಗದ ಬರೆಯುತ್ತಾ ಶಾರದ ಶ್ಯಾಮಲೆಗೂ ತನ್ನ ಹೊಸ ಸಂಸಾರದ ವಿಷಯ ತಿಳಿಸಿದಳು. ಈಗ ಶ್ಯಾಮಲೆಯ ಗಂಡ ಸೀತಾ ರಾಮುವಿಗೆ ತುಮಕೂರಿಗೆ ವರ್ಗವಾಗಿತ್ತು. ಶಾರದೆಯ ಕಾಗದ ಕಂಡು ಶ್ಯಾಮಲೆ ಎಲ್ಲೋ ಆವಳಿಗೆ ಬುದ್ಧಿ ಕೆಟ್ಟಿದೆ ಎಂದು ತೀರ್ಮಾನಿಸಿದಳು. ಮಾನ ವಂತ ಹೆಂಗಸು ಮಾಡುವ ಕೆಲಸವೇ ಇದು ? ಶ್ಯಾಮಲೆ ಕಟುವಾಗಿಯೇ ಉತ್ತರ ಬರೆದಳು. ಶಾರದೆಯ ಕೆಲಸವನ್ನು ಖಂಡಿಸಿ, ಅವಳಂತಹ ಸತ್ಕುಲ ಪ್ರಸೂತೆ, ಮಾನವಂತರ ಮನೆಯವಳು ಮಾಡುವ ಕೆಲಸವಲ್ಲವೆಂದು ಬೈದು ಬರೆದಳು.

" ನೀನು ನಿನ್ನ ಸುಖವನ್ನೇ ದೊಡ್ಡದು ಮಾಡಿಕೊಂಡು ನಮ್ಮ ವಂಶಕ್ಕೆ ಅಪಕೀರ್ತಿ ತಂದೆ! ನಿನ್ನಂಥವಳೊಂದಿಗೆ ನಾವು ಪತ್ರ ವ್ಯವಹಾರ ಇಟ್ಟು ಕೊಳ್ಳುವುದೂ ತಪ್ಪು ! "

ಶಾರದೆ ಆ ಕಾಗದವನ್ನು ಓದಿಕೊಂಡು ಸಮಾಧಾನವಾಗಿಯೇ ಉತ್ತರ ಕೊಟ್ಟಳು.

" ನಾನು ಮಾಡಿದ ಅಂತಹ ತಪ್ಪು ಏನು ತಂಗಿ? ಗಂಡಸು ಒಬ್ಬ ಹೆಂಡತಿಯನ್ನು ಬಿಟ್ಟು ಮತ್ತೊಬ್ಬಳನ್ನು ವರಿಸಬಹುದಂತೆ. ಹಾಗೆಯೇ ಹೆಂಡತಿ ಏಕೆ ಮಾಡಬಾರದು? "

" ನಮ್ಮ ಸಮಾಜದಲ್ಲಿ ಹೆಣ್ಣಿಗೆ ಅಂತಹ ಅವಕಾಶ ಎಲ್ಲಿ ಶಾರದ. ನಮ್ಮ ಹಿಂದೂ ಸಮಾಜದಲ್ಲಿ " ಸಾಧ್ವೀ ಸ್ತ್ರೀ, ಭರ್ತಾರಂ ದುಶ್ಶೀಲಮಪಿ ದೇವಾಮಿ ವಾರಾಧಯೇತ್ " ಅಂದರೆ ಪತಿವ್ರತೆಯಾದವಳು ತನ್ನ ಗಂಡನು ದುಸ್ಸ್ವಭಾವ ದವನಾದರೂ ಬಿಡದೆ ಅವನನ್ನು ದೇವತೆಯಂತೆ ಆರಾಧಿಸಬೇಕು ಎನ್ನುವ ಆರ್ಯೋಕ್ತಿಯಲ್ಲಿ ಸಾಧ್ವೀ ಧರ್ಮದ ಮೂಲ ಅಡಗಿದೆ. ನಿನ್ನ ಗಂಡ ನಿನ್ನನ್ನು ಬಿಟ್ಟು ಪರಸ್ತ್ರೀ ಸಂಗ ಮಾಡಿದರೂ ಅವನು ಮಾಡಿದಂತೆ ನೀನೂ ಪರಪುರುಷನ ಸಂಗ ಮಾಡಲು ಹಕ್ಕಿಲ್ಲ ಶಾರದ! ಹಕ್ಕಿಲ್ಲ !! " ಎಂದು ತಂಗಿ ಕಾಗದ ಬರೆದಳು.

" ಹಕ್ಕಿಲ್ಲ! ಏಕೆ ಹಕ್ಕಿಲ್ಲ? ಏಕೆ ಗಂಡಿಗೊಂದು ನಿಯಮ! ಹೆಣ್ಣಿ ಗೊಂದು ನಿಯಮ! ಇಂಥ ಪಕ್ಷಪಾತ ಹಿಂದೂ ಸಮಾಜವೇ ನನಗೆ ಬೇಡ! "

" ಅಂದರೆ ಜಾತಿಭ್ರಷ್ಟಳಾಗುತ್ತೀಯಾ ? " ಎಂದು ಮರು ಓಲೆ.

" ಇಲ್ಲ, ಸಮಾಜವನ್ನು ಧಿಃಕರಿಸುತ್ತಾ ರಾಮಚಂದ್ರನಂಥ ನಾಯಿಗಳಿಗೆ ಬುದ್ಧಿಗಲಿಸಲು ಹಿಂದೂ ಸಮಾಜದಲ್ಲಿಯೇ ಇರುತ್ತೇನೆ. "

" ನೀನು ಇಲ್ಲೇ ತಪ್ಪು ಮಾಡುತ್ತಿರುವುದು. ನಿನ್ನ ಗಂಡನಿಗೆ ಬುದ್ಧಿ ಕಲಿಸಲು ಹೋಗಿ, ನೀನು ಎಂತಹ ಅಪವಾದ ದುಷ್ಕೀರ್ತಿಯನ್ನು ಅಪ್ಪಿಕೊಳ್ಳು ತ್ತಿರುವೆ ನೋಡು. ನಿನ್ನ ಕೀರ್ತಿಗಿಂತಲೂ ಹೆಚ್ಚೇ ನಿನ್ನ ಸೇಡು? ನಿನ್ನ ಸೇಡು ಕೇವಲ ರಾಮಚಂದ್ರನ ಮೇಲೆ. ಆದರೆ ಕ್ಷಣಕಾಲ ಆಲೋಚಿಸು. ನಿನ್ನ ಕೆಲಸದಿಂದ ಇಡೀ ಸಮಾಜವೇ ಸಿಟ್ಟುಗೊಂಡು ತಿರುಗಿ ಬಿದ್ದರೆ ಅದರ ಪ್ರತೀಕಾರವನ್ನು ಎದುರಿಸಿ ಬದುಕಬಲ್ಲೆಯಾ? ಶಾರದ ಈಗಲೂ ದುಡು

ಕದೆ, ಬುದ್ಧಿಯನ್ನು ಹತೋಟಿಯಲ್ಲಿರಿಸಿ ಸಂಯಮ ಬಾಳು ಬದುಕ ಬಾರದೇ ? ”

ಇದೇ ಕಡೆಯ ಪತ್ರ ಶ್ಯಾಮಲೆಯಿಂದ.

ಶಾರದೆಗೆ ಆನಿಸಿತು. ತನ್ನ ಹಾಗೂ ಕಿಟ್ಟಣ್ಣನ ಸಂಬಂಧ ಪ್ರೇಮದ ಕಣ್ಣಿನಲ್ಲಿ ಸತಿಪತಿಗಳ ಸಂಬಂಧವಾಗಿದ್ದರೂ, ಸಮಾಜದ ಕಣ್ಣಿನಲ್ಲಿ ಪರ ಪುರುಷನೊಡನೆ ಇರುವ ಸಂಬಂಧ. ಇಂಥ ಸಂಬಂಧ ಧರ್ಮದ ದೃಷ್ಟಿಯಲ್ಲಿ ಮಾತ್ರವಲ್ಲ, ಕಾನೂನಿನ ದೃಷ್ಟಿಯಲ್ಲೂ :ನ್ಯಾಯಬಾಹಿರ. ತಮ್ಮ ಪ್ರೇಮ ಸಂಬಂಧವನ್ನು ಊರ್ಜಿತಗೊಳಿಸಿಕೊಳ್ಳಬೇಕಾದರೆ, ಅದನ್ನು ಯಾವುದಾದ ರೊಂದು ಬಗೆಯ ಧರ್ಮದ ಕಟ್ಟಿಗೆ ಒಳಪಡಿಸಬೇಕು. ಆಗ ಕಾನೂನಿನ ಬೆಂಬಲ ಮಾತ್ರವಲ್ಲ; ನೈತಿಕ ಬೆಂಬಲ ಕೂಡ ತಮ್ಮದಾಗುತ್ತದೆ. ಇದಕ್ಕೆ ಒಂದೇ ದಾರಿ. ತನ್ನ ಹಾಗೂ ರಾಮಚಂದ್ರನ ದಾಂಪತ್ಯ ವಿಚ್ಛೇದನ. ವಿವಾಹ ವಿಚ್ಛೇದನಕ್ಕೆ ಯಾವ ಕಾರಣ ಮುಂದೆ ಮಾಡಿಕೊಂಡು ಪಡೆಯಬೇಕು— ಎಂದು ಬಹುವಾಗಿ ಆಲೋಚಿಸಿ, ರಾಮಚಂದ್ರನಿಗೆ ಜೀವನಾಂಶದ ನೋಟೀಸು ( ಲಾಯರ ಮೂಲಕ ) ಕೊಡಿಸಿದಳು. ರಾಮಚಂದ್ರ ನ್ಯಾಯಾ ಲಯದಲ್ಲಿ

“ ಹೆಂಡತಿಯ ನಡತೆ ಸರಿಯಿಲ್ಲವೆಂದೂ ಅವಳು ಜೀವನಾಂಶಕ್ಕೆ ಬಾಧ್ಯ ಳಲ್ಲವೆಂದೂ ” ತಿಳಿಸಿದ.

ಶಾರದ ತನ್ನ ನಡತೆಯನ್ನು ಸಮರ್ಥಿಸಿಕೊಳ್ಳುವುದನ್ನು ಬಿಟ್ಟು ಗಂಡನ ನಡತೆಯನ್ನು ದೂರಿದಳು.

ಇವರಿಬ್ಬರಲ್ಲಿ ಯಾರು ಅಪಾದಿತರೆಂಬುದನ್ನು ನಿರ್ಣಯಿಸಲಾರದೆ ಜಡ್ಜರು “ ಇನ್ನು ಮುಂದೆ ನೀವಿಬ್ಬರೂ ಗಂಡಹೆಂಡಿರಾಗಿ ಬಾಳಲು ಸಾಧ್ಯವಿ ದೆಯೇ ” ಎಂದು ಪ್ರಶ್ನಿಸಿದಾಗ—

ಇಬ್ಬರೂ ಇಲ್ಲವೆಂದು ತಲೆಯಲ್ಲಾಡಿಸಿದರು. ಆಗ ಜಡ್ಜರು ಇಬ್ಬರ ಮನೋಭಾವವನ್ನೂ ಅರಿತುಕೊಂಡು ವಿವಾಹವಿಚ್ಛೇದನೆಗೆ ಅವಕಾಶ ಕೊಟ್ಟರು.

ಇದಾದ ಒಂದು ವಾರದೊಳಗೆ ಶಾರದೆ ಕಿಟ್ಟಣ್ಣನನ್ನು ಆರ್ಯಸಮಾ ಜದ ಧರ್ಮವಿಧಿಯಂತೆ ಮದುವೆಯಾಗಲು ನಿಶ್ಚಯಿಸಿ, ಆ ವಿಷಯವನ್ನು

ತಿಳಿಸುವ ಲಗ್ನ ಪತ್ರಿಕೆಯನ್ನು ತನ್ನ ಬಂಧು ಮಿತ್ರರಿಗೆ ಕಳುಹಿಸಿದಳು. ಲಗ್ನ ಪತ್ರಿಕೆ ಕಳುಹಿಸುವಾಗ, ರಾಮಚಂದ್ರ, ಶ್ಯಾಮಲೆ, ನರಸಿಂಹಮೂರ್ತಿ, ಪಾತಮ್ಮನವರನ್ನು ಮರೆಯಲಿಲ್ಲ.

## ೧೧

ಶಾರದೆಯ ದ್ವಿತೀಯ ವಿವಾಹದ ಇತಿಹಾಸ ಕೇಳಿ ಒಬ್ಬೊಬ್ಬರು ಒಂದೊಂದು ಆಡಿಕೊಂಡರು. "ಕಾಲ ಎಷ್ಟು ಕೆಟ್ಟುಹೋಯಿತು" ಎಂದು ಹೊಸದನ್ನು ಹಳೆಯ ಕಣ್ಣಿನಿಂದ ಕಾಣಲಾರದ ಹಿರಿಯರು ನುಡಿದು ನಿಟ್ಟುಸಿರಿಟ್ಟರೆ ವಿಶಾಲಭಾವನೆಯುಳ್ಳ ವೃದ್ಧರು 'ಕಾಲ ಬದಲಾಗುತ್ತಿದೆ ಎನ್ನಲು ಇದೊಂದು ನಿದರ್ಶನ–ಪತಿಯೇ ಪರದೈವವೆಂದು ನಂಬಿ ವಿಧವೆಯಾಗಿ ಕುಳಿತ ಸಣ್ಣ ವಯಸ್ಸಿನ ಹೆಣ್ಣುಮಕ್ಕಳಿಗೆ ಒಂದು ಯೋಗ್ಯ ಉದಾಹರಣೆ!" ಎಂದು ಮಾನವತೆಯಿಂದ ಆಡಿದರು. ಅನೇಕ ಜನ ಮನೆತಪ್ಪಿದ ಹೆಣ್ಣುಮಗಳು ತಮಗೆ ಶಾರದೆಯಷ್ಟು ಧೈರ್ಯವಿದ್ದು ಕಿಟ್ಟಣ್ಣನಂತಹ ಗಂಡ ಸಿಕ್ಕಿದ್ದರೆ ತಾವೂ ಹಾಗೆ ಮಾಡುತ್ತಿದ್ದವೆಂದು ಹೇಳಿಕೊಂಡು ಅತ್ತರು. ಕೇವಲ ಇಪ್ಪತ್ತು ವರ್ಷಕ್ಕೆ ತಲೆಯನ್ನು ವಿರೂಪಗೊಳಿಸಿಕೊಂಡು ಕೆಂಪು ಸೀರೆಯನ್ನುಟ್ಟು ತುರೀಯಾಶ್ರಮ ಸೇರಿದ್ದ ಬಾಲವಿತಂತುಗಳು,

"ಕತ್ತೆಯಾಗಿ ಬೆಳೆದು ಎರಡು ಮಕ್ಕಳತಾಯಿಯಾಗಿ ಕೈಹಿಡಿದ ಗಂಡನನ್ನು ಬಾಳಿಸಲಾರದೆ ಅವನನ್ನು ಸೂಳೆಯಪಾಲುಮಾಡಿ, ತಾನು ಯಾವನೋ ಲಫಂಗನನ್ನು ಕಟ್ಟಿಕೊಳ್ಳಲು ಅವಳಿಗೇನು ಬಂತು ಕೇಡು?" ಎಂದು ಶಾರದೆ ತುಳಿದ ದಾರಿಯಲ್ಲಿ ತುಳಿಯಲು ಹಿಂಜರಿದರು.

"ಏನೋ ಮಕ್ಕಳು ಮರಿ ಇಲ್ಲದಿದ್ದರೆ ಅದೊಂದು ತರಹ ಇತ್ತು ಎಲ್ಲಾ ಬಿಟ್ಟು ಗಂಡ, ಮಕ್ಕಳು ಇರೋಳ ಸಹವಾಸ ಮಾಡಿಕೊಂಡು ಮದುವೆ ಆದೇ ಅಂತ ಹೇಳ್ಕೊಳ್ಳೋಕೆ ನಾಚಿಕೆ ಆಗೋಲ್ಲವೇ ಕಿಟ್ಟಣ್ಣನಿಗೆ" ಎಂದು ಬೈಯ್ಯುವವರು ಬೈದೇ ಬೈದರು.

ಆ ಕೆಲವು ದಿನ ಆ ಬಡಾವಣೆಯ ಮಹಿಳಾವೃಂದಗಳಲ್ಲಿಯೂ, ಪುರಾಣದ ಕಟ್ಟೆಗಳಲ್ಲಿಯೂ, ಕ್ಲಬ್ಬುಗಳಲ್ಲಿಯೂ ಹರಟಲು ಎಲ್ಲರಿಗೆ ಇದೊಂದು ವಿಷಯ ಸಿಕ್ಕಿತು. ಕಿಟ್ಟಣ್ಣ ಮದುವೆಯಾದ ಹೊಸದರಲ್ಲಿ ಶಾರದೆಯನ್ನು ತನ್ನ ಅಣ್ಣನ ಮನೆಗೆ ಕರೆದುಕೊಂಡು ಹೋಗಿದ್ದ.

"ನಿನಗೆಲ್ಲಿ ಗಂಟು ಬಿದ್ದಳೋ ಈ ರಂಡೆ!" ಎಂದು ಎಲ್ಲರಿಗೆ ಕೇಳುವಂತೆಯೇ ಗೊಣಗಿದ ಕಿಟ್ಟಣ್ಣನ ಅಣ್ಣ, ಅತ್ತಿಗೆ ಬಂದವರನ್ನು ಕುಳಿತುಕೋ ಎನ್ನಲಿಲ್ಲ. ಶಾರದೆಗೆ ಬಾಯಾರಿಕೆಯಾಗಿ ಕುಡಿಯಲು ನೀರು ಕೇಳಿದಾಗ, ನೀರು ಕೊಡಲು ಹಿಂದು ಮುಂದು ತುಳಿದು ಅನಂತರ ಶಾರದೆ ನೀರು ಕುಡಿದ ಲೋಟವನ್ನು ಅವಳ ಎದುರಿನಲ್ಲಿಯೇ 'ಹುಳಿಹಾಕಿ' ತೊಳೆದಿದ್ದರು. ಅವರ ಭಾವನೆಯಲ್ಲಿ ಶಾರದೆ ಅಸ್ಪೃಶ್ಯಳೇ ಆಗಿದ್ದಳು.

ಅವರ ಮನೆಯನ್ನು ಬಿಟ್ಟು ಬರುವಾಗ ಕಿಟ್ಟಣ್ಣ

"ಶಾರದ ಅಣ್ಣನ ಮನೆಯಲ್ಲಿ ಹೀಗೆ ಕಂಡರು ಅಂತ ನೀನು ಏನೂ ತಿಳಿಯಬೇಡ. ಮೊದಲಿನಿಂದಲೂ ಅವರ ಹಣೆಯ ಬರಹವೇ ಹೀಗೆ! ಮುಖ್ಯ ತಪ್ಪು ನನ್ನದು. ನಾನು ಆ ಮನೆಗೆ ನಿನ್ನನ್ನು ಕರೆದುಕೊಂಡು ಹೋಗಲೇ ಬಾರದಿತ್ತು."

ಎಂದ. ಮುಖವನ್ನು ಸಣ್ಣಗೆ ಮಾಡಿಕೊಂಡು ಶಾರದೆ ಸುಮ್ಮನೆ ನಕ್ಕು ಬಿಟ್ಟಳು.

ಈಚೀಚೆಗೆ ಶಾರದೆಗೆ ಕಿಟ್ಟಣ್ಣನ ಅಣ್ಣನ ಮನೆಯಲ್ಲಿ ಆದ ಅನುಭವವೇ ಎಲ್ಲೆಲ್ಲೂ ಸಾಮಾನ್ಯವಾಯಿತು. ಹೆಂಗಸರು ಮಕ್ಕಳು ಯಾರೂ ಶಾರದೆಯ ಮನೆಗೆ ಅಡ್ಡಾಡಲಿಲ್ಲ. ಶಾರದೆಯನ್ನು ಅರಿಸಿನಕುಂಕುಮಕ್ಕೆ ತಮ್ಮ ಮನೆಗೆ ಕರೆಯಲು ಹಿಂಜರಿದರು. ಹಿಂದೆ, ಗಂಡನಿದ್ದೂ ಶಾರದೆ ವಿಧವೆಯಾಗಿದ್ದ ಕಾಲದಲ್ಲಿ ಅವಳಿಗೆ ಎಲ್ಲೆಡೆಯಲ್ಲೂ ಪುರಸ್ಕಾರವಿತ್ತು. ಅವಳೂ ಒಬ್ಬ ಮುತ್ತೈದೆಯಾಗಿದ್ದಳು. ಈಗ ಶಾರದೆ ಅಕ್ಷರಶಃ ಮುತ್ತೈದೆಯಾಗಿರುವಾಗ ಎಲ್ಲರ ಭಾಗಕ್ಕೆ ವಿಧವೆಯಾಗಿದ್ದಳು. ಅವರು ಕರೆದರೆಷ್ಟು ಬಿಟ್ಟರೆಷ್ಟು ಎಂದು ಶಾರದೆ ಯಾರ ಮನೆಗೂ ಹೋಗಲಿಚ್ಛಿಸಲಿಲ್ಲ. ಶಾರದೆಯದೇನೋ ಸರಿಹೋಯಿತು. ಆದರೆ ಪಾಪ ಕೃಷ್ಣವೇಣಿ ಶ್ರೀಧರರ ಪಾಡು ತುಂಬಾ ಗೋಳಾಯಿತು. ಶ್ರೀಧರನನ್ನು ಹುಡುಗರು ಯಾವ ಆಟಪಾಟಗಳಿಗೂ ಸೇರಿಸಿಕೊಳ್ಳುತ್ತಿರಲಿಲ್ಲ.

ಸೇರಿಸಿಕೊಂಡರೂ "ನಿಮ್ಮಪ್ಪನ ಹೆಸರು ಹೇಳು" ಎಂದು ಪೀಡಿಸಿ ಪೀಡಿಸಿ ಸೇರಿಸಿಕೊಳ್ಳುವರು. ಹಾಗೇಕೆ ಕೇಳುವರೆಂದು ಅವನಿಗೆ ತಿಳಿಯದು. ಅವನಿಗೆ ರಾಮಚಂದ್ರ ಕಿಟ್ಟಣ್ಣ ಇವರುಗಳಲ್ಲಿ ತನ್ನ ತಂದೆಯಾರು ಎಂದು ಜಿಜ್ಞಾಸೆ. ಶ್ರೀಧರ ಸ್ವಭಾವತಃ ಇನ್ನೊಬ್ಬರ ತಂಟೆಗೆ ಹೋಗುವ ಹುಡುಗನಲ್ಲ. ಆದರೂ ಇವನನ್ನು ಕೀಟಲೆಮಾಡುವುದೆಂದರೆ ಎಲ್ಲರಿಗೂ ಆಸೆ. ಶ್ರೀಧರನನ್ನು ಕೆರಳಿಸಲು ಕೆಲವರು "ಲೋ ಸೂಳೇ ಮಗನೇ" ಎನ್ನುವರು ಈ ಮಾತನ್ನು ಕೇಳಿ ಶ್ರೀಧರ ಹಾಗೆಂದವನಿಗೆ ಒಂದು ಪೆಟ್ಟು ಹಾಕಿದರೆ ಉಳಿದ ಹುಡುಗರು ಅವನನ್ನು ಮುತ್ತಿಗೆ ಹಾಕಿ ಒಂದಕ್ಕೆ ನಾಲ್ಕು ಪೆಟ್ಟು ಹಾಕುವರು. ಒಂದು ದಿನ ಶ್ರೀಧರ ಒಬ್ಬ ಹುಡುಗನನ್ನು ಗೋಲಿಯಾಟದಲ್ಲಿ ಸೋಲಿಸಿದ. ಆ ಹುಡುಗ ಶ್ರೀಧರನನ್ನು ಸೂಳೇಮಗ ಅಂದ. ಶ್ರೀಧರನಿಗೆ ರೇಗಿ ಅವನ ಕೆನ್ನಗೆ ಒಂದು ಏಟುಹಾಕಿದ. ಉಳಿದ ಹುಡುಗರು ಶ್ರೀಧರನ ಮೇಲೆ ಬಿದ್ದು ಅವನನ್ನು ನೆಲಕ್ಕೆಕೆಡಹಿಕೊಂಡು ಕಲ್ಲಿನಿಂದ ಅವನ ತಲೆಯನ್ನು ಜಜ್ಜಿ ಗಾಯಗೊಳಿಸಿ, ಓಡಿಬಿಟ್ಟರು. ಶ್ರೀಧರ ರಕ್ತಸೋರಿಸಿಕೊಳ್ಳುತ್ತಾ ಮನೆಗೆ ಬಂದ. ಅವನ ಗಾಯವಾಸಿಯಾಗಬೇಕಾದರೆ ನಾಲ್ಕೆಂಟು ತಿಂಗಳು ಬೇಕಾಯಿತು.

ಕೃಷ್ಣವೇಣಿ ಅನುಭವಿಸಿದ ಚಿತ್ರಹಿಂಸೆ ಇನ್ನೊಂದು ತರಹ. ಕೃಷ್ಣವೇಣಿಗೆ ತಾಯಿಯ ವರ್ತನೆಯಿಂದ ಕಿಟ್ಟಣ್ಣ ತನ್ನ ಮಲತಂದೆಯೆಂದು ಬೇಗನೆ ತಿಳಿಯಿತು. ಜೊತೆಗೆ ಆರ್ಯ ಸಮಾಜದಲ್ಲಿ ಅವರಿಬ್ಬರ ಮದುವೆಯು ಶಾಸ್ತ್ರ ಬೇರೆ ನಡೆದಿತ್ತಲ್ಲ. ಕಿಟ್ಟಣ್ಣನನ್ನು ತನ್ನ ತಾಯಿ ಮದುವೆಯಾಗುವುದು ಅವಳ ಮನಸ್ಸಿಗೆ ಸರಿಬರಲಿಲ್ಲ. ತಾಯಿ ಮಾಡಬಾರದ ಕೆಲಸ ಮಾಡುತ್ತಿರುವಳೆಂದೇ ಅವಳ ಭಾವನೆ. ಅವಳು ತಾಯಿಯ ಮದುವೆ ನಿಶ್ಚಯವಾದಾಗ ಸಂತೋಷ ಪಡುವ ಬದಲು ದುಃಖಿಸಿದಳು. ಕಿಟ್ಟಣ್ಣ ಶಾರದೆ ಎಷ್ಟು ಸಮಾಧಾನ ಪಡಿಸಿದರೂ ಅವಳು ಅಳುವನ್ನು ನಿಲ್ಲಿಸಲಿಲ್ಲ. ಅವಳ ಅಳುವಿನ ಕಾರಣ ತಿಳಿಯದೆ ಬೇಸತ್ತು ಶಾರದ ಒಂದೆರಡು ಪೆಟ್ಟುಹಾಕಿ, ಅವಳನ್ನು ಸುಮ್ಮನಿರಿಸಬೇಕಾಯಿತು. ಶಾರದೆಯ ಮದುವೆಯ ದಿನ ಕೃಷ್ಣವೇಣಿ ಊಟವನ್ನೇ ಮಾಡಲಿಲ್ಲ. ತಾಯಿಯ ಪಾಪದ ಪ್ರಾಯಶ್ಚಿತ್ತವೆನ್ನುವಂತೆ ಅವಳು ಉಪವಾಸ ಮಾಡಿದ್ದಳು. "ದೇವರೇ ಹೇಗಾದರೂ ಈ ಮದುವೆ ನಿಲ್ಲಿಸು" ಎಂದು ದೇವರನ್ನು ಸಾವಿರಬಾರಿ ಪ್ರಾರ್ಥಿಸಿದ್ದಳು. ಆದರೆ ಮದುವೆ ನಡದೇಹೋದಾಗ ದೇವರ

ಅಸ್ತಿತ್ವದ ಬಗ್ಗೆ ಅವಳಿಗೆ ನಂಬಿಕೆಯೇ ತಪ್ಪಿಹೋಯಿತು. "ನೀನು ಎಂತಹ ದೇವರು" ಎಂದು ದೇವರನ್ನು ಬೈದು ಅನೇಕ ವರ್ಷಗಳಿಂದ ನಡೆಸಿಕೊಂಡು ಬಂದಿದ್ದ ಶನಿವಾರದ ಪೂಜೆ ಮಾಡುವುದನ್ನು ಬಿಟ್ಟು ಬಿಟ್ಟಳು. ಕಿಟ್ಟಣ್ಣ ಮದುವೆಗೆ ಮುಂಚೆ ಅವಳಿಗೆ ಪ್ರೀತಿಯವನಾಗಿದ್ದ. ಈಗ ಮದುವೆಯಾದ ಮೇಲೆ ಯಮನಾಗಿ ಕಾಣಿಸಿದ. ಕಿಟ್ಟಣ್ಣನ ಸ್ವಭಾವ ನಡವಳಿಕೆಗಳಲ್ಲಿ ವಸ್ತುತಃ ಯಾವ ಹೊಸ ಏರ್ಪಾಡು ಇಲ್ಲದಿದ್ದರೂ ಕೃಷ್ಣವೇಣಿಯ ಭಾವನೆಯಲ್ಲಿ ಏನೇನೋ ಸುಧಾರಣೆಗಳು. ಅವಳಿಗೆ ಕಿಟ್ಟಣ್ಣನನ್ನು ಕಂಡರೆ ಮೊದಲಿದ್ದ ಪೂಜ್ಯಭಾವನೆ ಈಗ ತಿರಸ್ಕಾರವಾಗಿತ್ತು. ಅವನನ್ನು ಕಂಡರೆ ತಾತ್ಸಾರದ ಜತೆಗೆ ಅಸೂಯೆ. ಕೇವಲ ಬಾಡಿಗೆ ವಸೂಲು ಮಾಡುವುದಕ್ಕೆ ಬರುತ್ತಿದ್ದ 'ಮಾವಯ್ಯ' ಈಗ 'ಅಪ್ಪಯ್ಯ'ನಾದುದು ಅವಳ ನಿಷ್ಕಲ್ಮಶ ಮನಸ್ಸಿಗೆ ಏಕೋ ಚೆನ್ನಕಾಣಲಿಲ್ಲ. ಅವಳ ಅಸೂಯೆಯ ಕಾರಣವು ಇನ್ನೂ ವಿಚಿತ್ರ. ಇದುವರೆಗೆ ಕೃಷ್ಣವೇಣಿ ಶ್ರೀಧರರು ತಾಯಿಯ ಪ್ರೀತಿಯನ್ನೆಲ್ಲಾ ಹಂಚಿಕೊಂಡಿದ್ದರು. ಈಗ ಅದರಲ್ಲಿ ಕಿಟ್ಟಣ್ಣ ಬೇರೆ ಪಾಲುಗೊಂಡಿದ್ದ. ಹುಡುಗರಿಗೆ ತಾಯಿಯ ಬಳಿ ಮಲಗಿ ರೂಢಿ. ಕಿಟ್ಟಣ್ಣ ಶಾರದೆಯ ಗಂಡನಾದ ಮೇಲೆ ಶಾರದೆಯ 'ಸಹವಾಸ' ಕಿಟ್ಟಣ್ಣನಿಗೆ ಮೀಸಲಾಯಿತು. ತಮಗಿಂತಲೂ ದೊಡ್ಡವನಾದ ಕಿಟ್ಟಣ್ಣ ತಮ್ಮ ಹಕ್ಕನ್ನು ಕಿತ್ತುಕೊಂಡು ತಾಯಿಯ ಬಳಿ ಮಲಗಿಕೊಳ್ಳುವನಲ್ಲಾ ಎಂದು ಕೃಷ್ಣವೇಣಿಗೆ ಚಿಂತೆ. ಎಷ್ಟೋ ರಾತ್ರೆ ಒಂಟಿಯಾಗಿ ಮಲಗಿ ಅಭ್ಯಾಸವಿಲ್ಲದ ಮಕ್ಕಳು ಕಿಟ್ಟಣ್ಣನ ಏಕಾಂತ ಸುಖಕ್ಕೆ ಅಡ್ಡಿ ತರುತ್ತಿದ್ದವು. ಶಾರದೆಗೆ ಈ ವಿಷಯ ಎಷ್ಟು ಸೂಕ್ಷ್ಮವೋ ಅಷ್ಟೇ ಗಹನವಾಯಿತು. ಎಳೆಯ ಮನಸ್ಸಿನ ಮೇಲೆ ತಮ್ಮ ವರ್ತನೆಯಿಂದ ಭಯಂಕರ ಪರಿಣಾಮ ಉಂಟಾಗಬಹುದೆಂದು ಹೆದರಿ ಹಾಲಿನಲ್ಲಿ ಎಲ್ಲರೂ ಒಟ್ಟಿಗೆ ಮಲಗುವ ಪರಿಪಾಠವಿಟ್ಟುಕೊಂಡಳು. ಕೃಷ್ಣವೇಣಿಯ ಸ್ವಭಾವ ತುಂಬಾ ಸೂಕ್ಷ್ಮ. ಒಬ್ಬರು ಕೇಳಿ ತಿಳಿಯುವುದನ್ನು ಅವಳು ನೋಡಿ ತಿಳಿಯುತ್ತಿದ್ದಳು. ಅವಳು ಸ್ಕೂಲಿನ ಒಳಗೂ ಹೊರಗೂ ಬುದ್ಧಿವಂತಳೆಂದು ಎಲ್ಲರಿಂದ ಹೊಗಳಿಸಿಕೊಂಡಿದ್ದಳು. ಕಸೂತಿಯಲ್ಲಿ, ಹಾಡುಹಸೆಯಲ್ಲಿ, ಆಟಪಾಟಗಳಲ್ಲಿ ಎಲ್ಲದರಲ್ಲಿ ಕೃಷ್ಣವೇಣಿ ಪ್ರವೀಣೆ. ಅವಳಿದ್ದ ಕಡೆ ಒಂದು ಹಿಂಡು ಗೆಳತಿಯರು. ಅವಳಿಗೆ ಜನಬೇಕು. ತನ್ನನ್ನು ಯಾರಾದರೂ ಹೊಗಳುತ್ತಿದ್ದರೆ ಅವರು ಹೇಳಿದ ಕೆಲಸ

ಮಾಡಿಕೊಡುವಳು. ಯಾರಾದರೂ ತೆಗಳಿದರೋ ಅವರ ಗತಿ ಪೂರೈಸಿತು. ಶ್ರೀಧರ ಎಷ್ಟು ಮೃದುಸ್ವಭಾವದವನೋ ಕೃಷ್ಣವೇಣಿ ಅಷ್ಟೇ ಜಗಳಗಂಟಿ. ಹಟಮಾರಿ. ಆದರೂ ಅವಳಿಗೆ ತಾಯಿಯ ಕಣ್ಣೀರನ್ನು ಕಂಡರೆ ತುಂಬಾ ಹೆದರಿಕೆ. ತನಗೆ ಒಳ್ಳೆಯಲಂಗ, ಟೇಪು, ಜೇಕೆಂದು ತಾಯಿಯನ್ನು ಕೇಳಿದರೆ ಎಲ್ಲಿ ಅಳುವಳೋ ಎಂದು ತಾಯಿಯ ಬಳಿ ತನ್ನ ಅವಶ್ಯಕತೆ ಹೀಗಿದೆ ಎಂದು ಬಾಯಿ ಬಿಡುತ್ತಿರಲಿಲ್ಲ ಅವಳ ಆಸೆಯನ್ನು ತಿಳಿದ ಗೆಳತಿಯರು ಟೇಪು ಮೊದಲಾದವುಗಳನ್ನು ಕೃಷ್ಣವೇಣಿಗೆ ತಂದುಕೊಟ್ಟು ಅವಳ ಸ್ನೇಹ ಸಂಪಾದಿಸುತ್ತಿದ್ದರು. ಕೃಷ್ಣವೇಣಿಯ ಜತೆಗೆ 'ಕುಂಟಾಬಿಲ್ಲೆ' ಚೌಕಭಾರ, ಹಗ್ಗದಾಟ ಕಣ್ಣುಮುಚ್ಚಾಲೆ ಆಡುವುದೆಂದರೆ ಎಲ್ಲರಿಗೂ ಹಿಗ್ಗು.

ಕಿಟ್ಟಣ್ಣ ಶಾರದೆಯ ಮನೆಗೆ ತನ್ನ ಬಿಡಾರವನ್ನು ವರ್ಗಾಯಿಸಿಕೊಂಡ ಮೇಲೆ ಹೊರಗಿನಿಂದ ಹೆಣ್ಣುಮಕ್ಕಳು ಕೃಷ್ಣವೇಣಿಯನ್ನು ಹುಡುಕಿಕೊಂಡು ಬರುವುದನ್ನು ನಿಲ್ಲಿಸಿದರು. ಕಿಟ್ಟಣ್ಣ ಸದಾ ಮನೆಯಲ್ಲಿ ಇರುವನೆಂದಲ್ಲ. ಗಂಡನನ್ನು ಬಿಟ್ಟು ಬೇರೆಯವನೊಡನೆ ಸಂಸಾರಮಾಡುತ್ತಿರುವ ಶಾರದೆಯ ಮನೆಗೆ ತಮ್ಮ ಹುಡುಗಿಯರು ಹೋದರೆ ಅವರ ಮೇಲೆ ಶಾರದೆಯ ಪ್ರಭಾವ ಬಿದ್ದು ಎಲ್ಲಿ ಕೆಟ್ಟು ಹೋಗುತ್ತಾರೋ ಎಂದು ಹೆದರಿ ಹಿರಿಯರೇ ಹುಡುಗರನ್ನು ಅವರ ಮನೆಗೆ ಕಳುಹಿಸುತ್ತಿರಲಿಲ್ಲ.

ಕೃಷ್ಣವೇಣಿಗೆ ಗೆಳತಿಯರನ್ನುಹುಡುಕಿಕೊಂಡು ಹೋಗುವ ರೂಢಿಯಿಲ್ಲ. ಏನಿದ್ದರೂ ಎಲ್ಲರೂ ಅವಳಿದ್ದೆಡೆಗೇ ಬರಬೇಕು. ಗೆಳತಿಯರಿಲ್ಲದೆ ಕೃಷ್ಣವೇಣಿಗೆ ಬೇಗನೆ ಮನೆ ಬೇಸರವಾಯಿತು. ಅವಳು ಆಡುವುದಿದ್ದರೆ ಶ್ರೀಧರನೊಂದಿಗೆ ಆಡಿಕೊಳ್ಳಬೇಕು. ಕೃಷ್ಣವೇಣಿ ಎಂದಾದರೊಮ್ಮೆ ಗೆಳತಿಯರ ಮನೆಗೆ ಅಪ್ಪಿತಪ್ಪಿ ಹೋದರೂ ಅಲ್ಲಿ ಅವಳಿಗೆ ಮೊದಲಿದ್ದ ಆದರವಿಲ್ಲ. ಏನು ಬಂದೆ ? ಯಾಕೆ ಬಂದೆ ? ಎಂದು ಯಾರೂ ವಿಚಾರಿಸುತ್ತಿರಲಿಲ್ಲ. ಈ ಬಗೆಯ ಅನಾದರಣೆಯನ್ನು ಕಂಡು ಕೃಷ್ಣವೇಣಿಗೆ ಕೋಪ ಬರುತ್ತಿತ್ತು. ಆದರೆ ಅವಳೇನು ಮಾಡಬಲ್ಲಳು ? ಈ ಮಾರ್ಪಾಡಿಗೆಲ್ಲಾ ಕಿಟ್ಟಣ್ಣನೇ ಕಾರಣಳೆಂದು ಅವಳ ಎಳೆಯ ಮನಸ್ಸಿಗೆ ತಿಳಿದು ಅವನನ್ನು ಮನಸ್ಸಿನಲ್ಲಿಯೇ ದ್ವೇಷಿಸತೊಡಗಿದಳು.

ಈಗೀಗ ಕಿಟ್ಟಣ್ಣನೆಂದರೆ ಆ ಇಬ್ಬರು ಮಕ್ಕಳು ಮಲತಂದೆಯ ಬಗ್ಗೆ ಇರುವ ಪ್ರೀತಿಯನ್ನು ತೋರಿಸತೊಡಗಿದ್ದರು. ಕಿಟ್ಟಣ್ಣ ಹತ್ತಿರಕ್ಕೆ ಕರೆದರೂ

ಅವನ ಬಳಿಗೆ ಅವರು ಹೋಗರು. ಒಮ್ಮೆ ಶ್ರೀಧರ ಕಿಟ್ಟಣ್ಣ ಕೊಟ್ಟಿದ್ದ ತಿಂಡಿಯನ್ನು ಯಾಕೋ ಸಿಟ್ಟುಮಾಡಿಕೊಂಡು ಅವನ ಮೂತಿಗೆ ಎಸೆದಿದ್ದ. ಇದನ್ನು ಕಂಡು ಶಾರದೆ ಒಂದೆರಡು ಏಟುಹಾಕದಿರಲಿಲ್ಲ. ತಮ್ಮ ಮೇಲೆ ಇರದ ಪ್ರೀತಿಯನ್ನು ತಾಯಿ ಕಿಟ್ಟಣ್ಣನ ಮೇಲೆ ತೋರಿಸುವಳಲ್ಲಾ ಎಂದು ಕಿಟ್ಟಣ್ಣ ಶಾರದೆಯ ಮೇಲೆ ಇಬ್ಬರಿಗೂ ಅಸಮಾಧಾನ.

ಶಾರದೆಗೆ ಮಕ್ಕಳು ಕಿಟ್ಟಣ್ಣನ ಬಗ್ಗೆ ಯಾಕೋ ಮನಸ್ಸುಕೆಡಿಸಿಕೊಂಡು ದೂರ ದೂರ ಸರಿಯುತ್ತಿವೆ ಎಂದು ತಿಳಿದು ಬಂದು ಅವಳಿಗೆ ತುಂಬಾ ಕಳವಳವಾಯಿತು. ಇದು ಶುಭದ ಚಿಹ್ನೆಯಲ್ಲವೆಂದು ಅವಳಿಗೆ ಅನಿಸಿತು. ಮಕ್ಕಳ ಅಸಮಾಧಾನದ ಮೂಲ ಏನು ಮಾಡಿದರೂ ಅವಳಿಂದ ಪತ್ತೆ ಹಚ್ಚಲಾಗಲಿಲ್ಲ. ಹುಡುಗರಿಗೆ ತಾವು ಯಾವ ಕಾರಣಕ್ಕಾಗಿ ಕಿಟ್ಟಣ್ಣನನ್ನು ದ್ವೇಷಿಸುತ್ತೇವೆಂದು ತಿಳಿದಿದ್ದರೆ ತಾನೇ ಶಾರದೆಗೆ ತಿಳಿಯಬೇಕಾದರೆ ?

ಶಾರದೆಗೂ ಕಿಟ್ಟಣ್ಣನನ್ನು ಮದುವೆಯಾದ ಮೇಲೆ ಬಾಳಿನಲ್ಲಿ ಮೊದಲಿನ ಹುಮ್ಮಸ್ಸು ಇಳಿದುಹೋಗಿತ್ತು. ತಾನು ಮಕ್ಕಳಿಗೆ ಪಾಠ ಹೇಳಿಕೊಟ್ಟು ಹೊಟ್ಟೆ ಹೊರೆಯುತ್ತಿದ್ದ ದಿನಗಳೇ ಸುಖದ ದಿನಗಳಾಗಿ ಕಾಣಿಸತೊಡಗಿತು. ಆಗಿದ್ದ ಮನಸ್ಸಿನ ನೆಮ್ಮದಿ ಈಗ ಅವಳಿಗಿರಲಿಲ್ಲ. ನೆಮ್ಮದಿಯಿಂದಿರಲು ಎಲ್ಲ ಸಾಧನ ಸಂಪತ್ತು ಇತ್ತು. ಅವಳ ಆದರ್ಶದ ಪತಿಯೇ ಸಿಕ್ಕಿದ್ದ. ಅವನ ಒಂದೊಂದು ನಡೆನುಡಿಯಲ್ಲಿ ಶಾರದೆ ಹೊಸ ಲೋಕವನ್ನೇ ಕಾಣುವಳು. ಜೀವನದ ಶುಷ್ಕತೆಯನ್ನು ರಸಿಕತೆಯಿಂದ ತುಂಬಿ ಅದು ಸುಧಾರಸಮಯವಾಗಿ ಕೊರತೆ ಚಿಂತೆಗಳಿಗೆ ಅವಕಾಶವಿಲ್ಲದಂತೆ ಮಾಡಬಲ್ಲ ಚತುರ ಗಂಡ ಕಿಟ್ಟಣ್ಣನಾಗಿದ್ದ. ಈಗ ಹೊಟ್ಟೆ ಬಟ್ಟೆಗೆ ಏನು ? ಎನ್ನುವ ಚಿಂತೆಯಿಲ್ಲ. ಗಂಡ ಸಾಕಷ್ಟು ದುಡಿದು ತರುತ್ತಿದ್ದ. ಮನಸ್ಸಿಗೆ ಬಂದತಿಂಡಿ ಮನಸ್ಸಿಗೆ ಬಂದ ಬಟ್ಟೆ ಉಂಡುಟ್ಟು ದಣಿಯಬಹುದು. ಇವೆಲ್ಲಕ್ಕಿಂತಲೂ ಹೆಚ್ಚಿಗೆ ಶಾರದೆ ತನ್ನ ಕೆಲಸದಲ್ಲಿ ಕೃತಕೃತ್ಯಳಾಗಿದ್ದಳು. ಅವಳು ಯಾವ ಸೇಡನ್ನು ತೀರಿಸಿಕೊಳ್ಳಲು ದಾರುಣ ಜೀವನವನ್ನಪ್ಪಿ ಬದುಕಿದ್ದಳೋ ಅದನ್ನು ತೀರಿಸಿಕೊಂಡಿದ್ದಳು. ಜನ ರಾಮಚಂದ್ರನ ಎದುರಿನಲ್ಲಿ ಶಾರದೆಯನ್ನು ತೋರಿಸಿ, ಕಿಟ್ಟಣ್ಣನ ಹೆಂಡತಿ ಎಂದು ಕರೆಯುತ್ತಿದ್ದರು. ಈ ಒಂದು ವಿಷಯವೇ ಸಾಕು, ರಾಮಚಂದ್ರ ಮಾನವಂತನಾಗಿದ್ದಿದ್ದರೆ ನೇಣು ಹಾಕಿಕೊಳ್ಳಲು.

ಒಮ್ಮೆ ಕಬ್ಬನ್‌ಪಾರ್ಕಿನಲ್ಲಿ ಶಾರದೆ ಕಿಟ್ಟಣ್ಣನ ಕೈಯಲ್ಲಿ ಕೈಹಾಕಿಕೊಂಡು ಕಿಲಕಿಲನೆ ನಗುತ್ತಾ ಮಕ್ಕಳ ಸಮೇತ ನಡೆಯು ಬರುತ್ತಿರುವಾಗ ಆಕಸ್ಮಿಕವಾಗಿ ರಾಮಚಂದ್ರ ಎದುರಿಗೆ ಬಂದ. ಶಾರದೆ ಬೇಕೆಂದೇ ರಾಮಚಂದ್ರನ ಕಡೆಗೆ ನೋಡಿ ಇನ್ನಷ್ಟು ಜೋರಾಗಿ ನಕ್ಕಳು. ಆ ನಗುವನ್ನು ಕೇಳಿ ರಾಮಚಂದ್ರ ನಿಗೆ ಹೊಟ್ಟೆಯಲ್ಲಿ ಬೆಂಕಿ ಇಟ್ಟಂತಾಯಿತು. ಪಾರ್ಕಿನಲ್ಲಿದ್ದ ಜನ ಗಿಡಮರ ಗಳಾದಿಯಾಗಿ ಎಲ್ಲವೂ ತನ್ನ ಕಡೆ ಕೈ ತೋರಿಸಿ ನಕ್ಕಂತೆ ಭಾಸವಾಯಿತು. ತನ್ನ ಹೆಂಡತಿಯೊಡನೆ ಇನ್ನೊಬ್ಬ ಗಂಡಸು ಸುಖಿಸುವುದನ್ನು ನೋಡಿ ಯಾವ ಗಂಡಸು ತಾನೇ ಸುಮ್ಮನಿರಬಲ್ಲ? ರಾಮಚಂದ್ರ ಮತ್ಸರದ ಬೆಂಕಿಯಲ್ಲಿ ಬೆಂದ—ತಾನು ಅಪ್ಪಿ ಮುದ್ದಿಸುತ್ತಿದ್ದ ದೇಹ ಇಂದು ಇನ್ನೊಬ್ಬನ ಸೊತ್ತಾಯಿ ತಲ್ಲ ಎಂದು. ಅವನಿಗೆ ಹೋಗಿ ಕಿಟ್ಟಣ್ಣನನ್ನು ನೆಲಕ್ಕೆ ಅಪ್ಪಳಿಸಿ, ಶಾರದೆ ಯನ್ನು ಕೊಂದು ಬಿಡಲೇ ಎನ್ನುವಷ್ಟು ಕೋಪಬಂತು. ಆದರೆ ಶಾರದೆಯನ್ನು ಮುಟ್ಟುವುದೆಂದರೆ ಪರಸ್ತ್ರೀಯರ ಮೇಲೆ ಕೈಮಾಡಿದಂತೆ! ಅದರ ಫಲ? ದೀರ್ಘಕಾಲ ಕಾರಾಗೃಹವಾಸ! ಆ ದಿನ ರಾಮಚಂದ್ರ ದುಡುಕದೇ ಇದ್ದುದೇ ಹೆಚ್ಚು.

ಛಲಕ್ಕಾಗಿ ಬದುಕಿದ್ದ ಶಾರದೆ ಛಲಸಾಧಿಸಿಕೊಂಡಿದ್ದಳು. ಆದರೂ ಅದರಿಂದ ಸಿಗಬೇಕಾಗಿದ್ದ ಸುಖ, ಮನಶ್ಶಾಂತಿ ಶಾರದೆಗೆ ಸಿಕ್ಕಲಿಲ್ಲ. ಶಾರದೆಗೆ ಜೀವನದಲ್ಲಿ ಏನೋ ಒಂದು ಕೊರತೆ. ಇಂಥದೆಂದು ಹೇಳಲು ಬರುವಂತಿಲ್ಲ. ಏನೋ ಮೂಕ ವ್ಯಥೆ, ತಾನು ಸಮಾಜದಿಂದ ಬೇರೆಯಾಗಿ, ತನ್ನ ಮನೆ ಎಂಬ ಕೋಟೆಯಲ್ಲಿ ಬಂಧಿತಳಾಗಿರುವ ವಿಷಯ ತುಂಬಾ ಮುಜುಗರ ತಂದಿತ್ತು. ಅವಳಿಗೆ ತನ್ನ ಜನವೆನ್ನುವ ಯಾರ ಸಂಪರ್ಕವಿಲ್ಲ. ಸುತ್ತು ಮುತ್ತಲಿನ ಜನ ತನ್ನನ್ನೂ, ತನ್ನ ಮಕ್ಕಳನ್ನೂ ತೊನ್ನುರೋಗ ಪೀಡಿತರಂತೆ ನಡೆಸಿಕೊಳ್ಳುವುದನ್ನು ಕಂಡು ರೋಸಿಹೋಗಿದ್ದಳು. ಸ್ವಯಂ ಶ್ಯಾಮಲೆ ಶಾರದೆಯ ಏಕೈಕ ಬಂಧು, ಗೆಳತಿ, ಅವಳು ಕೂಡ ಶಾರದೆ ಮಾಡಿದ ಕೆಲಸ ವನ್ನು ಒಪ್ಪದೆ ಹೋಗಿದ್ದಳು. ಶ್ಯಾಮಲೆಯ ಪರಂಪರಾಗತವಾದ ಬುದ್ಧಿಗೆ ಶಾರದೆಯ ಕೆಲಸ ಮದುವೆಯಾದ ಹೆಣ್ಣು ಮಾಡಬಾರದ ಕೆಲಸವಾಗಿ ಕಂಡಿತ್ತು. ಅವಳು ಸಮಾಜದ ಪ್ರತಿಧ್ವನಿಯೇ ಆದುದರಲ್ಲಿ ಅಚ್ಚರಿಯಿಲ್ಲ. ಶಾರದೆಯ 'ಲಗ್ನಪತ್ರಿಕೆ' ಕರಗತವಾದ ದಿನ ಶ್ಯಾಮಲೆ ಶಾರದೆಗಾಗಿ ಅತ್ತು

" ಶಾರದೆ ಇನ್ನು ತನ್ನ ಭಾಗಕ್ಕೆ ಇಲ್ಲ "ವೆಂದು ನಿಶ್ಚಯಿಸಿಬಿಟ್ಟಳು. ಆ ದಿನದಿಂದ ಅವಳು ಶಾರದೆಗೆ ಒಂದು ಕಾಗದ ಬರೆದಿರಲಿಲ್ಲ. ಅವಳು ಶಾರದೆ ಯೊಡನೆ ತನ್ನಎಲ್ಲ ಸಂಬಂಧವನ್ನೂ ಸಮಾಜಕ್ಕೆ ಹೆದರಿ ಕಡಿದುಕೊಂಡಿದ್ದಳು. ತವರುಮನೆಯವರು ಅಷ್ಟೇ.

ಶ್ಯಾಮಣ್ಣನವರು ಸತ್ತನಂತರ ಶಾರದೆಗೆ ತವರು ಇದ್ದೂ ಇಲ್ಲದಂತೆ ಇತ್ತು. ಶಾರದ ಗಂಡನಿಂದ ಪರಿತ್ಯಜಿತಳಾಗಿ ಬೆಂಗಳೂರಿನಂತಹ ನಗರದಲ್ಲಿ ದಿಕ್ಕುಕಾಣದೆ ಇದ್ದಾಗ ನರಸಿಂಹಮೂರ್ತಿಯು ' ಊರಿಗೆ ಬಾ ' ಎಂದು ಕರೆಯಲಿಲ್ಲ ಆವನು ಹೆಂಡತಿಯ ಕೈಬೊಂಬೆಯಾಗಿದ್ದ. ನಾಗಮ್ಮ ಗಂಡ ನಿಗೆ ಸತಿಋಣವನ್ನು ತೀರಿಸಿ, ಪುತ್ರಋಣವನ್ನು ಕಲ್ಪಿಸಿದ್ದಳು. ಭಾಗೀರಥಮ್ಮನ ಮಾತು ಮನೆಯಲ್ಲಿ ನಡೆಯುತ್ತಿರಲಿಲ್ಲ. ಅವರು ಶಾರದೆಯ ಪ್ರಸ್ತಾಪ ಮಾಡಿ ದಾಗ ಮಗಸೊಸೆಯರಿಬ್ಬರೂ, ಅವರ ಮೇಲೆ ಯುದ್ಧಕ್ಕೆ ಬಂದಿದ್ದರು. ಶ್ಯಾಮಲೆ ಯಂತಹ ರಕ್ತಹಂಚಿಕೊಂಡು ಹುಟ್ಟಿದ್ದ ತಂಗಿಯಮೇಲೇ ಇಲ್ಲದಪ್ರೀತಿ ಇನ್ನು ಶಾರದೆಯ ಮೇಲೆ ಬಂದೀತೇ ? ಎಂದು ಭಾಗೀರಥಮ್ಮ ಸುಮ್ಮನಾದರು. ತವರಿನ ವಾತಾವರಣ ಹೀಗಿರುವಾಗ ಶಾರದೆಯ ವಿವಾಹದ ಲಗ್ನಪತ್ರಿಕೆ ಬಂತು. ಅದನ್ನು ನೋಡಿ ಭಾಗೀರಥಮ್ಮನು ಕೂಡ ಶಾರದೆಯ ಕೈಬಿಟ್ಟರು.

" ಶಾರದೆ ಇಷ್ಟು ಕೊಬ್ಬಿ ಹೋಗುವಳೆಂದು ನಾನೆಣಿಸಿರಲಿಲ್ಲ. ಅದು ಬೆಂಗಳೂರು. ಗಂಡನನ್ನು ಬಿಟ್ಟು ಒಂಟಿಯಾಗಿರ್ತೀನೆ ಅಂದ್ರೆ ಹದ್ದು ಪಾಲಾ ಗದೇ ಇರ್ತಾಳೆಯೇ ? ಈ ಲಗ್ನ ಪತ್ರಿಕೆಯೊಂದು ಕೇಡು, ತಾನು ಮಾಡ್ತಿ ರೋದು ಮುಟ್ಟಾಳ ಕೆಲಸ ಅಂತ ತಿಳಿದುಕೊಳ್ಳದೆ ಹತ್ತು ಜನಕ್ಕೆ ಡಂಗೂರ ಹಾಕಿದ್ದಾಳೆ! ನಮ್ಮ ವಂಶದಲ್ಲಿ ಯಾಕಾದರೂ ಹುಟ್ಟಿದಳೋ ಆ ಘಾತಕಿ! "

ಎಂದು ಬಾಯಿಗೆ ಬಂದಂತೆ ಬೈದು ಬಿಟ್ಟರು.

ನಾಗಮ್ಮ ಭಾಗೀರಥಮ್ಮನ ಅಭಿಪ್ರಾಯವನ್ನು ಲಿಖಿತದ ಮೂಲಕ ಸಂಗ್ರಹಿಸಿ, ಶಾರದೆಗೆ

" ಇನ್ನು ಮೇಲೆ ನಿನಗೂ ನಮಗೂ ಯಾವ ಸಂಬಂಧವೂ ಇಲ್ಲ "

ಅಂತ ಬರೆದು ಹಾಕಿದಳು.

ಆ ಕಾಗದ ಶಾರದೆಯ ಕೈಸೇರಿದಾಗ ಆ ಕ್ಷಣಕ್ಕೆ ತಾನುಮಾಡಿದ ಕೆಲಸ ತಪ್ಪೋ ಏನೋ ಎನ್ನುವ ಶಂಕೆ ಶಾರದೆಯ ತಲೆಯಲ್ಲಿ ಸುಳಿಯದಿರಲಿಲ್ಲ.

" ಜನ ಸಾವಿರ ಅನ್ನಲಿ. ಅವರ ಬಾಯಿ ಮುಚ್ಚಿಸಲು ಜನಾರ್ಧನ ನಿಂದಲೂ ಸಾಧ್ಯವಿಲ್ಲ!" ಎಂದು ತನ್ನ ಕೆಲಸವನ್ನು ಸಮರ್ಥಿಸಿಕೊಂಡಳು. ಇದನ್ನು ಆಲೋಚಿಸುತ್ತಾ ಕುಳಿತಿದ್ದಾಗ ಕಿಟ್ಟಣ್ಣ ಅಂಗಡಿಯನ್ನು ಮುಚ್ಚಿ ಊಟಕ್ಕೆಂದು ಮನೆಗೆ ಬಂದ. ಹೆಂಡತಿ ಅನ್ಯಮನಸ್ಕಳಾಗಿ ಕುಳಿತಿರುವುದನ್ನು ಕಂಡು,

" ಶಾರದ, ಏಕೆ ಹೀಗಿದ್ದೀ ? " ಎಂದ.

" ಯಾಕೂ ಇಲ್ಲ. ಸುಮ್ಮನೆ ಬೇಜಾರಾಯಿತು "

ಎಂದು ಹುಸಿನಗೆ ನಕ್ಕಳು.

" ಸುಮ್ಮನೆ ಯಾಕೆ ಬೇಜಾರು ಆಗುತ್ತೆ ? ಏನೋ ನಡೆದಿದೆ "

" ಅಂಥದೇನೂ ನಡೆದಿಲ್ಲ "

" ಇನ್ನೆಂಥದು ನಡೆದಿದೆ ? "

ಎಂದ ಕಿಟ್ಟಣ್ಣ. ಶಾರದೆಯ ಕಳ್ಳತನ ಸಿಕ್ಕಿಬಿತ್ತು.

" ಎಂಥದೂ ಇಲ್ಲ "

ಎನ್ನುತ್ತಾ ಕೈಯಲ್ಲಿದ್ದ ಕಾಗದವನ್ನು ಉಡಿಯಲ್ಲಿ ಇಟ್ಟುಕೊಂಡಳು. ಕಿಟ್ಟಣ್ಣನಿಗೆ ಉಡಿಗೆ ಕೈಹಾಕಿ ಕಾಗದವನ್ನು ಬಲವಂತವಾಗಿ ತೆಗೆದುಕೊಳ್ಳಲು ಧೈರ್ಯವಾಗದೆ, ಶಾರದೆಯ ಕೈ ಹಿಡಿದುಕೊಂಡು,

" ಶಾರದ, ನನ್ನಲ್ಲಿಯೂ, ನೀನು ಮರೆಮಾಜಬೇಕೆ ? " ಎಂದ.

" ಕಾಗದ ಕೊಡಲು ನನ್ನ ಅಡ್ಡಿಯಿಲ್ಲ. ಆದರೆ ಅದನ್ನು ಓದಿಕೊಂಡು ನೀವು ನೊಂದುಕೊಳ್ಳುತ್ತೀರಿ. "

" ಇಲ್ಲ ಕೊಡು "

ಶಾರದ ಕಾಗದ ಕೊಟ್ಟಳು. ಕಾಗದ ಓದಿಕೊಂಡು ನಿಧಾನವಾಗಿ ಭಾರವಾದ ದನಿಯಲ್ಲಿ ಹೇಳಿದ.

" ಶಾರದ ನಮ್ಮಿಬ್ಬರ ಬದುಕು, ನೀತಿಯೋ—ಅನೀತಿಯೋ ಅದನ್ನು ನಿರ್ಧರಿಸುವುದು ಸಮಾಜದ ಕೆಲಸ. ನಮ್ಮ ನಡೆ ನುಡಿ, ಆಚಾರ ವಿಚಾರ, ಪ್ರೇಮ ಇಂದ್ರಿಯಾತೀತವಾಗಿದ್ದು ಭವ್ಯ ಅನುಭವವಾಗಿದ್ದರೆ ಅದು ದೈವಿಕ ಪ್ರೇಮವಾಗುವುದಂತೆ. ಅಂತಹ ಪ್ರೇಮ ಪರಮಾತ್ಮನಿಗೆ ಪ್ರಿಯವಂತೆ ! ಹೀಗೆಂದು ಎಲ್ಲಿಯೋ ಓದಿದ ನೆನಪು. ನಾವು ಇಂದು ಗಂಡ ಹೆಂಡಿರಾಗಿ

ಕೂಡಿರುವುದು ಇಂದ್ರಿಯ ಸುಖಕ್ಕಾಗಿ ಅಲ್ಲ, ಶಾರದ. ಇಂದ್ರಿಯ ಸುಖವನ್ನೆ ಅನಂತವೆಂದೂ ಅಪಾರವೆಂದೂ ತಿಳಿಯುವ ವಯೋಧರ್ಮದ ಮೌಢ್ಯತೆಯನ್ನು ನಾವು ಮೀರಿ ಬೆಳೆದಿಲ್ಲವೇ? ನಮ್ಮಿಬ್ಬರ ಒಲವಿನ ಬುನಾದಿ, ದೇಹ ಸುಖವಲ್ಲ; ಹೃದಯ ಸೌಖ್ಯ. ಬಾಳಿನಲ್ಲಿ ಬೆಂದ ನಮ್ಮಿಬ್ಬರ ಹೃದಯಗಳಿಗೆ ದಿವ್ಯ ಸಂಜೀವಿನಿಯಾಗಿದೆ ನಮ್ಮ ಪ್ರೇಮ. ಇದು ದೈಹಿಕವೋ ದೈವಿಕವೋ ನಾನರಿಯೆ. ನನಗೆ ತಿಳಿದಿರುವುದು ಇಷ್ಟು. ನಮ್ಮಿಬ್ಬರ ಸಂಬಂಧದಲ್ಲಿ ಅಪವಿತ್ರತೆಯ ಸೋಂಕು ಎಳ್ಳಷ್ಟೂ ಇಲ್ಲ. ಜನ ಸಾವಿರ ಬಗೆಯಾಗಿ ಇದನ್ನು ವಿಮರ್ಶಿಸಲಿ. ತಪ್ಪೆನ್ನಲಿ. ಆದರೆ ನಮ್ಮ ಕಾರ್ಯವನ್ನು ವಿಮರ್ಶಿಸಿ ತೀರ್ಪನ್ನು ಕೊಡುವ ನಿಷ್ಪಕ್ಷ ನ್ಯಾಯಮೂರ್ತಿ ಮೇಲೆ ಕುಳಿತು ಎಲ್ಲವನ್ನೂ ನೋಡುತ್ತಿದ್ದಾನೆ. ಅವನ ಶಾಸನಕ್ಕೆ ನಾವು ತಲೆಬಾಗಬೇಕೇ ಹೊರತು ಕ್ಷುದ್ರ ಮಾನವರ ಸಂಕುಚಿತ ಮನೋಧರ್ಮಕ್ಕಲ್ಲ! ಎಂದು ಅನ್ಯಾಯದ ಆಗರವಾದ ಸಮಾಜವನ್ನು ಧಿಕ್ಕರಿಸಿ ನಾವಿಬ್ಬರೂ ಪಯಣದ ಹಾದಿಯಲ್ಲಿ ಸಹಪ್ರಯಾಣಿಕರಾಗಿ ನಡೆದೆವೋ ಅಂದೇ ಸಮಾಜ ಭೀತಿ ನಮಗೆ ಅಳಿಯಿತು. ಸಮಾಜ ಕಿಂಕರರಾದ ಅಂಜುಕುಳಿ ಬಂಧು ಬಳಗದವರ ಕರುಣೆ, ಅನುಕಂಪ, ಸಹಾನುಭೂತಿ ಎಲ್ಲವೂ ಅವರಿಗೇ ಇರಲಿ. ಜಗದ್ರಕ್ಷಕನ ಅಪಾರ ಕರುಣೆಯಲ್ಲಿ ಒಂದು ಹನಿ ನಮ್ಮದಾಗಲಿ. ನಮಗೆ ಅಷ್ಟೇ ಸಾಕು!" ಎಂದು ದೊಡ್ಡ ಭಾಷಣವನ್ನೇ ಮಾಡಿಬಿಟ್ಟ ಕಿಟ್ಟಣ್ಣ. ಅವನು ಬಹು ಕಾಲದಿಂದಲೂ ಶಾರದೆಗೆ ಇದನ್ನು ಸ್ಪಷ್ಟಪಡಿಸಬೇಕೆಂದಿದ್ದ. ಸರಿಯಾದ ಸಮಯ ಒದಗಿರಲಿಲ್ಲ. ಈಗ ಹಳ್ಳಿಯಿಂದ ಬಂದ ಕಾಗದದ ನೆಪದಲ್ಲಿ ಅವನು ತನ್ನ ವಿಚಾರಧಾರೆಯನ್ನು ಹೆಂಡತಿಯ ಮುಂದೆ ಮಂಡಿಸಿದ, ಶಾರದೆ, ತನ್ನ ಪ್ರಿಯತಮನ ವಾಣಿಯಿಂದ ಅವಳ ನೂರು ಶಂಕೆಗಳು ಮಾಯವಾದವು. ಅವಳು ಗಂಡನ ಮಾತುಗಳನ್ನು ಮೆಲುಕು ಹಾಕುತ್ತಾ ಕುಳಿತು ಬಿಟ್ಟಳು.

"ಶಾರದ ನನ್ನ ಮಾತು ನಿನಗೆ ಬೇಸರವಾಯಿತೆ?" ಎಂದ ಕಿಟ್ಟಣ್ಣ.

ಶಾರದೆ ತನ್ನ ಹೃದಯದ ಸಂತೋಷದ ಉಬ್ಬಿನಲ್ಲಿ ಮಾತನಾಡಲಾಗದೆ, ಕಿಟ್ಟಣ್ಣನನ್ನು ಅಪ್ಪಿಕೊಂಡು ಅವನ ಹೆಗಲಿನ ಮೇಲೆ ತಲೆಯಿಟ್ಟು ಒಂದೇ ಸಮನೆ ಆನಂದಬಾಷ್ಪ ಸುರಿಸಿದಳು. ಅವಳ ಹೃದಯಕ್ಕೆ ಹಿಂದೆಂದೂ ಆಗದಿದ್ದ ಅನಿರ್ವಚನೀಯ ಆನಂದ ಉಂಟಾಗಿತ್ತು.

ಕಿಟ್ಟಣ್ಣ ಶಾರದೆಯ ಕಣ್ಣೀರನ್ನು ಕಂಡು

"ಶಾರದ, ನನ್ನ ಹಸಿದ ಹೊಟ್ಟೆಯನ್ನು ನೀನು ಕಣ್ಣೀರಿನಿಂದ ತುಂಬಲು ನೋಡುತ್ತೀಯಾ ? "

ಎಂದ. ಶಾರದೆ ನಗುತ್ತಾ ಎಲೆ ಹಾಕಲು ಎದ್ದು ಹೊರಟಳು.

ಶಾರದೆಗೆ ಈಗ ಒಂದು ಸಮಾಧಾನ. ಇಡೀ ಜಗತ್ತೇ ತನ್ನ ಕೆಲಸವನ್ನು ತಪ್ಪೆಂದು ಬೊಬ್ಬೆಯಿಟ್ಟರೂ, ಅದನ್ನು ಒಪ್ಪೆಂದು ತೋರಿಸಬಲ್ಲ ಗಂಡ ತನ್ನ ಬಳಿ ಇದ್ದಾನೆ. ಅವನ ಪ್ರೀತಿಯ ರಕ್ಷಾ ಕವಚದಲ್ಲಿ ತಾನೆಂದಿಗೂ ಸುಭದ್ರೆ !

ತನಗೇಕೆ ಸಮಾಜದ ಭೀತಿ ?

ರಾಮಚಂದ್ರ ಶಾರದೆಯರ ಯುದ್ಧ ಇಲ್ಲಿಗೇ ನಿಲ್ಲಲಿಲ್ಲ. ಶಾರದೆಯ ಸುಖವನ್ನು ಯಾವ ರೀತಿಯಲ್ಲಾದರೂ ಹಾಳು ಮಾಡದ ಹೊರತು ಅವನ ಮನಸ್ಸಿಗೆ ಸಮಾಧಾನವಿಲ್ಲ. ಶಾರದೆಯ ಜೀವನಾಂಶದ ಹಕ್ಕು ಕೋರ್ಟಿನಲ್ಲಿ ಊರ್ಜಿತವಾಗದೇ ಹೋದುದನ್ನು ಕಂಡು ರಾಮಚಂದ್ರನಿಗೆ ಸಂತೋಷವಾಯ್ತು. ಶಾರದೆಗೆ ಬೇಕಾದುದು ಜೀವನಾಂಶವಲ್ಲ; ದಾಂಪತ್ಯವಿಚ್ಛೇದನ ಎಂದು ತಿಳಿದಾಗ ಅವನ ಸಂತೋಷ ಹೆಚ್ಚು ಕಾಲ ಉಳಿಯಲಿಲ್ಲ. ' ಕಡೆಗೂ ಕೈ ಕೊಟ್ಟಳಲ್ಲ ' ಎಂದುಕೊಂಡು ಶಾರದೆಯ ಮೇಲೆ ಹಾರಾಡಿದ. ಅವನ ಹಾರಾಟವನ್ನು ಕೇಳುವವರು ಯಾರು ?

ಆ ದಿನ ಕಬ್ಬನ್ ಪಾರ್ಕಿನಲ್ಲಿ ಶಾರದೆಯನ್ನು ಕಿಟ್ಟಣ್ಣನೊಡನೆ ನೋಡಿದಲಾಗಾಯಿತು ರಾಮಚಂದ್ರನ ಆತ್ಮಗೌರವ, ಸ್ವಾಭಿಮಾನ, ಜರ್ಜರಿತವಾಗಿದ್ದುವು. ಹೇಗಾದರೂ ಮಾಡಿ ಶಾರದೆಯ ನೆಮ್ಮದಿ ಬದುಕನ್ನು ಹಾಳು ಮಾಡಬೇಕೆಂದು ಶಪಥ ಮಾಡಿದ. ಇದನ್ನು ಕಾರ್ಯರೂಪಕ್ಕೆ ತರಲು ಶಾರದೆಯ ಮಕ್ಕಳು—ಕೃಷ್ಣವೇಣಿ ಶ್ರೀಧರರನ್ನು ಸಾಧನ ಮಾಡಿಕೊಂಡ.

ಶಾರದೆಗೆ ಮಕ್ಕಳನ್ನು ಕಂಡರೆ ಎಷ್ಟು ಪ್ರೀತಿ ಎಂಬುದನ್ನು ರಾಮಚಂದ್ರ ಬಲ್ಲ. ತಾನು ಮಕ್ಕಳ ಕೈ ಬಿಟ್ಟಿದ್ದರೂ, ಶಾರದೆ ಅವುಗಳ ಕೈಬಿಡದೆ ಹೊಟ್ಟೆಗೆ ಬಟ್ಟೆಗೆ ಕಟ್ಟಿ ಅವುಗಳನ್ನು ಹೇಗೆ ಪೋಷಿಸಿಕೊಂಡು ಬಂದಿದ್ದಾಳೆಂಬ ವಿಷಯವೂ ಅವನಿಗೆ ತಿಳಿದಿತ್ತು. ಆ ಮಕ್ಕಳನ್ನು ಅವಳಿಂದ ಬೇರ್ಪಡಿಸಿದರೆ ಶಾರದೆಗೆ ಮನೋರೋಗ ಹಿಡಿಯುವುದು ಖಂಡಿತ. ಅವಳ ಸಂಸಾರ ಸುಖ

ತೂತು ಬಿದ್ದ ಗಡಿಗೆಯಲ್ಲಿನ ನೀರಿನಂತೆ ಸೋರಿ ಹೋಗುವುದು ಎಂದು ಕೊಂಡು ಶಾರದೆಗೆ ಕಾಗದ ಬರೆದು 'ಮಕ್ಕಳನ್ನು ತನ್ನ ವಶ ಮಾಡಲು' ತಿಳಿಸಿದ.

ರಾಮಚಂದ್ರ ಆ ಮಕ್ಕಳ ತಂದೆಯಾಗಿದ್ದರೂ ಒಂದು ದಿನವಾದರೂ ಅವುಗಳ ಪೋಷಣೆಯ ಭಾರ ಹೊತ್ತವನಲ್ಲ. ಆದರೂ ಹಿಂದೂ ಧರ್ಮ ಶಾಸ್ತ್ರದ ರೀತ್ಯಾ ಆ ಮಕ್ಕಳು ಅವನಿಗೆ ಸೇರಬೇಕಾಗಿತ್ತು! ನ್ಯಾಯಾಲಯವೂ ಇದನ್ನೇ ಎತ್ತಿ ಹಿಡಿದಿತ್ತು. ರಾಮಚಂದ್ರ ಕೋರ್ಟಿನ ಮೂಲಕ ಮಕ್ಕಳನ್ನು ತನ್ನ ವಶ ಮಾಡಲು ಶಾರದೆಗೆ ಒಂದು ನೋಟೀಸು ಕೊಟ್ಟಿದ್ದರೆ ಮಕ್ಕಳು ಅವನವಾಗಿ ಬಿಡುತ್ತಿದ್ದುವು. ಆದರೆ ರಾಮಚಂದ್ರನಿಗೆ ಬೇಕಿದ್ದುದು ಮಕ್ಕಳಲ್ಲ–ಶಾರದೆಯ ಕೊರಗು!

ರಾಮಚಂದ್ರನ ಕಾಗದ ಕಂಡು ಶಾರದೆಗೆ ಆಕಾಶವೇ ತಲೆಯ ಮೇಲೆ ಬಿದ್ದಂತಾಗಿ ಏನು ಮಾಡಲೂ ದಿಕ್ಕೇ ತೋಚಲಿಲ್ಲ ತನ್ನ ಪಾಡಿಗೆ ತಾನು 'ಹಾಯ್' ಅಂತ ಇರಬೇಕೆಂದರೆ ರಾಮಚಂದ್ರ ಅದಕ್ಕೂ ಕಲ್ಲು ಹಾಕುತ್ತಿರು ವನಲ್ಲ ಎಂದು ವ್ಯಥೆಯಾಯಿತು. ಮಕ್ಕಳನ್ನು ಅವನಿಗೆ ಒಪ್ಪಿಸಬೇಕೇ.... ಬಿಡಬೇಕೇ?

"ಎಂದಿದ್ದರೂ ಇವು ಅವನವೇ ಆಗುವ ಮಕ್ಕಳು. ಅವನ ಸಂತಾನ ವನ್ನು ಅವನಿಗೆ ಒಪ್ಪಿಸಿಬಿಡುವುದೇ ಲೇಸು!"

ಎಂದಿತು ಒಂದು ಮನಸ್ಸು.

"ಅದು ಸರಿ. ತನಗೊಂದು ನೆಲೆಯಿಲ್ಲದ ಪುಂಡು ಪೋಕರಿಯಾದ ರಾಮಚಂದ್ರನಿಗೆ ಬಂಗಾರದಂತಹ ಮಕ್ಕಳನ್ನು ಒಪ್ಪಿಸುವುದಾದರೆ—ಅವು ಗಳನ್ನು ಇಷ್ಟೊಂದು ಕಾಲ ಪೋಷಿಸಿಕೊಂಡು ಬಂದಿದ್ದು ವ್ಯರ್ಥ"

ಎಂದಿತು ಇನ್ನೊಂದು ಮನಸ್ಸು.

"ಯಾಕೆ?"

"ರಾಮಚಂದ್ರ ಮಕ್ಕಳನ್ನು ಬೀದಿಯ ಪಾಲು ಮಾಡುತ್ತಾನೆ. ಇಲ್ಲವೇ ಮೋಹಿನಿಯ ಕೈಲಿ ವಿಷ ತಿನ್ನಿಸಿ ಸಾಯಿಸುತ್ತಾನೆ. ಇದು ಖಂಡಿತ."

"ಅವನ ಮಕ್ಕಳನ್ನು ಅವನು ಏನಾದರೂ ಮಾಡಿಕೊಳ್ಳಲಿ."

"ಈ ಸಾಮ್ರಾಜ್ಯಕ್ಕೆ ಮಕ್ಕಳನ್ನು ಈತನಕ ಸಾಕಬೇಕಾಯಿತೇ? ಆ

ಕಟುಕನಿಗೆ ಕೊಡುವ ಬದಲು ನೀನೇ ಅವರ ಕೊರಳು ಮುರಿದು ಸಾಯಿಸ ಬಾರದೇಕೆ ? ”

“ ಅರಿಯದ ಮಕ್ಕಳನ್ನು ಕೊಂದು ನಾನು ಯಾವ ನರಕಕ್ಕೆ ಹೋಗಲಿ ? ”

“ ಈಗ ರಾಮಚಂದ್ರನಿಗೆ ಮಕ್ಕಳನ್ನು ಒಪ್ಪಿಸಿ ನೀನು ಮಾಡುವುದಾದರೂ ಏನು ? ”

“ ರಾಮಚಂದ್ರ ಎಷ್ಟೆಂದರೂ ಅವುಗಳ ‘ ಹೆತ್ತ ತಂದೆ ’. ಈ ಸ್ವಂತ ಮಕ್ಕಳ ಮೇಲೆ ಕೈ ಮಾಡುವನೇ ? ”

“ ಈ ಪ್ರಶ್ನೆಯನ್ನು ನಿನ್ನನ್ನು ನೀನೇ ಕೇಳಿಕೋ ”

“ ಹೌದು, ರಾಮಚಂದ್ರನಿಗೆ ಮಕ್ಕಳ ಮೇಲೆ ಮಮತೆ ಇದ್ದಿದ್ದರೆ ತನ್ನ ಸಂಸಾರ ಕೀಳದೆ ತೆಪ್ಪಗಿರುತ್ತಿದ್ದ. ಕಿತ್ತ ಮೇಲೂ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಆ ಮಕ್ಕಳಿಗೆ ನೆರವಾಗುತ್ತಿದ್ದ. ಆದರೆ ರಾಮಚಂದ್ರ ಕಳೆದ ಆರು ವರುಷಗಳಿಂದ ತನ್ನ ಮಕ್ಕಳು ಎಂದು ಒಮ್ಮೆಯಾದರೂ ಅವುಗಳ ಬಳಿಗೆ ಸುಳಿದಿರಲಿಲ್ಲ. ಇಂತಹ ಪಾಷಾಣ ಹೃದಯಿಯಾದ ತಂದೆಗೆ ಮಕ್ಕಳನ್ನು ಒಪ್ಪಿಸಿದರೆ ?....

ಶಾರದೆಗೆ ಏನು ನಿರ್ಧರಿಸಬೇಕೆಂದು ತೋಚದೆ ಶೂನ್ಯ ಮನಸ್ಕಳಾಗಿ ಕುಳಿತು ಬಿಟ್ಟಳು. ಗಂಡ ಬಂದು ಮೈಯನ್ನು ಅಲುಗಿಸಿದಾಗಲೇ ಎಚ್ಚರ.

## ೧೨

ಮಕ್ಕಳ ವಿಷಯದಲ್ಲಿ ಗಂಡ ಹೆಂಡರಿಗೆ ಬಹು ಮಾತಾಯಿತು. ಮಕ್ಕಳನ್ನು ರಾಮಚಂದ್ರನಿಗೆ ಕೊಡುವ ವಿಷಯದಲ್ಲಿ ಕಿಟ್ಟಣ್ಣ ಶಾರದೆಯರಲ್ಲಿ ಬಹಳ ಭಿನ್ನಾಭಿಪ್ರಾಯವಿತ್ತು. ಶಾರದೆ ತನ್ನಲ್ಲೇ ತರ್ಕ ವಿತರ್ಕ ಮಾಡಿ, ಒಂದು ನಿರ್ಧಾರಕ್ಕೆ ಬಂದಳು. ಕೃಷ್ಣವೇಣಿ ಶ್ರೀಧರರು ತನ್ನ ಮಕ್ಕಳು ನಿಜ. ತಾನು ರಾಮಚಂದ್ರನ ಧರ್ಮಪತ್ನಿಯಾಗಿದ್ದಾಗ ಅವನಿಗೆ ತಾನು ಅರ್ಪಿಸಿದ ಸಂತಾನ ಪುಷ್ಪಗಳು ಅವು. ಸಮಾಜ ಒಪ್ಪಿದ್ದ ಧಾರ್ಮಿಕ ಹಿನ್ನೆಲೆಯಲ್ಲಿ ನಡೆಸಿದ

ತಮ್ಮ ದಾಂಪತ್ಯ ಜೀವನದ ಮುಕ್ತಾಫಲ ಅವು. ಅದನ್ನು ತಾವಿಬ್ಬರೂ ಬಯಸಿದ್ದರೂ, ರಾಮಚಂದ್ರನು ಅವುಗಳ ಜನಕನಾಗಿರುವ ಕಾರಣ ಅವು ಅವನಿಗೆ ಸೇರತಕ್ಕದ್ದು ನ್ಯಾಯ. ತನ್ನ ಗರ್ಭದಲ್ಲಿ ಅವನ ಸಂತಾನವನ್ನು ಹೊತ್ತು ಪೋಷಿಸಿದ ಮಾತ್ರಕ್ಕೆ ಅವು ತನ್ನದಾಗುವುವೇ ?

ಶಾರದೆ ಮತ್ತೊಂದು ದೃಷ್ಟಿಯಲ್ಲಿ ಆಲೋಚಿಸಿದಳು. ಇಂದಿನ ಮಕ್ಕಳು ನಾಳಿನ ಜನಕರು. ನಾಳೆ ಅವರು ಬೆಳೆದು ದೊಡ್ಡವರಾದಾಗ ಅವರ ಕುಲ ಗೋತ್ರಗಳ ಪ್ರಶ್ನೆ ಬರಬಹುದು. ಕಿಟ್ಟಣ್ಣ ಆ ಮಕ್ಕಳನ್ನು ಎಷ್ಟೇ ಪ್ರೀತಿಸಿದರೂ ಅವುಗಳ ತಂದೆಯಾಗಲಾರ. ಮಕ್ಕಳ ಮುಂದಿನ ಶ್ರೇಯೋಭಿವೃದ್ಧಿಗೆ ತಮ್ಮೊಡನೆ ಇರುವ ವಿಷಯವೇ ಕಾಲ್ತೊಡಕಾದರೆ ಅದನ್ನು ಇಂದೇ ಕಡಿದೊಗೆಯುವುದೇ ಯೋಗ್ಯ. ತಮ್ಮ ದೆಸೆಯಿಂದ ಈ ಮಕ್ಕಳು ಅನ್ಯಾಯಗಳಿಂದ ತುಂಬಿದ ಸಮಾಜದಲ್ಲಿ ತಮ್ಮಂತೆ ಭಂಗ ಪಡಬಾರದಲ್ಲ ಎನ್ನುವ ವಿವೇಕವಾಣಿ ಶಾರದೆಯಲ್ಲಿ ಉದಯಿಸಿ; ರಾಮಚಂದ್ರನಿಗೆ ಮಕ್ಕಳನ್ನು ಒಪ್ಪಿಸುವುದೇ ಸರಿ ಎಂದು ತೀರ್ಮಾನಿಸಿದಳು. ಆದರೆ ಕಿಟ್ಟಣ್ಣನ ವಿಚಾರವೇ ಬೇರೆ. ರಾಮಚಂದ್ರನಿಗೆ ಹುಡುಗರನ್ನು ಒಪ್ಪಿಸುವುದೆಂದರೆ ಕಟುಕರ ಕೈಗೆ ಕುರಿ ಕೊಟ್ಟಂತೆ. ತಾವು ಇಷ್ಟು ಪ್ರೀತಿಯಿಂದ ಸಾಕಿದ ಮಕ್ಕಳನ್ನು ಅವನು ಹಿಂಸಿಸಿ ಕೊಲ್ಲುತ್ತಾನೆ. ಶಾರದೆಯ ಮೇಲಿನ ಸಿಟ್ಟನ್ನು ಮಕ್ಕಳ ಮೇಲೆ ಕಾರಿ, ಅವರನ್ನು ಹುರಿದು ಮುಕ್ಕುತ್ತಾನೆ. ಇದನ್ನೆಲ್ಲಾ ಕಂಡೂ ಕಂಡೂ, ತಾನು ಮಕ್ಕಳ ಸುಖಕ್ಕೆ ಮುಳುವಾಗಬೇಕೇ ? ಹೀಗೆ ಕಿಟ್ಟಣ್ಣನ ವಿಚಾರ ವಾಹಿನಿ ಹರಿದಿತ್ತು.

" ಈ ಮಕ್ಕಳು ಇಂದಲ್ಲ ನಾಳೆಯಾದರೂ ಅವನಿಗೇ ಸೇರಬೇಕು. ಇವರು ನಮ್ಮೊಡನೆ ಇದ್ದಷ್ಟು ದಿನ ಅವನು ಅವುಗಳ ದೆಸೆಯಿಂದ ನಮ್ಮನ್ನು ನೋಯಿಸದೆ ಬಿಡುವುದಿಲ್ಲ. ಅವನ ಮಕ್ಕಳನ್ನು ಅವನು ಇಂದೇ ಕರೆದುಕೊಳ್ಳಲಿ ! "

ಕಿಟ್ಟಣ್ಣ ನಿರ್ವಾಹವಿಲ್ಲದೆ ಮಕ್ಕಳನ್ನು ಕಳುಹಿಸಿಕೊಡಲು ಒಪ್ಪಿದ.

" ನಿನ್ನ ಮಕ್ಕಳನ್ನು ನೀನು ಬಂದು ಕರೆದುಕೊಂಡು ಹೋಗಬಹುದು ಅದಕ್ಕೆ ನಮ್ಮ ಅಡ್ಡಿಯಿಲ್ಲ "

ಎಂದು ಕಿಟ್ಟಣ್ಣ ರಾಮಚಂದ್ರನಿಗೆ ಬರೆದು ಬಿಟ್ಟ. ತಾನು ಬಿಟ್ಟ ಬಾಣ

ಇಷ್ಟು ಸುಲಭವಾಗಿ ನಿರರ್ಥಕವಾಗುವುದೆಂದು ರಾಮಚಂದ್ರ ತಿಳಿದಿರಲಿಲ್ಲ. ಯಾಕೋ ತಾನು ಹಾಕಿದ ಪಟ್ಟು ಹಿಡಿಯಲಿಲ್ಲವೆಂದುಕೊಂಡು 'ಮಟ್ಟಿ' ಯಲ್ಲಿ ಬಿದ್ದ ಜಟ್ಟಿಯಂತೆ ತೆಪ್ಪಗಾದ.

ಶಾರದೆಗೆ ಆ ಕೆಲವು ದಿನ ಕಣ್ಣುತುಂಬಾ ನಿದ್ರೆ ಹತ್ತಲಿಲ್ಲ. ರಾಮಚಂದ್ರ ಮಕ್ಕಳನ್ನು ಕರೆದುಕೊಂಡು ಹೋಗಲು ಯಾವ ಗಳಿಗೆಯಲ್ಲಾದರೂ ಬರಬಹುದು, ಎಂದು ಸದಾ ಗಾಬರಿ. ಒಮ್ಮೆ ಮಕ್ಕಳು ರಾಮಚಂದ್ರನ ಅಧಿಕಾರವಲಯದಲ್ಲಿ ಸೇರಿದುವೆಂದರೆ ಮತ್ತೆ ತಾನು ಅವುಗಳ ಮುಖ ನೋಡುವಂತಿಲ್ಲ. ಈ ನಾಲ್ಕೆಂಟು ದಿನಗಳಲ್ಲಿ ಅವುಗಳ ಬಗ್ಗೆ ತನ್ನಲ್ಲಿರುವ ಪ್ರೇಮದ ಹೊಳೆಯನ್ನೆಲ್ಲಾ ಬರಿದು ಮಾಡಬೇಕು. ನಾಳೆ ತಾನು ಯಾರೋ ಆ ಮಕ್ಕಳು ಯಾರೋ.

ಒಂದು ಸಂಜೆ ಶಾರದ ಮಕ್ಕಳ ವಿಷಯವನ್ನು ಆಲೋಚಿಸುತ್ತಾ ಕುಳಿತಿದ್ದಳು. ಕೃಷ್ಣವೇಣಿ ಆಡಲು ಎಲ್ಲೂ ಹೋಗದೆ ತನ್ನ ಪಾಡಿಗೆ ತಾನು "ತಲ್ಲಣಿಸದಿರು ಕಂಡ್ಯ ತಾಳು ಮನವೇ" ಎನ್ನುವ ಕೀರ್ತನೆಯನ್ನು ಕೇಳದನಿಯಲ್ಲಿ ಹಾಡಿಕೊಳ್ಳುತ್ತಿದ್ದಳು. ಶಾರದೆ ಆ ಹಾಡನ್ನು ಕೇಳಿ, ಕೃಷ್ಣವೇಣಿ, ತಲ್ಲಣಿಸುತ್ತಿರುವ ತನ್ನ ಮನವನ್ನು ಕುರಿತು ಬೇಕೆಂದೇ ಆ ಹಾಡು ಹಾಡುತ್ತಿರುವಳೆಂದು ಅಂದುಕೊಂಡಳು. ಹಾಡು ಮುಗಿದಾಗ ಶಾರದೆ ಎದ್ದು ಹೋಗಿ ಮಗಳನ್ನು ತಬ್ಬಿಕೊಂಡು 'ಇಲ್ಲ, ನನ್ನ ಕಂದಾ, ತಲ್ಲಣಿಸುವುದಿಲ್ಲ' ಎಂದು ಹೇಳಿ ಗಳಗಳನೆ ಅತ್ತು ಬಿಟ್ಟಳು. ಕೃಷ್ಣವೇಣಿಗೆ ತಾಯಿ ವರ್ತನೆ ಅರ್ಥವಾಗದೆ ಬೆಪ್ಪಾಗಿ ಕುಳಿತು ಬಿಟ್ಟಳು. ಅವಳಿಗೆ ತಾಯಿಯ ಕಣ್ಣಿನಲ್ಲಿ ಕಣ್ಣೀರನ್ನು ಕಂಡು ತುಂಬಾ ಹೆದರಿಕೆಯಾಯಿತು.

"ಅಮ್ಮಾ, ಯಾಕಮ್ಮಾ ಅಳೋದು?"

"ಅಳದೆ ಮತ್ತೇನು ಮಾಡಲಿ ಕಂದಾ? ನೀವು ನನ್ನ ಹೊಟ್ಟೆಯಲ್ಲಿ ಯಾಕಾದ್ರೂ ಹುಟ್ಟಿದ್ರೋ........"

"ಅಮ್ಮಾ ನಾನು ಹಾಡು ಹೇಳಿದೆ ಅಂತ ನಿನಗೆ ಸಿಟ್ಟು ಬಂತೇ?"

"ಸಿಟ್ಟಾದರೆ ಯಾರಾದರೂ ಅಳ್ತಾರೇನೇ?"

"ಹಾಗಾದ್ರೆ ನೀನು ಅಳೋದು ಯಾಕೆ? ನಾವು ನಿನ್ನ ಹೊಟ್ಟೇಲಿ ಹುಟ್ಟಬಾರ್ದಿತ್ತು ಅನ್ನೋದೇಕೆ?"

" ಹೌದು ಕಂದಾ. ನನ್ನ ಹೊಟ್ಟೆಯಲ್ಲಿ ನೀವು ಹುಟ್ಟದೆ ಇದ್ದಿದ್ದರೆ ಇಷ್ಟು ಕಷ್ಟ ಬರ್ತ್ತಿರಲಿಲ್ಲ "

" ಈಗ ನಮಗೆ ಏನು ಕಡಿಮೆಯಾಗಿದೆ ? ಯಾವ ಕಷ್ಟ ಬಂದಿದೆ ? "

" ಹುಟ್ಟುತ್ತಲೇ ತಂದೆಯ ಮುಖ ಕಾಣದ ದುರ್ದೈವಿಗಳು ನೀವು "

" ನಮಗೆ ನೀನೇ ತಾಯಿ, ನೀನೇ ತಂದೆ—ನಿನ್ನನ್ನು ಬಿಟ್ಟು ಬೇರೆ ತಂದೆ ಯಾರಮ್ಮ ಇದ್ದಾರೆ ? "

" ಇದ್ದಾರಮ್ಮ—ಇದ್ದಾರೆ. ನಿಮ್ಮನ್ನು ಆಹುತಿ ತೆಗೆದುಕೊಳ್ಳಲು ಕಾದು ಕುಳಿತಿದ್ದಾರೆ. ನಿಮ್ಮ ಮೇಲೆ ಎಂದು ಬೀಳುವನೋ, ಎಂದು ತಾಯಿ ಮಕ್ಕಳನ್ನು ಅಗಲಿಸುವನೋ ಯಾರಿಗೆ ಗೊತ್ತು ? "

ಎಂದು ಹೇಳುತ್ತಾ ಇನ್ನಷ್ಟು ಅತ್ತಳು ಶಾರದೆ.

" ಯಾರಮ್ಮ ನಮ್ಮನ್ನು ಅಗಲಿಸುವುದು ? "

" ಯಾರೆಂದರೆ ನಿಮ್ಮ ತಂದೆ. ಇದುವರೆಗೆ ನಿಮ್ಮನ್ನು ವಿಚಾರಿಸದೆ ಇದ್ದ ಆ ತಂದೆ—ಇಂದೋ ನಾಳೆಯೋ ನಿಮ್ಮನ್ನು ಕರೆದೊಯ್ಯಲು ಬರುತ್ತಾನಂತೆ ! "

" ನಾವು ಅವನೊಂದಿಗೆ ಹೋಗುವುದೇ ಇಲ್ಲ. "

" ಇಲ್ಲ ಮಗು, ನೀವು ಹೋಗಬೇಕು. ಅವನು ನಿಮ್ಮನ್ನು ಹೆತ್ತ ತಂದೆ. "

" ಹಾಗಾದ್ರೆ ಅಮ್ಮ....ನಮ್ಮ ಮೇಲೆ ನಿಂಗೆ ಇಷ್ಟೇನೇ ಪ್ರೀತಿ ? "

" ಆ ಮಾತು ಆಡಬೇಡ ಮಗು. ನನ್ನ ಕರುಳು ಕತ್ತರಿಸುತ್ತೆ. ನಿಮ್ಮನ್ನು ನಾವಾಗಿ ನಾವು ಹೊರದಬ್ಬುತ್ತಿಲ್ಲ. ಅವನು ಬಲವಂತವಾಗಿ ಎಳೆದೊಯ್ಯುತ್ತಿದ್ದಾನೆ. "

" ಅವನು ಯಾರೋ ನನಗೆ ಗೊತ್ತಿಲ್ಲ. ನಾನು ಏನು ಮಾಡಿದರೂ ಅವನ ಜತೆಗೆ ಹೋಗುವುದಿಲ್ಲ. "

ಈ ವೇಳೆಗೆ ಹೊರಗೆ ಆಡುತ್ತಿದ್ದ ಶ್ರೀಧರ ಒಳಗೆ ಬಂದ. ಅವನನ್ನು ಕಂಡು ಕೃಷ್ಣವೇಣಿ

" ಶ್ರೀಧರನ್ನ ಬೇಕಾದರೆ ಕರೆದುಕೊಂಡು ಹೋಗ್ಲಿ. ನಾನಂತೂ ನಿನ್ನ ಬಿಟ್ಟು ಕದಲೋದಿಲ್ಲ. "

ಈ ಮಾತು ಕೇಳಿ ಶ್ರೀಧರ

" ಅಮ್ಮ, ಎಲ್ಲಿಗಮ್ಮ ಹೋಗೋದು ? ನಾನೂ ಬರ್ತೀನಮ್ಮ ಜತೆಗೆ " ಎಂದ.

" ನಿಮ್ಮ ತಂದೆಯ ಮನೆಗೆ ಮಗು. ನೀನೂ ಹೋಗ್ತೀಯಾ ? "

" ಕಿಟ್ಟಣ್ಣನ ಮನೆಗಾ ? ಯಾವಾಗ ಹೋಗೋದು ? "

ತಂದೆ ಎಂದರೆ ಕಿಟ್ಟಣ್ಣನೆಂದೇ ಆ ಮಗುವಿನ ಭಾವನೆ.

" ಅಲ್ಲ ಕಂದ. ನಿಮ್ಮ ತಂದೆ ಅಂತ ಇನ್ನೊಬ್ಬರು ಇದ್ದಾರೆ ! "

" ಹಾಗಾದ್ರೆ ನಾನು ಹೋಗಲ್ಲಮ್ಮ " ಎಂದ ಬೆದರು ದನಿಯಲ್ಲಿ ಶ್ರೀಧರ.

ಶಾರದೆಗೆ ಮಕ್ಕಳ ಮಾತು ಕೇಳಿ ಮನಸ್ಸು ಮೂಕವಾಯಿತು. ತಂದೆ ಎಂದರೆ ಗಡಗಡ ನಡುಗುವ ಈ ಮಕ್ಕಳನ್ನು ತಾನು ಅವನಿಗೆ ಒಪ್ಪಿಸಿ, ಕೈಯಾರ ಕೊಲೆ ಮಾಡುತ್ತಿರುವೆನೆಂದೇ ಅವಳ ಭಾವನೆ. ಆದರೆ ಅವಳ ಸ್ಥಿತಿ ಗಾಳಕ್ಕೆ ಸಿಕ್ಕಿಕೊಂಡ ಮೀನಿನಂತಾಗಿತ್ತು. ಅವಳು ವಿಲಿವಿಲಿ ಒದ್ದಾಡಿದಳು. ಹೊಟ್ಟೆಯ ಸಂಕಟವನ್ನು ಹೊಟ್ಟೆಯಲ್ಲಿ ಅದುಮಿ ಹಿಡಿಯಲಾರದೆ ಇಬ್ಬರು ಮಕ್ಕಳನ್ನು ತಬ್ಬಿಕೊಂಡು 'ಗೊಳೊ' ಎಂದು ಅತ್ತುಬಿಟ್ಟಳು.

ಇಂದು ಬಂದಾನು, ನಾಳೆ ಬಂದಾನು ಎಂದು ಹತ್ತೆಂಟು ದಿನ ಎದುರು ನೋಡಿದರೂ ರಾಮಚಂದ್ರ ಮಕ್ಕಳನ್ನು ಕರೆದೊಯ್ಯಲು ಬರಲಿಲ್ಲ. ತಾಯಿ ಮಕ್ಕಳಿಗೆ ಕೊಂಚ ಸಮಾಧಾನವಾಯಿತು.

ರಾಮಚಂದ್ರನಿಗೆ ಪತ್ರ ಬರೆದು ತಿಂಗಳೂ ಆಯಿತು. ರಾಮಚಂದ್ರ ಮಾತ್ರ ಬರಲಿಲ್ಲ. ಇದನ್ನು ಕಂಡು ಶಾರದ ಅಂದಳು.

" ಇದೆಲ್ಲಾ ಒಂದು ಕಪಟ ನಾಟಕ. ನಮ್ಮನ್ನು ಸುಮ್ಮನೆ ಕೊರಗಿಸಲು ಮಕ್ಕಳನ್ನು ಕರೆದೊಯ್ಯುವ ಬೆದರಿಕೆ ಹಾಕಿದ. ಕರೆದೊಯ್ಯುವವನಾಗಿದ್ದರೆ ಎಂದೋ ಕರೆದುಕೊಂಡು ಹೋಗುತ್ತಿದ್ದ. "

" ಇಷ್ಟಕ್ಕೆ ಅವನೆಲ್ಲಿ ಸುಮ್ಮನಾಗುತ್ತಾನೆ. ಇನ್ನೂ ಯಾವ ಯಾವ ವೇಷ ಕಟ್ಟುತ್ತಾನೋ ಯಾರಿಗೆ ಗೊತ್ತು ? "

ಎಂದ ಕಿಟ್ಟಣ್ಣ ನಗುತ್ತಾ.

ಕಿಟ್ಟಣ್ಣನಿಗೆ ಈ ಕೆಲವು ತಿಂಗಳಿಂದ ತನ್ನ ಗ್ರಹಗತಿ ಚೆನ್ನಾಗಿಲ್ಲವೆಂದು ವೇದ್ಯವಾಗಿತ್ತು. ಅವನು ' ಅಂಗಡಿ ' ಜತೆಗೆ ಹಿಡಿದಿದ್ದ ಒಂದೆರಡು ಕಮಿಷನ್

ವ್ಯಾಪಾರಗಳಲ್ಲಿ ಒಂದೂ ಕೈಹತ್ತಿರಲಿಲ್ಲ. ಈಮಧ್ಯೆ ತುಂಬಾ ನಂಬಿಕೆಯಾಗಿದ್ದ ಒಬ್ಬಸ್ನೇಹಿತ ಯಾರಲ್ಲೋ ಮಾಡಿದ ಸಾಲಕ್ಕೆ ಕಿಟ್ಟಣ್ಣನಿಂದ ಜಾಮೀನು ಕೊಡಿಸಿ ತಾನು ಪರಾರಿಯಾಗಿದ್ದ. ಈಗ ಆ ಜಾಮೀನೇ ಕಿಟ್ಟಣ್ಣನಿಗೆ ಮುಳುವಾಯಿತು. ಅವನು ಹಣವನ್ನೆಲ್ಲಾ ಅಂಗಡಿ ಸಾಮಾನಿನ ಮೇಲೆ ಹಾಕಿಬಿಟ್ಟಿದುದರಿಂದ ಕೈಯಲ್ಲಿ ನಗದು ಮೂರು ಕಾಸಿರಲಿಲ್ಲ. ಜಾಮೀನು ತೆಗೆದುಕೊಂಡಿದ್ದವನು ಕಿಟ್ಟಣ್ಣನನ್ನು ಹಣಕ್ಕಾಗಿ ತಗಾದೆ ಮಾಡಿದ. ಮಾನ ಹೋಗುವ ಹೊತ್ತು ಬಂದುದರಿಂದ ಕಿಟ್ಟಣ್ಣ ಮನೆಯನ್ನು ಅವನಿಗೆ ಭೋಗ್ಯ ಹಾಕಬೇಕಾಯಿತು. ಈ ಪೆಟ್ಟನ್ನು ಚೇತರಿಸಿಕೊಳ್ಳುತ್ತಿರುವಂತೆಯೇ ಅವನಿಗೆ ಇದಕ್ಕೂ ಭಾರೀ ಹೊಡೆತ ಬೀಳಬೇಕೇ?

ಕಿಟ್ಟಣ್ಣನದು ಹೆಸರಿಗೆ ಮಾತ್ರ ಕಾಫಿ ಪುಡಿ ಅಂಗಡಿ. ಆದರೆ ಅಲ್ಲಿ ಸಿಕ್ಕದೇ ಇದ್ದ ಸ್ಟೇಷನರಿ ಸಾಮಾನೇ ಇಲ್ಲ. ಅವನು ಪೇಟೆಯಲ್ಲಿ ಸಿಕ್ಕುವ ಫ್ಯಾನ್ಸಿ ಸಾಮಾನುಗಳನ್ನು 'ಸ್ಯಾಂಪಲ್ಲ'ಗಾದರೂ ಇಟ್ಟಿರುತ್ತಿದ್ದ. ಕಿಟ್ಟಣ್ಣ ಆ ಬಡಾವಣೆಯಲ್ಲಿ ಎಲ್ಲರಿಗೂ ಬೇಕಾದ ಮನುಷ್ಯನಾಗಿದ್ದ ಕಾರಣ ಅವನ ವ್ಯಾಪಾರ ಚನ್ನಾಗಿಯೇ ಆಗುತ್ತಿತ್ತು.

ಇಂಗ್ಲೀಷಿನಲ್ಲಿ ಒಂದು ಗಾದೆಯಿದೆ. 'ದುರಂತಗಳು ಬಂದರೆ ಜತೆ ಜತೆಯಾಗಿ ಬರುವುದಂತೆ' ಕಿಟ್ಟಣ್ಣನ ವಿಷಯದಲ್ಲಿ ಈ ಮಾತು ಸತ್ಯವಾಯಿತು. ಒಂದು ದಿನ ಕಿಟ್ಟಣ್ಣನ ಸಂಸಾರಕ್ಕೆ ಅನ್ನ ಕಲ್ಪಿಸುತ್ತಿದ್ದ ಅಂಗಡಿಯಲ್ಲಿ ಕಳ್ಳತನವಾಯಿತು. ಕಳ್ಳತನವೆಂದರೆ ಸಣ್ಣ ಪುಟ್ಟ ಕಳ್ಳತನವಲ್ಲ ಇಡೀ ಅಂಗಡಿಯನ್ನು ದೋಚಿಕೊಂಡು ಹೋಗಿದ್ದರು. ಮುಂದುಗಡೆ ಬಾಗಿಲಿಗೆ ಹಾಕಿದ್ದ ಬೀಗ ಇದ್ದಂತೆಯೇ ಇತ್ತು. ಹಿಂದಿನ ಬಾಗಿಲನ್ನು ಒಡೆದು 'ಕನ್ಸರ್ವೆನ್ಸಿ' ರಸ್ತೆಯ ಮೂಲಕ ಸಾಮಾನೆಲ್ಲಾ ಸಾಗಿಸಿಬಿಟ್ಟಿದ್ದರು. ಕಾಫಿ ಪುಡಿ ಮಾಡುವ ಯಂತ್ರವನ್ನೂ ಬಿಡದೆ ಸಾಗಿಸಿರಬೇಕಾದರೆ ಕಳ್ಳತನ ಎಷ್ಟು ವ್ಯವಸ್ಥೆಯಿಂದ ನಡೆದಿರಬೇಕು?

ಅಂತೂ ಕಳುವಿನಿಂದ ಕಿಟ್ಟಣ್ಣನ ಅನ್ನಕ್ಕೆ ಕಲ್ಲು ಬಿತ್ತು. ಅಂಗಡಿಯಲ್ಲಿ ಕಳುವಾದ ಸುದ್ದಿ ಕೇಳಿ ಇಡೀ ಬಡಾವಣೆಯ ಜನ ಕಿಟ್ಟಣ್ಣನಿಗಾಗಿ ಮರುಗಿದರು. ಕೆಲವರು ಇಂತಹ ಹೊತ್ತಿನಲ್ಲಿಯೂ 'ಇದೆಲ್ಲವೂ ಆ ಹಾದರಗಿತ್ತಿಯನ್ನು ಕಟ್ಟಿಕೊಂಡ ಫಲ' ಎಂದು ಅನ್ನದಿರಲಿಲ್ಲ. ಪಾತಮ್ಮನ ಮನೆಯ

ಲ್ಲಿದ್ದ ವಿತಂತು ಶಾರದೆಗೆ ಕೇಳಿಸುವಂತೆಯೇ "ಮಾಡಬಾರದ ಕೆಲಸ ಮಾಡಿದರೆ ಆಗಬಾರದ ಅನಾಹುತವಾಗುತ್ತೆ. ನಿನ್ನೆ ಮನೆ ಹೋಯಿತು. ಇಂದು ಗಂಜಿ ಹೋಯಿತು. ನಾಳೆ ತಲೆಯೇ ಹೋಗುತ್ತೋ ಏನೋ ಯಾರಿಗೆ ಗೊತ್ತು ? ಪಾಪ ಪುಣ್ಯ, ದೇವರು ದಿಂಡರು ಅಂತ ಭಯಪಡದೆ ಇರೋರನ್ನ ದೇವರು ಎಷ್ಟು ದಿನ ಅಂತ ನೋಡಿಕೊಂಡು ಸುಮ್ಮನಿರುತ್ತಾನೆ? "

ಈ ಕಟುಮಾತುಗಳನ್ನು ಕೇಳಿ ಶಾರದೆಗೆ ಪ್ರಾಣ ಬಿಡಲೇ ಎನಿಸಿತು.

" ದೇವರೇ ನಾನು ಮಾಡಿದ ಯಾವ ತಪ್ಪಿಗೆ ಇದು ಶಿಕ್ಷೆ? " ಎಂದು ಆ ದಿನವೆಲ್ಲಾ ಅಳುತ್ತಾ ಕುಳಿತಳು. ಕಡೆಗೆ ಕಿಟ್ಟಣ್ಣನೇ ಬಂದು ಸಮಾಧಾನ ಪಡಿಸಬೇಕಾಯಿತು.

" ಶಾರದ, ಇದೆಲ್ಲಾ ನಮ್ಮ ಒಳ್ಳೆಯದಕ್ಕೆ. ನಾವು ಆರಿಸಿಕೊಂಡ ಸತ್ಯಪಥದಲ್ಲಿ ನಮಗೆ ನಂಬಿಕೆ ಇದೆಯೋ ಇಲ್ಲವೋ ಎನ್ನುವುದನ್ನು ಒರೆಹಚ್ಚಿ ನೋಡಲು ದೇವರು ಬೇಕೆಂದೇ ಇಲ್ಲದ ಎಡರು ತೊಡರುಗಳನ್ನು ಒಡ್ಡುತ್ತಿದ್ದಾನೆ. ಇಂತಹ ಹೊತ್ತಿನಲ್ಲಿ ನಾವು ಧೃತಿಗೆಡದೆ ಅನನ್ಯ ಭಾವದಿಂದ ಅವನನ್ನು ಸೇವಿಸಿ ಬಾಳಿನಪಥದಲ್ಲಿ ಮುಂದುವರಿಯಬೇಕಾದ್ದು ನಮ್ಮ ಕರ್ತವ್ಯ. "

" ನಮ್ಮ ಪಾಡಿಗೆ ನಾವು ತೆಪ್ಪಗಿದ್ದರೆ ಜನವೇಕೆ ನಮ್ಮನ್ನು ಆಡಿಕೊಳ್ಳಬೇಕು ? ಅವರಿಗೆ ನಾವು ಮಾಡಿದ ಅನ್ಯಾಯವಾದರೂ ಏನು ? "

" ನ್ಯಾಯ ಅನ್ಯಾಯಗಳ ದೃಷ್ಟಿ ಜನಕ್ಕಿದ್ದಿದ್ದರೆ ಸಮಾಜದಲ್ಲಿ ಇಷ್ಟೊಂದು ದುರ್ಗಂಧವಿರುತ್ತಿರಲಿಲ್ಲ ಅವರಿಗೆ ಬೇಕಾದದ್ದು ಪರನಿಂದೆ. ಅದರಿಂದ ಸಿಗುವ ಕೀಳು ಆನಂದ! ಅವುಗಳನ್ನು ನೀನು ಗಮನಕ್ಕೆ ತರಬೇಡ ! "

" ಎಷ್ಟೆಂದು ಇಂತಹ ಕಿಡಿ ಮಾತುಗಳನ್ನು ಕೇಳಿಕೊಂಡಿರಬೇಕು ? ಸೈರಣೆಗೂ ಒಂದು ಮಿತಿಯಿಲ್ಲವೇ ? "

" ಹಾಗಾದರೆ ನಾನೊಂದು ಉಪಾಯ ಸೂಚಿಸಲೇ ? "

" ಏನದು ? "

" ನಾವು ಏಕೆ ಈ ಬಡಾವಣೆಯನ್ನು ಬಿಟ್ಟುಹೊರಡಬಾರದು ? ಹೇಗೂ ಮನೆ ನಮ್ಮದಾದರೂ ನಾವು ಬಾಡಿಗೆ ಕೊಡುವುದು ತಪ್ಪಿಲ್ಲ. "

" ಬೇಡ. ನಾವು ಎಲ್ಲಿಗೂ ಹೋಗುವುದು ಬೇಡ. ನಾನು ಇಲ್ಲೇ

ಇದ್ದು ಆಡಿಕೊಳ್ಳುವ ಸಮಾಜದ ಮೇಲೆ ಸೇಡು ತೀರಿಸಿಕೊಳ್ಳುತ್ತೇನೆ. "

ಕಿಟ್ಟಣ್ಣ ಈ ಮಾತು ಕೇಳಿ ನಕ್ಕುಬಿಟ್ಟ.

" ಶಾರದ ಅಷ್ಟು ಜನರ ವಿರುದ್ಧ ನಿನ್ನ ಹೋರಾಟವೇ? ನೀನು ಒಬ್ಬಳು ಎದ್ದ ಬಂಡು ಸಾಕೇ ? " ಎಂದ ಕಿಟ್ಟಣ್ಣ

" ಸಾಲದೆನ್ನುವ ವಿಷಯ ನನಗೂ ತಿಳಿದದೆ. ನಾನು ಸಮಾಜದ ಅನ್ಯಾಯಗಳನ್ನೆದುರಿಸಿ ನನ್ನ ಕೈಲಾದಷ್ಟು ಹೋರಾಡುತ್ತೇನೆ. ನನ್ನ ಕೊನೆ ಯುಸಿರು ಇರುವ ತನಕ ಹೋರಾಡುತ್ತೇನ. ನಾನು ಈ ಹೋರಾಟದಲ್ಲಿ ಅಸುವನ್ನು ನೀಗಿದರೂ ನನ್ನ ಹೋರಾಟ ಸಮಾಜದ ಸಾವಿರ ಅನ್ಯಾಯಗಳ ಕಪಿಮುಷ್ಟಿಯಲ್ಲಿ ಸಿಕ್ಕು ನರಳುವ ಸೋದರಿಯರಿಗೆ ಸ್ಫೂರ್ತಿಯಾಗಲಿ. ನಾನು ಹೊತ್ತಿಸಿದ ಕಿಡಿ ಮನೆ ಮನೆಗಳಲ್ಲಿ ಹೊತ್ತಿಕೊಂಡು ಸಮಾಜದ ಅನ್ಯಾಯಗಳನ್ನು ಸುಟ್ಟು ಬಿಡಲಿ. ಆ ದಿನ ಬರುವ ತನಕ ನನ್ನಆತ್ಮಕ್ಕೆ ತೃಪ್ತಿ ಯಿಲ್ಲ. ಶಾಂತಿಯಿಲ್ಲ " ಎಂದು ಗರ್ಜಿಸಿದಳು ಶಾರದೆ.

ಕಿಟ್ಟಣ್ಣ ಶಾರದೆಯ ತಲೆಯನ್ನು ನೇವರಿಸುತ್ತ ಹೇಳಿದ,

" ಶಾರದ ನೀನು ಕ್ರಾಂತಿ ಕನ್ಯೆ. ನಿನ್ನ ವಿರುದ್ಧ ಸಮಾಜವೇ ? ಇಂದಲ್ಲ ನಾಳೆ ನೀನು ಊದುವ ಕ್ರಾಂತಿ ಕಹಳೆಗೆ ಇಡೀ ಸ್ತ್ರೀ ಜಗತ್ತು ಓಗೊಡುವುದು ಖಂಡಿತ. ನಿನ್ನ ಆದರ್ಶದ ಉಜ್ವಲ ಪ್ರಣತಿಯಲ್ಲಿ ಮುಂಬರೆದು ಸಮಾಜ ಯಂತ್ರದ ತುಕ್ಕು ಹಿಡಿದ ಭಾಗಗಳನ್ನು ಕಿತ್ತು ಬಿಸಾಡುವುದೂ ಖಂಡಿತ. ಸನ್ನಿ ವೇಶದ ಅಪಕ್ವತೆಯಿಂದ ನೀನು ಸೋಲಬಹುದು ಶಾರದ ! ಆದರೆ ಅಂತಿಮ ಹೋರಾಟದಲ್ಲಿ ಜಯದ ಮಾಲೆ ಬೀಳುವುದು ಸತ್ಯ ಧರ್ಮಗಳನ್ನು ನಂಬಿದವ ರಿಗೇ ಹೊರತು, ಅಧರ್ಮಿಗಳಿಗಲ್ಲ! 'ಸ್ರತವೊಂದು ಗೆಲ್ಲುವುದು-ಅನೃತಮಲ್ತೆ' "

ಶಾರದೆ ಗಂಡನ ಮಾತನ್ನು ಕೇಳುತ್ತಾ ಕುಳಿತಿದ್ದವಳು,

" ಆ ದಿನ ಬರುವುದೆಂದು ? " ಎಂದು ಪಿಸುಗುಟ್ಟಿದಳು.

ಅವಳ ಪ್ರಶ್ನೆ ನೊಂದ ಸೋದರಿಯರ ಮೂಕ ವೇದನೆಯನ್ನು ಮಾರ್ದನಿ ಸುವಂತಿತ್ತು.

ಹುಡುಗರು ಶಾಲೆಯಿಂದ ಮಧ್ಯಾಹ್ನದ ಊಟಕ್ಕೆ ಮನೆಗೆ ಬಂದರು. ಶಾರದೆ ಬಡಿಸಲು ಎದ್ದಳು.

ಶಾರದೆ ಬಡಿಸುತ್ತಾ ಬಡಿಸುತ್ತಾ ಏನನ್ನೋ ಯೋಚಿಸುತ್ತಿದ್ದಳು.

" ಏನು ಯೋಚಿಸುವುದು ಶಾರದ ? "

" ನಾಳಿನ ಗಂಜಿಯ ಸ್ಥಿತಿ ? "

" ದೇವರು ಹೇಗೋ ನಡೆಸುತ್ತಾನೆ "

" ಹೇಗೋ ನಡೆಸುತ್ತಾನೆಂದುಕೊಂಡು ಸುಮ್ಮನಿರಲು ಆಗುತ್ತದೆಯೇ?"

" ಅಂಗಡಿ ಮುಂಗಟ್ಟು ಏಕೋ ಸಾಕೆನಿಸಿದೆ. ಈ ಬಾರಿ ಬೇರೆ ಏನಾದರೂ ಜೀವನ ಮಾರ್ಗ ಹುಡುಕಿಕೊಳ್ಳಬೇಕೆಂದಿದ್ದೇನೆ " ಎಂದ.

ಕಿಟ್ಟಣ್ಣನಿದ್ದ ಸ್ಥಿತಿಯಲ್ಲಿ ಮತ್ತೆ ಅಂಗಡಿ ಆರಂಭಿಸುವುದು ಕಷ್ಟವಾಗಿತ್ತು. ಅಂಗಡಿ ಎಂದರೆ ಮತ್ತೆ ಒಂದೆರಡುಸಾವಿರ ರೂಪಾಯಿಯಷ್ಟು ಬಂಡವಾಳ ಬೇಕಾಗುತ್ತಿತ್ತು. ಆದುದರಿಂದ ಅಂಗಡಿಯ ಆಲೋಚನೆಯನ್ನು ಕೈಬಿಟ್ಟಿದ್ದ ಕಿಟ್ಟಣ್ಣ. ಹಿಡಿದರೆ ಬಂಡವಾಳ ಬೇಕಿರದ ಯಾವುದಾದರೂ ಉದ್ಯಮ ಹಿಡಿಯಬೇಕು ಎಂದು ಆಲೋಚಿಸುತ್ತಿರುವಾಗ ಬೆಂಗಳೂರಿನ ಸುಪ್ರಸಿದ್ಧ ಕಾಫೀ ವರ್ತಕರಾದ ಮಂಡಿ ಮುದ್ದಣ್ಣನವರು ತನ್ನನ್ನು ಯಾಕೋ ಹೇಳಿ ಕಳುಹಿದ್ದ ವಿಷಯ ಜ್ಞಾಪಕಕ್ಕೆ ಬಂತು. ಕಿಟ್ಟಣ್ಣ ಅವರಿಗಾಗಿ ಮಾಡಿದ್ದ ಕಾಫೀ ಬೀಜದ ವ್ಯಾಪಾರದ ಬಾಬ್ತು ಕೊಂಚ ಕಮಿಷನ್ ಹಣ ಬರುವುದಿತ್ತು. ಅದನ್ನು ತರಲು ಸೈಕಲ್ ಏರಿ ಹೊರಟ.

ಮುದ್ದಣ್ಣನವರು ಶ್ರೀಮಂತರಾದರೂ ತುಂಬಾ ಸರಳ ಜೀವಿ. ಕಷ್ಟದಲ್ಲಿ ಬೆಳೆದು ಈಗ ಶ್ರೀಮಂತರಾಗಿದ್ದರು. ಕಿಟ್ಟಣ್ಣನ ಅಂಗಡಿಗೆ ಕಳ್ಳರು ಬಿದ್ದ ಕಥೆ ಕೇಳಿ ಮುದ್ದಣ್ಣನವರು ತುಂಬಾ ಪೇಚಾಡಿಕೊಂಡರು. ಮತ್ತೆ ಅಂಗಡಿಯಿಡುವುದಾದರೆ ತಮ್ಮಿಂದಾಗುವ ಸಹಾಯ ಮಾಡುವುದಾಗಿ ಹೇಳಿದರು. ಕಿಟ್ಟಣ್ಣ ಯಾವುದಾದರೂ ಬಂಡವಾಳ ರಹಿತ ವೃತ್ತಿ ಹಿಡಿಯುವ ಆಲೋಚನೆ ತಿಳಿಸಿದ.

" ಹಾಗಾದರೆ ಕಿಟ್ಟಣ್ಣ, ನೀನು ಮಡಿಕೇರಿಯಲ್ಲಿರುವ ನಮ್ಮ ಗಡಂಗು ಯಾಕೆ ನೋಡಿಕೊಳ್ಳಬಾರದು. ಈ ತಿಂಗಳು ಮಡಿಕೇರಿಯಲ್ಲಿ 'ಗೋಡೌನ್' ತೆರೆಯಬೇಕೆಂದಿದ್ದೇವೆ. ಅಲ್ಲಿಗೊಬ್ಬ ನಂಬಿಕೆಯಾದ 'ಕ್ಲಾರ್ಕ್' ಬೇಕಾಗಿದೆ. ಯಾರನ್ನಾದರೂ ಕಳುಹಿಸಬೇಕೂಂತ ಇದ್ದೇನೆ. ಕೇವಲ ಲೆಖ್ಖ ಬರೆಯುವಷ್ಟು ಬಂದರೆ ಸಾಲದು. ಕಾಫೀ ಬೀಜದ ವಿಷಯ ಎಲ್ಲಾ ತಿಳಿದಿರೋರಾದ್ರೆ ಹೆಚ್ಚು ಅನುಕೂಲ. ನೀನು ಹೇಗೂ ಅಂಗಡಿ ಇಡೋಲ್ಲ ಅಂತೀಯ. ನೀನು

ಮಡಿಕೇರಿಗೆ ಹೋಗೂದಾದ್ರೆ ನೋಡಪ್ಪ ! "

" ಕಿಟ್ಟಣ್ಣ ಯಾವುದನ್ನೂ ಕೊಂಚ ದಿನಗಳಲ್ಲಿ ಹೇಳುವುದಾಗಿ ತಿಳಿಸಿ ಬರಬೇಕಾಗಿದ್ದ ಕಮಿಷನ್ ತೆಗೆದುಕೊಂಡು ಮನೆಗೆ ಬಂದ.

ಶಾರದೆಗೆ ಮೊದಲು ಬೆಂಗಳೂರಿನಂತಹ ಬಯಲು ಸೀಮೆ ಬಿಟ್ಟು ಮಲ ಸೀಮೆಗೆ ಹೋಗಲು ಮನಸ್ಸು ಬರಲಿಲ್ಲ. ಆಗಲಿ. ಬೇರೆ ಕೆಲಸ ಸಿಕ್ಕದೆ ಇದ್ದರೆ ಒಪ್ಪಿಕೊಂಡು ಬಿಡಿ " ಎಂದು ಹೇಳಿದಳು.

ಕಿಟ್ಟಣ್ಣ ಅಂಗಡಿ ಮುಚ್ಚಿ ಕೆಲಸದ ಬೇಟೆಗೆ ತೊಡಗಿದಾರಭ್ಯ ಅವನಿಗೆ ಯಾರೂ ಕೆಲಸ ಕೊಡುವುದಾಗಿ ಭರವಸೆ ಕೊಟ್ಟಿರಲಿಲ್ಲ. ಕಿಟ್ಟಣ್ಣನಿಗೆ ಇ. ಪಿ. ಎಸ್. ಆಗಿದ್ದರೂ ವಯಸ್ಸಾದುದರಿಂದ ಸರಕಾರಿ ಕಚೇರಿಗಳ ಬಾಗಿಲು ಅವನ ಭಾಗಕ್ಕೆ ಮುಚ್ಚಿಬಿಟ್ಟಿದ್ದವು.

ಇನ್ನು ಕೆಲಸ ಸಿಕ್ಕಿದರೆ ಖಾಸಗಿ ಸಂಸ್ಥೆ ಹಾಗೂ ಗಿರಣಿಗಳಲ್ಲಿ ಕೆಲಸ ಸಿಕ್ಕಬೇಕು. ಖಾಸಗಿ ಸಂಸ್ಥೆಗಳಲ್ಲಿ ಬಲವಾದ ಶಿಫಾರಸಿಲ್ಲದೆ ಕೆಲಸ ಸಿಕ್ಕುವುದಿಲ್ಲ. ಗಿರಣಿಗಳಲ್ಲಿ ಕೂಲಿಗಳೊಡನೆ ಕೂಲಿಯಂತೆ ದುಡಿಯಲು ಕಿಟ್ಟಣ್ಣನಿಗೆ ಇಷ್ಟವಿರಲಿಲ್ಲ. ಹೀಗಾಗಿ ಎಲ್ಲೂ ಆತುರಕ್ಕೆ ಕೆಲಸ ಸಿಗುವ ಸೂಚನೆ ಕಾಣಲಿಲ್ಲ. ಕಿಟ್ಟಣ್ಣ ಕೆಲಸದ ಬೇಟೆ ನಡೆಸಿರುವಾಗ ಇತ್ತ ಮನೆಯಲ್ಲಿ ಇದ್ದಕಿದ್ದಂತೆ ದೆಯ್ಯದ ಕಾಟಕ್ಕೆ ಆರಂಭವಾಗಿತ್ತು.

ಈಚೆಗೆ ಕೆಲವು ದಿನಗಳಿಂದ ಕಿಟ್ಟಣ್ಣನ ಮನೆಯ ಮೇಲೆ ರಾತ್ರಿಯಾಗುತ್ತಲೂ ಕಲ್ಲುಗಳು ಬೀಳಲು ಆರಂಭವಾಗಿದ್ದುವು. ರಾತ್ರಿ ಸುಮಾರು ಹತ್ತು ಹನ್ನೊಂದರ ಸಮಯದಲ್ಲಿ ಎಲ್ಲಿಂದಲೋ ಕಲ್ಲುಗಳು ಬಂದು ಅವರ ಹಂಚಿನ ಮನೆಯ ಮೇಲೆ ಟಣಟಣನೆ ಬೀಳುತ್ತಿದ್ದವು. ಮೊದಲನೆಯ ದಿನ ಯಾರೋ ಹುಡುಗಾಟಕ್ಕೆ ಎಸೆದಿದ್ದಾರೆ ಎಂದುಕೊಂಡರು. ಕಲ್ಲುಗಳು ಮೂರು ನಾಲ್ಕು ಬಾರಿ ಬಿದ್ದು ಅನಂತರ ನಿಂತು ಹೋಯಿತು. ಅದಾದ ಮಾರನೆಯ ದಿನವೂ ಅದೇವೇಳೆಗೆ ಮತ್ತೆ ಮನೆಯ ಮೇಲೆ ಕಲ್ಲುಗಳು ಬಿದ್ದವು. ಕಲ್ಲು ಎಸೆಯುವವರು ಯಾರೆಂದು ಹೊರಗೆ ಬಂದರೆ ಕಣ್ಣಿಗೆ ಯಾರೂ ಕಾಣಿಸರು. ಒಳಗೆ ಬಂದರೆ ಮತ್ತೆ ಕಲ್ಲು. ಕಲ್ಲುಗಳು ಎತ್ತ ಕಡೆಯಿಂದ ಬರುತ್ತಿವೆಯೆಂದು ಪತ್ತೆ ಮಾಡುವುದೂ ಕಷ್ಟವಾಯಿತು. ಯಾಕೆಂದರೆ ಅವರ ಮನೆಯ ಸುತ್ತಲೂ ಬೇವಿನ ಮರಗಳು. ಮಾರನೆಯ ದಿನ ಕಲ್ಲು ಬಿದ್ದಾಗ ನಾಲ್ಕೈದು ಹಂಚು

ಗಳು ಒಡೆದು ಹೋಗಿ ಹಂಚಿನ ಚೂರುಗಳು ಮನೆಯೊಳಕ್ಕೆ ಬಿದ್ದಿದ್ದವು. ಸದ್ಯ ಯಾರಿಗೂ ಗಾಯವಾಗಲಿಲ್ಲ.

ಕಿಟ್ಟಣ್ಣನ ಅಕ್ಕಪಕ್ಕದ ಮನೆಗಳೂ ಹಂಚಿನ ಮನೆಗಳು ಆಗಿದ್ದರೂ ಕಲ್ಲುಗಳು ಯಾರ ಮನೆಯಮೇಲೂ ಬೀಳದೆ ತಮ್ಮ ಮನೆಯಮೇಲೆ ಬೀಳಲು ಕಾರಣವೇನು ? ಎಂದು ಕಿಟ್ಟಣ್ಣ ಶಾರದೆಯರಿಗೆ ಸಂಶಯ ಉತ್ಪನ್ನವಾಯಿತು. ಯಾರೋ ಯಾವುದೋ ಕಾರಣಕ್ಕಾಗಿ ಈ ಕೆಲಸ ಮಾಡುತ್ತಿದ್ದಾರೆ. ಇದರ ಮೂಲವನ್ನು ಶೋಧಿಸಿ ಬಿಡಬೇಕೆಂದು ನಿಶ್ಚಯಿಸಿದರು. ಶಾರದೆಯ ಮನೆಯ ಮೇಲೆ ಕಲ್ಲು ಬೀಳುವುದನ್ನು ಕಂಡು ಅಕ್ಕಪಕ್ಕದವರು “ ಎಲ್ಲಾ ದೆಯ್ಯದ ಚೇಷ್ಟೆ. ಶಾರದೆಯನ್ನು ಶಿಕ್ಷಿಸಲು ದೇವರು ತನ್ನ ಭೂತಗಣವನ್ನು ಬಿಟ್ಟಿದ್ದಾನೆ ” ಎಂದು ಕಥೆ ಕಟ್ಟಿದರು.

ಶಿಲಾವರ್ಷ ತಡೆಯಿಲ್ಲದೆ ಐದು ದಿನ ನಡೆಯಿತು. ಪ್ರತಿದಿನವೂ ಇಷ್ಟೇ ಹೊತ್ತಿಗೆ, ಇಷ್ಟೇ ಸಲ, ಇಷ್ಟೇ ಕಲ್ಲು ಎಂದು ಹೇಳುವಷ್ಟು ನಿಯಮಬದ್ಧವಾಗಿ ನಡೆಯುತ್ತಿತ್ತು. ಆರನೆಯ ದಿನ ಕಿಟ್ಟಣ್ಣ ಈ ಶಿಲಾವರ್ಷದ ರಹಸ್ಯವನ್ನು ಪತ್ತೆ ಮಾಡಬೇಕೆಂಗು ನಾಲ್ಕೈದು ಮಂದಿ ಗೆಳೆಯರನ್ನು ಕಟ್ಟಿಕೊಂಡು ಮನೆಗೆ ಬಂದ. ಅವರಲ್ಲಿ ಒಬ್ಬೊಬ್ಬರಲ್ಲಿ ಒಂದೊಂದು ಟಾರ್ಚು ಹಾಗೂ ಒಂದು ದೊಣ್ಣೆ ಇರತಕ್ಕದ್ದೆಂದು ನಿಶ್ಚಯವಾಯಿತು. ಗೆಳೆಯರು ಅಂದು ಕಿಟ್ಟಣ್ಣನ ಮನೆಯಲ್ಲಿಯೇ ಊಟ ಮಾಡಿ, ಕಲ್ಲು ಬೀಳುವ ಹೊತ್ತಿಗಿಂತ ಅರ್ಧ ಗಂಟೆ ಮುಂದಾಗಿ ಮನೆಯ ಹಿಂದೆ ಇದ್ದ ಬೇವಿನ ಮರಗಳ ಅಡಿಯಲ್ಲಿ ದಿಕ್ಕಿಗೊಬ್ಬರಂತೆ ಅಡಗಿಕೊಂಡರು. ರಾತ್ರಿ ಹತ್ತೂವರೆ ಗಂಟೆಗೆ ಮನೆಯ ದೀಪವಾರಿಸಿ ಎಲ್ಲರೂ ಮಲಗಿದ್ದಾರೆ ಎನ್ನುವ ಭ್ರಮೆ ಹುಟ್ಟಿಸಿದ್ದೂ ಆಯಿತು. ಇನ್ನೇನು ಕಲ್ಲು ಬೀಳುವ ಸಮಯ. ಎಲ್ಲರೂ ಕಿವಿ ನಿಮಿರಿಸಿ, ಉಸಿರಾಡದೆ ಕುಳಿತರು. ದೂರದಲ್ಲಿ ತರಗೆಲೆಯ ಮೇಲೆ ಯಾರೋ ನಡೆದು ಬರುವಂತೆ ಆಯಿತು. ಮನೆಯ ಪಶ್ಚಿಮ ದಿಕ್ಕಿನಲ್ಲಿದ್ದ ಕಿಟ್ಟಣ್ಣನಿಗೆ ಹೆಜ್ಜೆಯ ಸಪ್ಪಳ ಚೆನ್ನಾಗಿ ಕೇಳಿಸಿತು. ಅವನು ತುಂಬಾ ಎಚ್ಚರ ವಹಿಸಿ ಕುಳಿತ.

ದೂರದಲ್ಲಿ ಬರುತ್ತಿದ್ದ ವ್ಯಕ್ತಿ ಮನೆಯ ಬಳಿ ಸಾರಿ ಅತ್ತ ಇತ್ತ ಕ್ಷಣ ಕಾಲ ನೋಡಿ ಅನಂತರ ಸಣ್ಣದೊಂದು ಕಲ್ಲನ್ನು ತೆಗೆದುಕೊಂಡು ಎಸೆದ. ಕಲ್ಲು ‘ ಟಣ್ ’ ಎನ್ನುತ್ತಾ ಹಂಚಿನ ಮೇಲೆ ಬಿತ್ತು. ಮನೆಯಲ್ಲಿ ಗದ್ದಲ

ವಾಗಲೀ, ದೀಪಗಳಾಗಲೀ ಕಾಣಿಸಲಿಲ್ಲ.

ಹಂಚಿನ ಮೇಲೆ ಮತ್ತೊಂದು ಕಲ್ಲು ಬಿತ್ತು. ಮನೆಯಲ್ಲಿ ದೀಪಹೊತ್ತಿಕೊಳ್ಳಲಿಲ್ಲ. ಆ ವ್ಯಕ್ತಿ ಮೂರನೆಯ ಕಲ್ಲನ್ನು ಇನ್ನೇನು ಬೀಸಬೇಕೆಂದಿರುವಾಗ ಕಿಟ್ಟಣ್ಣ 'ಟಾರ್ಚ' ನ್ನು ಆ ವ್ಯಕ್ತಿಯ ಮುಖಕ್ಕೆ ಬಿಟ್ಟು 'ಹಿಡಿಯಿರಿ, ಹಿಡಿಯಿರಿ' ಎಂದು ಕೂಗಿದ. ನಾಲ್ಕೂ ಕಡೆಯಿದ್ದ ಗೆಳೆಯರು ಕೂಗು ಬಂದ ಕಡೆ ಟಾರ್ಚು ಬಿಟ್ಟರು. ಆ ವ್ಯಕ್ತಿ ಎತ್ತಿದ್ದ ಕಲ್ಲನ್ನು ಕಿಟ್ಟಣ್ಣನ ಕಡೆಗೆ ಎಸೆದು ಕಾಲಿಗೆ ಬುದ್ಧಿ ಹೇಳಿದ. ಕಿಟ್ಟಣ್ಣನ ಪುಣ್ಯ ದೊಡ್ಡದು. ಕಲ್ಲು ಅವನಿಗೆ ಬಡಿಯಲಿಲ್ಲ. ಕೊಂಚದರಲ್ಲೇ ಗುರಿ ತಪ್ಪಿ ಹೋಗಿತ್ತು. ಗೆಳೆಯರು ಕಳ್ಳನ ಹಿಂದೆ ಕೂಗುತ್ತಾ ಓಡಿದರು. ಕಳ್ಳ ತನಗಿನ್ನು ಉಳಿಗಾಲವಿಲ್ಲವೆಂದುಕೊಂಡು ಪ್ರಾಣದ ಮೇಲೆ ಆಸೆ ಬಿಟ್ಟು ಓಡಿದ........ಓಡಿದ.

ಅವನಿಗೂ ಹಿಂಬಾಲಕರಿಗೂ ಸುಮಾರು ಒಂದೂವರೆ ಫರ್ಲಾಂಗು ಅಂತರವೇ ಉಳಿಯಿತು. ಅವನು ತನ್ನ ಕೈಗೆ ಸಿಕ್ಕುವುದಿಲ್ಲ ಎಂದುಕೊಳ್ಳುವ ಹೊತ್ತಿಗೂ ಗೆಳೆಯರ ಬೊಬ್ಬೆ ಕೇಳಿ ಬೀಟಿಗೆಂದು ಬಂದಿದ್ದ ಪೋಲೀಸಿನವನೊಬ್ಬ ಕಳ್ಳನಿಗೆ ಅಭಿಮುಖವಾದ ದಿಕ್ಕಿನಲ್ಲಿ ಓಡುತ್ತಾ ಬರುವುದಕ್ಕೂ ಸರಿ ಹೋಯಿತು. ಕಳ್ಳನಿಗೆ ಪೋಲೀಸಿನವನನ್ನು ಕಂಡು ಬೇರೇನೂ ಮಾಡಲು ತೋಚದೆ ಅವನ ಕಡೆಗೆ ಕೈಯ್ಯಲ್ಲಿದ್ದ ದೊಣ್ಣೆಯನ್ನು ಎಸೆದ. ಅದು ಬಹು ದೂರ ಹೋಗಲಿಲ್ಲ. ಪೋಲೀಸಿನವನು ಸಿಡಿಲಿನಂತೆ ಬಂದು ಕ್ಷಣಮಾತ್ರದಲ್ಲಿ ಕಳ್ಳನನ್ನು ನೆಲಕ್ಕೆ ಕೆಡವಿಯೇ ಬಿಟ್ಟ. ಆ ವೇಳೆಗೆ ಗೆಳೆಯರೂ ಕಳ್ಳನನ್ನು ಮುತ್ತಿದರು.

ಕಳ್ಳನನ್ನು ಮಲ್ಲೇಶ್ವರದ ಪೋಲಿಸ್ ಠಾಣೆಗೆ ಕರೆದೊಯಿದರು. ಮೊದಲು ಒಳ್ಳೆಯ ಮಾತಿನಲ್ಲಿ ಕೇಳಿದಾಗ ಕಳ್ಳ ತನಗೇನೂ ತಿಳಿಯದೆಂದು ಹೇಳಿದ. ಪೋಲೀಸ್ ಲಕ್ಷದಿಂದ ಒಂದು ಲಾತ ಬೀಳುವುದೇ ತಡ—ಬಾಯಿ ಬಿಟ್ಟ. ಅವನು ಹೇಳಿದ ಸುದ್ದಿ ಕೇಳಿ ಕಿಟ್ಟಣ್ಣನಿಗೆ ಕ್ಷಣಕಾಲ ಕೈಕಾಲು ಆಡಲೇಯಿಲ್ಲ. ಕಳ್ಳನಿಗೆ ಈ ಮೊದಲು ಹೆದರದೇ ಇದ್ದವನು ಈಗ ಹೆದರಿದ. ಅಂತಹ ಭಯಂಕರ ವರದಿ ಕಳ್ಳ ಒಪ್ಪಿಸಿದ್ದ.

ಕಳ್ಳನನ್ನು ಕಿಟ್ಟಣ್ಣನ ಮೇಲೆ ಛೂ ಬಿಟ್ಟವರು ಬೇರಾರೂ ಆಗಿರದೆ ರಾಮಚಂದ್ರನೇ ಆಗಿದ್ದ. ಈ ಖದೀಮನಿಗೆ ರಾಮಚಂದ್ರ ಹತ್ತಿಪ್ಪತ್ತು

ರೂಪಾಯಿ ತಿನ್ನಿಸಿ, ಕಿಟ್ಟಣ್ಣನ ಮೇಲೆ ಆಕ್ರಮಣಕ್ಕೆ ಬಿಟ್ಟಿದ್ದ. ಮೊದಲು ಮನೆಯ ಮೇಲೆ ಕಲ್ಲೆಸೆದು, ಮನೆಯಲ್ಲಿರುವವರನ್ನು ಮನೆಯಿಂದ ಹೊರಗೆ ಬರಮಾಡುವುದು. ಅನಂತರ ಅವರಿಗೆ ದೊಣ್ಣೆಯಿಂದ ಹೊಡೆದು ಕೈಕಾಲುಗಳನ್ನು ಮುರಿದು ಹಾಕುವುದು. ಇದು ಕಳ್ಳನಿಗೆ ರಾಮಚಂದ್ರ ಇತ್ತಿದ್ದ ಆಣತಿ. ಈ ಮತಿಗೇಡಿ ಹತ್ತಿಪ್ಪತ್ತು ರೂಪಾಯಿಗಳ ಆಸೆಗೆ ಬಲಿಯಾಗಿ ಕಿಟ್ಟಣ್ಣನ ಕೊಲೆಗೆ ಕೈಹಚ್ಚಿದ್ದ.

ಕಳ್ಳ ಪೋಲೀಸ ಠಾಣೆಯಲ್ಲಿಯೇ ರಾತ್ರಿಯನ್ನು ಕಳೆದ. ಕಂಪ್ಲೇಂಟು ಬರೆದು ಕೊಡಲು ಪೋಲೀಸು ಇನ್ಸ್ಪೆಕ್ಟರು ಕಿಟ್ಟಣ್ಣನನ್ನು ಕೇಳಿದಾಗ ಬೆಳಗಾಗಲಿ ಎಂದು ಹೇಳಿ ಮನೆಗೆ ಬಂದಿದ್ದ. ಹೆಂಡತಿಗೆ ನಡೆದ ವಿಷಯವನ್ನು ಹೇಳಿದಾಗ ಅವಳ ಮೈ ಕೈ ಯೆಲ್ಲಾ ಥರಥರನೆ ನಡುಗಿದವು. ಶಾರದೆ ರಾಮಚಂದ್ರ ಒಮ್ಮೆ ಮಾಂಗಲ್ಯ ಕಿತ್ತುಕೊಂಡಿದ್ದು ಸಾಲದೆ ಮತ್ತೆ ಮಾಂಗಲ್ಯ ಕಿತ್ತುಕೊಳ್ಳುವ ಸಂಚು ಮಾಡಿದ ಸುದ್ದಿಯನ್ನುಅವಳ ಕಿವಿ ನಂಬದಾಯಿತು. ರಾಮಚಂದ್ರ ಇಷ್ಟೊಂದು ಪತಿತನಾಗಿದ್ದಾನೆಯೇ ? ಇಷ್ಟು ಮತಿಗೇಡಿಯಾಗಿದ್ದಾನೆಯೇ? ದಯೆ, ಧರ್ಮ, ಮಾನಮರ್ಯಾದೆ, ವಿವೇಕ ಯಾವುದೂ ಇಲ್ಲದ ಕ್ಷುದ್ರಜಂತು ಅವನಾದನೇ ಎಂದು ಅವನ ಬಗ್ಗೆ ತುಂಬಾ ಸಂತಾಪವಾಯಿತು ಶಾರದೆಗೆ.

"ಶಾರದ ಪೋಲೀಸಿನರು ರಾಮಚಂದ್ರನ ಮೇಲೆ ಕಂಪ್ಲೇಂಟು ಕೊಡಲು ನನ್ನನ್ನು ಕೇಳುತ್ತಿದ್ದಾರೆ. ನಾನು ಕಂಪ್ಲೇಂಟು ಕೊಟ್ಟರೆ ಅವನನ್ನು ಹಿಡಿದು ಬಕ್ಕೆಯಲ್ಲಿ ಹಾಕುತ್ತಾರೆ. ಖೂನಿ ಮಾಡಲು ಪ್ರೇರೇಪಿಸಿದ ಆರೋಪ ಅವನದಾಗುತ್ತದೆ. ಇದು ನಿರ್ಧರಿಸಲ್ಪಟ್ಟರೆ, ಅವನಿಗೆ ಏಳೆಂಟು ವರ್ಷಗಳ ಸಶ್ರಮ ಶಿಕ್ಷೆ—ಇದು ಖಂಡಿತ " ಎಂದ.

" ನೀವು ಏನು ಮಾಡಲು ಬಯಸುತ್ತೀರಿ ? "

" ನೀನು ಹೇಗೆ ಮಾಡು ಅಂತ ಹೇಳಿದರೆ ಹಾಗೆ "

" ನನ್ನ ಮಾತನ್ನು ನೀವು ನಡೆಸಿಕೊಡುತ್ತೀರಾ ? "

" ಖಂಡಿತವಾಗಿಯೂ "

" ನಾವು ಕಂಪ್ಲೇಂಟು ಕೊಡುವುದು ಬೇಡ! "

" ಈ ಮಾತುಕೇಳಿ ಕಿಟ್ಟಣ್ಣನಿಗೆ ಆಶ್ಚರ್ಯವಾಯಿತು.

" ಅವನಂತೂ ಮನುಷ್ಯನಾದವನು ಮಾಡಬಾರದ ಕೆಲಸಮಾಡಿ ಪಶು ವೆನಿಸಿಕೊಂಡ, ನಾವು ಪಶುವಿನ ಮೇಲೆ ಕೈ ಎತ್ತುವುದು ಧರ್ಮವಲ್ಲ. ಮತಿ ಗೇಡಿಯಾಗಿ ಅವನು ಮಾಡಿದ ಅಪರಾಧವನ್ನು ನಾವು ಮನ್ನಿಸಿಬಿಡೋಣ. ಹಿಂಸೆಗೆ ಪ್ರತಿಹಿಂಸೆ, ಅನ್ಯಾಯಕ್ಕೆ ಅನ್ಯಾಯ ಬಗೆಯುವುದರಿಂದ, ಮಾನವನ ದೈವಿಕಗುಣ ಉತ್ಕರ್ಷವಾಗದೆ ಅದು ಅವನ ಅಧೋಗತಿಗೆ ಹೇತುವಾಗುತ್ತದೆ. ಬೇಡ. ಅವನು ಪಶುವಾಗಿಯೇ ಉಳಿದುಕೊಳ್ಳಲಿ. ನಾವು ಮಾತ್ರ ಮಾನವ ರಾಗಿ ಬದುಕೋಣ! " ಎಂದಳು ಶಾರದೆ.

" ಹಾಗೇ ಆಗಲಿ " ಎಂದ ಕಿಟ್ಟಣ್ಣ.

ಪೋಲೀಸಿನವರು ಜೆಳಿಗ್ಗೆ ಕಂಪ್ಲೇಂಟು ಬರೆದುಕೊಡಲು ಕೇಳಿದಾಗ ತಾನು ಕಳ್ಳನನ್ನು ಕ್ಷಮಿಸಿ ಬಿಟ್ಟಿರುವದಾಗಿ ತಿಳಿಸಿದ ಪೋಲೀಸ್ ಇನ್ಸ್ಪೆಕ್ಟರು ಈ ಮಾತನ್ನು ಕೇಳಿ ಮಾತಿಲ್ಲದಾದ ಅವನಿಗೆ ಕಿಟ್ಟಣ್ಣ ಅನ್ಯಾಯವಾಗಿ ಸೊಗ ಸಾದ ಖೂನಿಯ ಕೇಸನ್ನು ಕೆಡಿಸುತ್ತಿದ್ದಾನಲ್ಲಾ ಎಂದು ಹೊಟ್ಟೆಯ ದುಃಖ. ಕಂಪ್ಲೇಂಟು ಸಾಧ್ಯವೇ ಇಲ್ಲವೆಂದು ಹೇಳಿ ಕಿಟ್ಟಣ್ಣ ಹೊರಟು ಹೋದಮೇಲೆ– ಫಿರ್ಯಾದುದಾರ ನಿಲ್ಲದ ಮೇಲೆ–ಕೇಸೆಲ್ಲಿ ? ಎಂದುಕೊಂಡು ಕಳ್ಳ ಕೋರಮನಿಗೆ ನಾಲ್ಕು ಏಟು ಹಾಕಿ, ಬುದ್ಧಿಯಿಂದ ಇರಲು ಹೇಳಿ ಸ್ಟೇಷನ್‌ನಿಂದ ಬಿಟ್ಟು ಬಿಟ್ಟರು. ಅವನು ಕಿಟ್ಟಣ್ಣನ ಮನೆಗೆ ಬಂದು ಅವನ ಕಾಲು ಹಿಡಿದುಕೊಂಡು ' ತಾನು ಮಾಡಿದುದು ತಪ್ಪಾಯಿತು ' ಎಂದು ಅವನ ಕ್ಷಮೆಬೇಡಿದ. ತನ್ನ ಮೇಲೆ ಒಂದು ಮಾತನ್ನು ಪೋಲೀಸರಿಗೆ ಬರೆದುಕೊಟ್ಟು ಬಿಟ್ಟಿದ್ದರೆ ಕೋರ್ಟಿ ನಲ್ಲಿ ವಿಚಾರಣೆಯಾದಾಗ ಅಂಗಡಿಯ ಕಳ್ಳತನವೂ ಹೊರಬಿದ್ದು ಹತ್ತೆಂಟು ವರ್ಷ ತಾನು ಜೈಲಿನಲ್ಲಿ ಕೊಳೆಯಬೇಕಾಗಿತ್ತೆಂಬುದನ್ನು ಪೋಲೀಸರ ಸಾನಿಧ್ಯ ದಲ್ಲಿ ತಿಳಿದುಕೊಂಡಿದ್ದ. ಅವನನ್ನು ಕಂಡು ಕಿಟ್ಟಣ್ಣನಿಗೆ ಕನಿಕರವಾಯಿತು. ಶಾರದೆ ಹೇಳಿದ್ದಮಾತನ್ನುನೆನಪಿಗೆ ತಂದುಕೊಂಡ. ಹಿಂಸೆಗೆ ಪ್ರತಿಹಿಂಸೆ ಮಾಡಿ ದ್ದರೆ ಈ ಕಳ್ಳ ಕೊರಮ ಹೀಗೆ ಪಶ್ಚಾತ್ತಾಪ ಪಡುತ್ತಿದ್ದನೇ ?

ಈಚಿನ ಘಟನೆಯಿಂದ ಶಾರದೆಯ ಮನಸ್ಸು ತುಂಬಾ ಕೆಟ್ಟುಹೋಗಿತ್ತು. ಕೆಲಸ ಬೇರೆ ಎಲ್ಲೂ ಸಿಕ್ಕದೆ ಬೇಸರಪಡಿಸಿತ್ತು. ಒಂದು ದಿನ ಅವಳು ಕಿಟ್ಟಣ್ಣ ನಿಗೆ ಹೇಳಿದಳು.

" ನೀವು ಹೋಗಿ ಮಡಕೇರಿ ಕೆಲಸಕ್ಕೆ ಒಪ್ಪಿಗೆ ಕೊಟ್ಟುಬನ್ನಿ"

ಕಿಟ್ಟಣ್ಣನಿಗೂ ರಾಮಚಂದ್ರನಂತಹ ಹಿತಶತ್ರುವಿನ ಹತ್ತಿರ ಇರುವುದು ಯಾವಾಗಲೂ, ಕೆಡಕೆಂದು ಅನಿಸಿತ್ತು. ಅಲ್ಲದೆ ಆ ಬಡಾವಣೆಯ ಸಂಕುಚಿತ ವಾತಾವರಣ ಅವನ ಮನಸ್ಸನ್ನು ಕದಡಿತ್ತು. ಅವನು ಅಂದೇ ಹೋಗಿ ಮುದ್ದಣ್ಣನವರು ಹೇಳಿದ್ದ ಕೆಲಸಕ್ಕೆ ಒಪ್ಪಿಗೆಯಿತ್ತ.

ಹೊರಡುವುದೇನೋ ಸರಿ. ಮಕ್ಕಳನ್ನು ಏನು ಮಾಡಬೇಕು ? ಜತೆಗೆ ಕರೆದೊಯ್ಯಬೇಕೇ ? ಅಥವಾ ರಾಮಚಂದ್ರನ ವಶಕ್ಕೆ ಒಪ್ಪಿಸಿ ಹೋಗಬೇಕೇ? ಒಂದೆರಡು ದಿನಗಳ ಹಿಂದೆ ರಾಮಚಂದ್ರನಿಂದ ಮತ್ತೊಂದು ಪತ್ರ ಬಂದಿತ್ತು. ಅದರಲ್ಲಿ ಹುಡುಗರನ್ನು ತಾನು 'ಇಷ್ಟರಲ್ಲಿಯೇ' ಬಂದು ಕರೆದುಕೊಂಡು ಹೋಗುವ ವಿಷಯವನ್ನು ಮತ್ತೆ ಒತ್ತಿ ಬರೆದಿದ್ದ. ಹೀಗಿರುವಲ್ಲಿ ಹುಡುಗರನ್ನು ಏನು ಮಾಡಬೇಕು ?

"ನಮ್ಮ ಸಂಗಡಲೇ ಕರೆದುಕೊಂಡು ಹೋಗೋಣ. ಅವನು ನಮ್ಮನ್ನು ಹೆದರಿಸಲು ಹಾಗೆ ಬರೆದಿದ್ದಾನೆಯೇ ಹೊರತು ಖಂಡಿತವಾಗಿ ಮಕ್ಕಳನ್ನು ಬಳಿಗೆ ಕರೆಸಿಕೊಳ್ಳುವುದು ಅವನಿಗೆ ಬೇಕಿಲ್ಲ" ಎಂದ ಕಿಟ್ಟಣ್ಣ.

"ಮಕ್ಕಳ ಮೇಲಿನ ಮೋಹದಿಂದ ನಾವು ಆ ಕೆಲಸ ಮಾಡಿದರೆ ಆ ನೀಚ ನಮ್ಮನ್ನು ಹೋದೆಡೆಯಲ್ಲೆಲ್ಲಾ ಬೆನ್ನುಹತ್ತುತ್ತಾನೆ. ನನ್ನ ಗತಜೀವನದ ಸ್ಮೃತಿಯ ಕಿಂಕರರಾದ ಇವರು ನಮ್ಮೊಡನೆ ಇರುವಷ್ಟು ದಿನ ಅವನ ಸ್ಮರಣೆಯಿಂದ ನಮಗೆ ಕರಕರೆ ತಪ್ಪದು. ನಾವು ಅವನೊಡನೆ ಇರುವ ಎಲ್ಲ ಸಂಬಂಧವನ್ನೂ ಕಡಿದುಕೊಂಡು ಹೋಗುವಾಗ ಅವನದೆನ್ನುವ ಮಕ್ಕಳನ್ನು ಜತೆಯಲ್ಲಿ ಒಯ್ಯುವುದು ಶ್ರೇಯಸ್ಕರವಲ್ಲ. ಈಗ ನಾವು ಮನಸ್ಸನ್ನು ಕಲ್ಲಿಗಿಂತ ಕಲ್ಲುಮಾಡಿ ವರ್ತಿಸಬೇಕು. ಮಕ್ಕಳ ನಾಳಿನ ಉಜ್ವಲ ಭವಿಷ್ಯಕ್ಕಾದರೂ ನಾವು ಇಂದು ಕಠೋರವಾಗಿ ವರ್ತಿಸಬೇಕು" ಎಂದಳು ಶಾರದೆ.

"ಹಾಗಾದರೆ ಮಕ್ಕಳನ್ನು—ನಮ್ಮನ್ನೇ ನಂಬಿದ ಮಕ್ಕಳನ್ನು ಬೀದಿಯ ಭಿಕಾರಿಗಳನ್ನಾಗಿ ಮಾಡಿ ಹೋಗಬೇಕೇ ?"

"ಇಲ್ಲ. ಆ ಮಕ್ಕಳು ಯಾರಿಗೆ ಸೇರಬೇಕೋ ಅವರಿಗೆ ಸೇರಿಸಿ ಬಿಡೋಣ"

"ಅವನು ಅವುಗಳನ್ನು ಕೈಬಿಟ್ಟರೆ ಗತಿ ?"

ಶಾರದೆ ಕೊಂಚ ಆಲೋಚಿಸಿ ಹೇಳಿದಳು.

"ಅವರ ಅಜ್ಜಿಯ ಮನೆ ಸೇರಿಕೊಳ್ಳಲಿ"

"ಹಾಗಾದರೆ ನಮಗೂ ಅವರಿಗೂ ಇಂದಿಗೇ ಋಣತೀರಿತು!"

"ಹಾಗೆಂದು ತಿಳಿದು ನಾವು ಮುಂದುವರಿಯದಿದ್ದರೆ ಯಾರಿಗೂ ಉಳಿಗಾಲವಿಲ್ಲ."

ಕಿಟ್ಟಣ್ಣನಿಗೆ ಶಾರದೆ ಇಷ್ಟು ಕಠಿಣ ಹೃದಯಿಯಾಗುವಳೆಂದು ಈ ಮೊದಲು ತಿಳಿದಿರಲಿಲ್ಲ. ಇಂದು ಅವನಿಗೆ ಶಾರದೆಯ ಜೀವನದ, ಇದುವರೆಗೂ ಅಗೋಚರವಾಗಿದ್ದ ಹೊಸ ಪದರದ ಪರಿಚಯವಾಯಿತು. ಹೆಣ್ಣು ಕರುಣೆಯ ಮಹಾಕಾವ್ಯವಾಗಬಲ್ಲಿವಳು. ಮನಸ್ಸು ಮಾಡಿದರೆ ಮಹಾಕಾಳಿಯಷ್ಟೇ ಕಠಿಣ ಮನಸ್ಕಳೂ ಆಗುವಳೆಂಬ ವಿಷಯವನ್ನು ಮೊಟ್ಟಮೊದಲನೆಯಬಾರಿ ಅವನಿಗೆ ಗೋಚರಿಸಿತು. ಹೆಣ್ಣು ಅವನ ಕಣ್ಣಿಗೆ ಗಂಡಿನಕಾಲು ತುಳಿತಕ್ಕೆ ಸಿಕ್ಕಿದ ಅಬಲೆಯಾಗಿ ಕಾಣದೆ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣಗಳಾದ ಆದಿಶಕ್ತಿಯ ಅವರಾವತಾರವಾಗಿ ಕಂಡಳು.

ಶಾರದ ಆದಿಶಕ್ತಿಯಂತೆ ಸೃಷ್ಟಿ ಮಾಡಿದ್ದಳು—ತನ್ನ ಬಸಿರಿನ ರಕ್ತವನ್ನು ಬಸಿದು ಕೃಷ್ಣವೇಣಿ ಶ್ರೀಧರರನ್ನು ರೂಪಿಸಿದ್ದಳು.

ಆದಿಶಕ್ತಿಯಂತೆ ಸ್ಥಿತಿಕಾರ್ಯದಲ್ಲಿ ತೊಡಗಿ ಮಕ್ಕಳಿಬ್ಬರನ್ನು ಹತ್ತು ವರ್ಷಗಳ ಕಾಲ ಸಾಕಿ, ಸಹಿಸಿ, ದೊಡ್ಡವರನ್ನಾಗಿ ಮಾಡಿದ್ದಳು.

ಆದಿಶಕ್ತಿಯಂತೆ ಈಗ ಲಯಕಾರ್ಯಕ್ಕೂ ಕೈಯಿಕ್ಕಿದ್ದಳು. ತಾನು ಹೆತ್ತು ಹೊತ್ತು ಪೋಷಿಸಿದ ಮಕ್ಕಳನ್ನುಈಗ ಗಾಳಿಗೆ ತೂರಲು ಅವಳು ಸಿದ್ಧಳಾದಳು.

ಜಗನ್ಮಾತೆಯ ಅಂಶತ್ರಯಗಳನ್ನು ಪಡೆದಿರುವ ಶಾರದೆ—ಹೆಣ್ಣೇ? ಅಬಲೆಯೇ?

ಅಬಲೆ? ಹೆಣ್ಣನ್ನು ಅಬಲೆಯೆಂದು ತಿಳಿದು ಗಂಡು ಎಂತಹ ಮೂರ್ಖನಾಗಿದ್ದಾನೆ. ಮನಸ್ಸು ಮಾಡಿದರೆ ನಿಮಿಷಾರ್ಧದಲ್ಲಿ ದಹಿಸಿಬಿಡುವ ಬೆಂಕಿಯೊಡನೆ ಅರಿಯದ ಮಗುವಿನಂತೆ ಸರಸವಾಡುತ್ತಿದ್ದಾನೆ. ಹೆಣ್ಣು ಸೃಷ್ಟಿ, ಸ್ಥಿತಿ, ಕಾರ್ಯದಲ್ಲಿ ತೊಡಗಿದರೆ ಮಾತ್ರ ಗಂಡಿನ ಉಳಿವು. ಇಲ್ಲದಿದ್ದರೆ ಅವನ ಅಳಿವು. ಇದು ಖಂಡಿತ ಎಂದುಕೊಂಡ ಕಿಟ್ಟಣ್ಣ.

ಶಾರದೆಗೆ ತಾವು ಊರು ಬಿಡುವ ಹಿಂದಿನರಾತ್ರೆ ಮಕ್ಕಳ ನೆನಪಿನಲ್ಲಿ ನಿದ್ರೆಯೇ ಬರಲಿಲ್ಲ. ಹಾಸಿಗೆಯಲ್ಲಿ ಅತ್ತಿತ್ತ ಹೊರಳುತ್ತಾ ಮಕ್ಕಳ ಬಗ್ಗೆ

ನೂರೆಂಟು ಕನಸು ಕಟ್ಟಿ ಕಣ್ಣೀರಿಡುವಳು. ನಾಳೆ—ಇನ್ನು ಕೇವಲ ಇಪ್ಪತ್ತು ನಾಲ್ಕು ತಾಸುಗಳ ಅನಂತರ ಆ ಮಕ್ಕಳು ತನ್ನ ಭಾಗಕ್ಕೆ ಇಲ್ಲ. ಅವರಿಗೆ ಎಂತಹ ಭವಿಷ್ಯ ಕಾದಿದೆಯೋ ? ಯಾರು ಅವರನ್ನು ಕೈಹಿಡಿಯುತ್ತಾರೋ ಎಂದು ತನ್ನ ಜಾಣ್ಮೆಯನ್ನೆಲ್ಲಾ ವೆಚ್ಚಮಾಡಿ ಊಹಿಸಿ ನೋಡುವಳು. ಅವು ಗಳಲ್ಲಿ ಅವಳಿಗೇ ನಂಬಿಕೆಯಿಲ್ಲ. ಕಾಲಗರ್ಭದಲ್ಲಿ ಆ ಮಕ್ಕಳಿಗೆ ಏನು ಕಾದಿ ದೆಯೋ ಕಂಡವರು ಯಾರು ?

ತಾನು ಮಕ್ಕಳನ್ನು ರಾಮಚಂದ್ರನಿಗೆ ಒಪ್ಪಿಸಿಹೋಗುತ್ತಿದ್ದೇನೆ. ನಿಜ. ಅವನು ತನ್ನನ್ನು ನಿರ್ಲಕ್ಷಿಸಿಬಿಟ್ಟಂತೆ. ಆ ಮಕ್ಕಳನ್ನೂ ನಿರ್ಲಕ್ಷಿಸಿಬಿಟ್ಟರೆ ಗತಿ? ತಾನು ಆ ಮಕ್ಕಳ ತಾಯಿಯಾಗಿದ್ದುಕೊಂಡು ಎಂತಹ ಕೆಲಸ ಮಾಡುತ್ತಿದ್ದೇನೆ. ಆದರೆ ಕರ್ತವ್ಯ? ಮಕ್ಕಳು ತನ್ನೊಡನೆ ಇದ್ದರೆ ಗಿಡದ ಬೇರಿಗೆ ಅಂಟಿದ ಮಣ್ಣು ಅದು ಬೆಳೆದ ಸ್ಥಳವನ್ನು ನಿರ್ದೇಶಿಸುವಂತೆ ಆ ಮಕ್ಕಳ ಮುಂದಿನ ಭವಿಷ್ಯಕ್ಕೆ ತನ್ನಿಂದ—ಸಮಾಜದ ಕಣ್ಣಿನಲ್ಲಿ ಪಾಪಿಗಳಾದ ತನ್ನ ಮನೆಯಿಂದ ತೊಂದರೆ ಬರಬಹುದು. ಆದುದರಿಂದ ಕರುಳಿನ ಬಳ್ಳಿಯನ್ನು ಇಂದೇ ಕತ್ತರಿಸಿಕೊಂಡು ಹೋಗಬೇಕಾಗಿದೆ, ಎಂದು ತನ್ನ ಕೆಲಸವನ್ನು ಸಮರ್ಥಿಸಿಕೊಂಡು ಸುಮ್ಮ ನಾಗುವಳು. ಆದರೆ ಆ ಮಕ್ಕಳ ಮುದ್ದು ಮುಖ ಅವಳ ಕಣ್ಣಿಗೆ ಬಿದ್ದಾಗ ಅವಳ ನಿರ್ಧಾರ ಬದಲಾಗುವುದು. ಏನೂ ಅರಿಯದ ಕಂದಮ್ಮಗಳನ್ನು ಹೇಗೆ ಬಿಟ್ಟು ಹೋಗುವುದು? ಎಂದು ಅವಳಿಗೆ ಸಂಕಟವಾಗಿ ದುಃಖ ಒತ್ತರಿಸಿಕೊಂಡು ಬರುವುದು. ಮತ್ತೆ ಸಮಾಧಾನ. ಮತ್ತೆ ದುಃಖ........

ಆ ರಾತ್ರೆ ಶಾರದೆಯ ಭಾಗಕ್ಕೆ ಶಿವರಾತ್ರೆ ಜಾಗರಣೆ.

ಶಾರದ ಬೆಳಗಿನ ಜಾವಕ್ಕೆ ಎದ್ದು ನೀರೊಲೆ ಹೊತ್ತಿಸಿ, ಮಕ್ಕಳಿಗೆ ಅಭ್ಯಂಜನಸ್ನಾನಮಾಡಿಸಿ ಹೊಸಬಟ್ಟೆಗಳನ್ನು ತೊಡಿಸಿ,ಕಣ್ಣುತುಂಬಾ ನೋಡಿ ದಳು. ಅವರು ಸಾಕು ಸಾಕೆನ್ನುವತನಕ ಬಡಿಸಿದಳು. ಈ ದಿನದ ಉತ್ಸವ ದಲ್ಲಿ ಅವರೇ ಮುಖ್ಯ ಅತಿಥಿಗಳು. ಆ ದಿನ ಶಾರದ ಆ ಮಕ್ಕಳು ಏನು ಕೇಳಿ ದರೂ, ಅದನ್ನು ಕೊಂಡುಕೊಟ್ಟಳು. ಊಟವಾದ ಮೇಲೆ ಶಾರದೆ ಮಕ್ಕ ಳೊಡನೆ ಪಗಡೆಯಾಡಿ ಸಂತೋಷದಿಂದ ಸೋತಳು. ಮಗಳಿಗೆ ತಲೆ ಬಾಚಿ ಹೂಮುಡಿಸಿ, ಅಲಂಕರಿಸಿದಳು. ಅವಳಿಗೆ ಕಸೂತಿ ಹೇಳಿಕೊಟ್ಟಳು. ಅವ ಳಿಂದ ಒಂದೆರಡು ದೇವರ ನಾಮಹೇಳಿಸಿ ತಾನೂ ಒಂದೆರಡು ಹಾಡಿದಳು.

ಸಂಜೆ ಮಕ್ಕಳನ್ನು ಕಟ್ಟಿಕೊಂಡು ಸಿನೀಮಾ ತೋರಿಸಿಕೊಂಡು ಬಂದಳು. ಮಕ್ಕಳು ಆ ದಿನವೆಲ್ಲಾ ಉಲ್ಲಾಸದಿಂದಿದ್ದರು. ಅವರು ಚಿಗುರಿಯ ಮರಿಗಳಂತೆ ಆನಂದದಿಂದ ಕುಣಿದಾಡುತ್ತಾ ರಾತ್ರಿಯ ವೇಳೆಗೆ ದಣಿದು, ಸೋತು ನಿದ್ರಾವಶರಾದರು.

ನಿದ್ರೆಗೈಯ್ಯುತ್ತಿರುವ ಮಕ್ಕಳನ್ನು ಆ ದಂಪತಿಗಳು ಗಂಟೆಗಟ್ಟಲೆ ನೋಡುತ್ತಾ ಕುಳಿತರು. ಶಾರದೆಯಂತೂ ಒಂದೇ ಸಮನೆ ಕಣ್ಣೀರು ಸುರಿಸುತ್ತಾ ಕುಳಿತುಬಿಟ್ಟಿದ್ದಳು. ಅವಳ ಧ್ವನಿಗದ್ಗದಿತವಾಗಿ ಮಾತು ಹೊರಡುವ ಸ್ಥಿತಿಯಲ್ಲಿ ಇರಲಿಲ್ಲ.

" ಶಾರದ ನಾವು ಹೀಗೆ ಅಳುತ್ತಾ ಕುಳಿತರೆ ನಮ್ಮ ಇತರ ಕೆಲಸಗಳನ್ನು ಪೂರೈಸುವುದೆಂದು ? " ಎಂದ ಕಿಟ್ಟಣ್ಣ. ಶಾರದೆ ಪಾತ್ರೆ ಪದಾರ್ಥಗಳನ್ನು ಕಟ್ಟಲು ಎದ್ದಳು. ತಮ್ಮ ಪ್ರಯಾಣಕ್ಕೆ ಮಕ್ಕಳು ಅಡ್ಡಿಯಾಗುವರೆಂದು ಹೆದರಿ ಈಗ ಪ್ರಯಾಣ ಸನ್ನಾಹದಲ್ಲಿ ತೊಡಗಿದ್ದರು. ಶಾರದ ಹೆಚ್ಚಿನ ಗದ್ದಲಕ್ಕೆ ಅವಕಾಶಕೊಡದಂತೆ ಅವಶ್ಯಕವಾದ ಪಾತ್ರೆಗಳನ್ನು ತೆಗೆದುಕೊಂಡು ಉಳಿದವುಗಳನ್ನು ಮಕ್ಕಳಿಗೇ ಬಿಟ್ಟಳು. ಅನಂತರ ಮಗಳಿಗೊಂದು ಕಾಗದವನ್ನು ಬರೆದಿಟ್ಟಳು.

ನನ್ನ ಮುದ್ದುಗಳಿರಾ,

ಇಂದಿನಿಂದ ನಾನು ನಿಮ್ಮ ತಾಯಿಯಲ್ಲ. ತಾಯಿಯಾಗುವ ಅರ್ಹತೆ ನನ್ನಲ್ಲಿ ಇಲ್ಲ. ಏನೂ ತಿಳಿಯದ ಮಕ್ಕಳನ್ನು ಬೀದಿಯ ಪಾಲುಮಾಡುವ ತಾಯಿ ಅವಳು ಎಂತಹ ತಾಯಿ ? ಅದಕ್ಕೆ ನನ್ನ ಮೇಲೆ ಸಿಟ್ಟುಮಾಡಬೇಡ ಕಂದಾ! ಇಂದು ಕರ್ತವ್ಯದ ಕರೆಗೆ ಓಗೊಟ್ಟು ಮಾಡಬಾರದ ಕೆಲಸ ಮಾಡುತ್ತಿದ್ದೇನೆ. ನಾನು ಮಾಡುತ್ತಿರುವುದು ಸರಿಯೇ ತಪ್ಪೇ ಎನ್ನುವುದು ನೀವು ದೊಡ್ಡವರಾದಾಗ ತಿಳಿಯುತ್ತದೆ. ಈಗ ಆ ಮಾತು ಬೇಡ. ಕೃಷ್ಣವೇಣೀ! ನನ್ನತಾಯೀ, ಇನ್ನು ಮೇಲೆ ನೀನೇ ಶ್ರೀಧರನಿಗೆ ಎಲ್ಲ ಬಂಧುಬಳಗ. ಅವನನ್ನು ಸಮಾಧಾನಪಡಿಸುವ ಭಾರ ನಿನ್ನದು. ಅವನನ್ನು ಪ್ರೀತಿಯಿಂದ ಕಾಣು. ಬಹುಶಃ ನಿಮ್ಮ ತಂದೆಯವರು ಇಷ್ಟರಲ್ಲಿಯೇ ಬಂದು ನಿಮ್ಮನ್ನು ಕರೆದುಕೊಂಡು ಹೋಗಬಹುದು. ಅವರು ನಿಮ್ಮನ್ನು ತನ್ನ ಜತೆಯಲ್ಲಿ ಕರೆದುಕೊಂಡು ಹೋಗದೆ ಇದ್ದರೆ ನೀವು ನಿಮ್ಮ ಅಜ್ಜಿಯ ಊರು ಕೊರಟಿಗೆ ಹೋಗಿ

ಬಿಡಿ. ಅವರಿಗೂ ಕಾಗದ ಬರೆದಿದ್ದೇನೆ. ಅವರೇ ನಿಮ್ಮ ಈ ಆಪತ್ಕಾಲದಲ್ಲಿ ದಿಕ್ಕು. ಅವರು ಹೇಳಿದಂತೆ ಕೇಳಿಕೊಂಡು ಅವರಿಗೆ ಕೀರ್ತಿತನ್ನಿ!

ಹೋಗಿ ಬರುತ್ತೇನೆ ಕಂದಾ........ಭಗವಂತನೇ ನಿಮಗೆ ಇನ್ನು ತಾಯಿ ತಂದೆ. ನಾನು ಮಾಡಿರಬಹುದಾದ ತಪ್ಪನ್ನು ಕ್ಷಮಿಸು. ನಾನು ಎಲ್ಲಿದ್ದರೂ ಸದಾ ನಿನ್ನ ಹಿತಚಿಂತನೆಯಲ್ಲೇ ಇರುತ್ತೇನೆ.

ಸಿಟ್ಟುಮಾಡಬೇಡ ಚಿನ್ನಾ!

ಎಂದು ಮಾತು ಮುಗಿಸಿದ್ದಳು.

ಶಾರದೆ ತಾನು ಬರೆಯಬೇಕಾಗಿದ್ದ ಕಾಗದಗಳು—ರಾಮಚಂದ್ರನಿಗೊಂದು, ಅಜ್ಜಿಯ ಊರಿಗೆ ಒಂದು—ಬರೆದು ಮುಗಿಸಿ ಹಾಸಿಗೆಯನ್ನು ಕಾಣುವ ಹೊತ್ತಿಗೆ ರಾತ್ರೆ ಎರಡು ಗಂಟೆಯಾಗಿತ್ತು. ಹೊರಡುವ ವೇಳೆಯಲ್ಲಿ

ತೂಕಡಿಸಬಾರದೆಂದು ಹಾಸಿಗೆಯಲ್ಲಿ ತಲೆಯಿಟ್ಟಳು. ಆದರೆ ನಿದ್ರೆ ಹತ್ತಬೇಕಲ್ಲ ?

ನಸುಕು ಹರಿಯಿತು. ಕಿಟ್ಟಣ್ಣ ಗಾಡಿತರಲು ಹೊರಟ, ಶಾರದ ಮುಖ ತೊಳೆದುಕೊಂಡು ಕುಂಕುಮ ಇಟ್ಟುಕೊಳ್ಳುವಾಗ ಕೃಷ್ಣವೇಣಿಯ ಹಣೆಗೂ ಕುಂಕುಮವಿಟ್ಟು

" ಎಲ್ಲಿಯಾದರೂ ಸುಮಂಗಲಿಯಾಗಿ, ಚೆನ್ನಾಗಿ ಬಾಳು ಕಂದ. ನಾವು ನಿಮ್ಮ ಕೈಬಿಟ್ಟರೂ, ದೇವರು ನಿಮ್ಮ ಕೈಬಿಡದಿರಲಿ " ಎಂದು ಹರಸಿದಳು.

ಕಿಟ್ಟಣ್ಣ ಗಾಡಿಗೆ ಸಾಮಾನು ಹಾಕಿ ಬಂದರೂ ಶಾರದೆ ಮಕ್ಕಳ ಹಾಸಿಗೆಯನ್ನು ಬಿಟ್ಟು ಕದಲಿರಲಿಲ್ಲ. ಕಿಟ್ಟಣ್ಣ ಪಕ್ಕದಲ್ಲಿ ಕುಳಿತು

" ಇಂತಹ ಮಕ್ಕಳನ್ನು ಇಟ್ಟುಕೊಳ್ಳುವ ಪುಣ್ಯ ನಮಗಿಲ್ಲ " ಎಂದ.

ಶಾರದೆಯ ಕಣ್ಣಿನಲ್ಲಿದ್ದ ಹನಿ ಲಾಂದ್ರದ ಪ್ರಶಾಂತ ಬೆಳಕಿನಲ್ಲಿ ಥಳ ಥಳನೆ ಹೊಳೆಯಿತು.

ಹೊರಗೆ, ಗಾಡಿಯವನು ಬಂದು ಹೊತ್ತಾಯಿತೆಂದು ಚಡಪಡಿಸಿದ. ಕಿಟ್ಟಣ್ಣ ಮೆಲ್ಲನೆ ಮಕ್ಕಳ ತಲೆಸವರಿ, ಶ್ರೀಧರನ ಕೈಯಲ್ಲಿ ಅವನಿಗೆ ಎಚ್ಚರವಾಗದಂತೆ ಐದುರೂಪಾಯಿನ ನೋಟು ಇಟ್ಟ.

ಶಾರದೆ ಮೈಮೇಲೆ ಎಚ್ಚರವಿಲ್ಲದವಳಂತೆ ತೆಪ್ಪಗೆ ಕುಳಿತಿದ್ದಳು.

" ಶಾರದ ಇದು ಶೋಕಿಸುತ್ತಾ ಕೂಡುವ ಸಮಯವಲ್ಲ "

ಎಂದು ಕಿಟ್ಟಣ್ಣ ಮೆಲ್ಲನೆ ಅವಳನ್ನು ತಟ್ಟಿದ.

ಶಾರದೆ ಒತ್ತಿ ಬರುವ ದುಃಖವನ್ನು ತಡೆದುಕೊಂಡು ಮಕ್ಕಳಿಗೆ ಎಚ್ಚರ ವಾಗದ ರೀತಿಯಲ್ಲಿ ಮುತ್ತಿಟ್ಟು

" ನಾವಿನ್ನು ಹೋಗಿ ಬರುತ್ತೇವೆ ಕಂದ "

ಎಂದಳು. ಮರುಕ್ಷಣದಲ್ಲಿ,

" ನಾವು ನಿಮ್ಮ ಭಾಗಕ್ಕೆ ಅನಂತ ಅಪರಾಧ ಮಾಡುತ್ತಿದ್ದೇವೆ ಕಂದ. ನಮ್ಮ ತಪ್ಪನ್ನು ಕ್ಷಮಿಸಿ."

ಎಂದು ಬಡಬಡಿಸಿದಳು.

ಮಗು ಶ್ರೀಧರ ತಾಯಿಗೆ ಹೋಗಲು ಅನುಮತಿಕೊಡುವಂತೆ ನಿದ್ರೆ ಗಣ್ಣಿನಲ್ಲಿಯೇ ನಕ್ಕ. ಕನಸಿನ ಸೀಮೆಯ ಅದಾವ ಸಂಪತ್ತು ಅವನದಾಗಿತ್ತೋ!

ಗಾಡಿಯವನು ಹೊತ್ತಾಯಿತೆಂದು ಮತ್ತೊಮ್ಮೆ ಎಚ್ಚರಿಸಿದ. ಶಾರದೆ ದೀಪವನ್ನು ಆರಿಸಿ, ಬಾಗಿಲನ್ನು ಮುಂದುಮಾಡಿ, ಮನೆಯನ್ನು ಬಿಟ್ಟು ನಡೆ ದಳು. ನಾಲ್ಕು ಹೆಜ್ಜೆ ನಡೆದು ಮತ್ತೆ ಹಿಂದಿರುಗಿ ನೋಡಿದಾಗ ಕೃಷ್ಣವೇಣಿ ಅಳುವ ಧ್ವನಿ ಕೇಳಿಸಿತು. ಕನಸಿನಲ್ಲಿ ಏನು ಕಂಡು ಅತ್ತಳೋ ಯಾರಿಗೆ ಗೊತ್ತು ?

ಕುದುರೆ ಖುರಪುಟ ಧ್ವನಿಮಾಡಿತು. ಚಳಿಯಲ್ಲಿ ನಡುಗುತ್ತಿದ್ದ ಸಾಬಿ ಗೆ ಭದ್ರವಾಗಿ ಮಫ್ಲರ್ ಸುತ್ತಿ ' ಹೇಯ್ ' ಎಂದು ಕುದುರೆಯ ಮೇಲೆ ಟಿ ಆಡಿಸಿದ. ಊರನ್ನೆಲ್ಲಾ ಕಾವಳ ಮುಸುಕಿತ್ತು. ಬೀದಿಯ ದೀಪಗಳು ಕಾಗಿ ಉರಿಯುತ್ತಿದ್ದವು. ಹಾಗೆಯೇ ಗಾಡಿಯಲ್ಲಿದ್ದವರ ಮನಸ್ಸು ಮಂಕಾ ತ್ತು. ಕುದುರೆ ಓಡಿತು; ಕಾವಳದ ಕೋಟೆಯನ್ನು ಭೇದಿಸಿಕೊಂಡು ಮುನ್ನು ತು. ಆದರೆ ಒಳಗಿದ್ದವರ ಮನಸ್ಸು ಮಾತ್ರ ಇದ್ದಂತೆ ಇತ್ತು........

———